# ನಾಡಭೂಷಣ



ಸಂಪಾದಕರು :

ಡಾ|| ವಸಂತ ಪಾಟೀಲ

ಪ್ರೊ. ಎಸ್. ಎಸ್. ಭೂಸರಡ್ಡಿ

## ಪಂ. ನಾಗಭೂಷಣ ಶಾಸ್ತ್ರಿಗಳವರ ಕೃತಿಗಳು

### ಸ್ವಂತ ಕೃತಿಗಳು

೧) ಸೊಗಸಿನ ಬಾಳು
೨) ವೀರಶೈವ ತತ್ತ್ವ ಪ್ರವೇಶ
೩) ಭಾರತೀಯ ದರ್ಶನ ಸಮೀಕ್ಷೆ–ಭಾಗ ೧
೪) ವೀರಶೈವ ಧರ್ಮ ವಿವೇಚನೆ
೫) ಲಿಂಗಪೂಜೆ
೬) ಅಷ್ಟಾವರಣಗಳು
೭) ಅಣ್ಣನ ಆದರ್ಶ ಜೀವನ
… ಆದರ್ಶ ಜೀವನ

…ಂತ ಶಿವಯೋಗಿಗಳ ಚರಿತ್ರೆ

… ಚರಿತ್ರೆ

ಮೈಲಾರ ಶರಣರ ಕೃತಿಗಳು

…ಗ್ರಹ
…೧
…೨
…ವಚದ ಒಳಭಾಗದಲ್ಲಿ ಮುಂದುವರೆದಿದೆ)

## ಪಂ. ನಾಗಭೂಷಣ ಶಾಸ್ತ್ರಿಗಳವರ ಕೃತಿಗಳು

### ಸ್ವಂತ ಕೃತಿಗಳು

೧) ಸೊಗಸಿನ ಬಾಳು
೨) ವೀರಶೈವ ತತ್ತ್ವ ಪ್ರವೇಶ
೩) ಭಾರತೀಯ ದರ್ಶನ ಸಮೀಕ್ಷೆ–ಭಾಗ ೧
೪) ವೀರಶೈವ ಧರ್ಮ ವಿವೇಚನೆ
೫) ಲಿಂಗಪೂಜೆ
೬) ಅಷ್ಟಾವರಣಗಳು
೭) ಅಣ್ಣನ ಆದರ್ಶ ಜೀವನ
... ಆದರ್ಶ ಜೀವನ

...ಂತ ಶಿವಯೋಗಿಗಳ ಚರಿತ್ರೆ

...ಚರಿತ್ರೆ

### ಮೈಲಾರ ಶರಣರ ಕೃತಿಗಳು

...ಗ್ರಹ
...೧
...೨
...ವಚದ ಒಳಭಾಗದಲ್ಲಿ ಮುಂದುವರೆದಿದೆ)

# ನಾದಭೂಷಣ

ಶ್ರೀ ಶ್ರೀ ಶ್ರೀ ೧೦೮ ಜಗದ್ಗುರು
ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿ-
ಗಳವರು, ಜಂಗಮವಾಡಿಮಠ,
ವಾರಣಾಸಿ-
ಇವರಿಗೆ ಸಾಷ್ಟಾಂಗನಮಸ್ಕಾರಗಳೊಂದಿಗೆ
ಅರ್ಪಣೆ.
-ವ. ವಸಂತ ಪಾಟೀಲ

(ಪಂ. ನಾಗಭೂಷಣ ಶಾಸ್ತ್ರಿಗಳವರ
ಅಮೃತ ಮಹೋತ್ಸವದ ಅಭಿನಂದನ ಗ್ರಂಥ)

ಸಂಪಾದಕರು :
ಡಾ|| ವಸಂತ ಪಾಟೀಲ
ಪ್ರೊ. ಎಸ್. ಎಸ್. ಭೂಸರಡ್ಡಿ

ಅಭಿನಂದನ ಸಮಿತಿ,
ಮುರುಘಾಮಠ, ಮೃತ್ಯುಂಜಯ ನಗರ ಧಾರವಾಡ

**Nadabhushana**

A Felicitaion Volume of Pt. Nagabhushana Shastri. Edited by Dr. Vasant Patil and Prof. S. S. Bhusaraddi,
Karnatak University, Dharwad-3

Published by H. H. Mahant Swamiji Murughamath,
Dharwad-6





ಬೆಲೆ : ರೂ. ೫-೦೦

ಪ್ರತಿಗಳು : ೧೦೦೦

೧೯೮೨



ಮುದ್ರಕರು :
ಮಹಾಂತ ಪ್ರಿಂಟಿಂಗ್ ಪ್ರೆಸ್
ಮೃತ್ಯುಂಜಯ ನಗರ,
ಧಾರವಾಡ-೬

ಅಧ್ಯಕ್ಷರು, ಅಭಿನಂದನ ಸಮಿತಿ



ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರು
ಮುರುಘಾಮಠ, ಧಾರವಾಡ



ಅಖಿಲ ಭಾರತ ವೀರಶೈವ ಸಂಸ್ಕೃತ ವಿದ್ವತ್ ಪರಿಷತ್ತಿನಲ್ಲಿ
ಚಿತ್ರದುರ್ಗದ ಜಗದ್ಗುರುಗಳವರ ಸನ್ನಿಧಿಯಲ್ಲಿ ಸನ್ಮಾನ



ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರುಗಳವರಿಂದ
ಪ್ರಶಸ್ತಿ ಪ್ರದಾನ

## ಷಷ್ಟ್ಯಬ್ದ ಸಮಾರಂಭ



ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರುಗಳವರ, ಸನ್ನಿಧಿಯಲ್ಲಿ ಸಮಾಜದ ಪ್ರತಿಷ್ಠಿತ ಸ್ವಾಮಿಗಳವರೂ ಹಾಗೂ ಕ. ವಿ. ವಿ. ದ. ಹಿಂದಿನ ಉಪ ಕುಲಪತಿಗಳಾದ ಶ್ರೀ ಸದಾಶಿವ ಒಡೆಯರ, ಒಡೆಯರ ಶ್ರೀ ಶಿವದೇವ ಹಾಗೂ ಬಸವದರ್ಶನದ ಕರ್ತೃಗಳಾದ ಶ್ರೀ ಬಸವರಾಜ ತುಪ್ಪದ ಮುಂತಾದವರಿರುವರು.



ಪಂ. ನಾಗಭೂಷಣ ಶಾಸ್ತ್ರಿಗಳವರ
"ಶ್ರೀ ಮೃತ್ಯುಂಜಯ ನಿಲಯದ" ಉದ್ಘಾಟನೆ
ಪೂಜ್ಯ ಮಹಾಂತಪ್ಪಗಳವರಿಂದ

# ಸಂಪಾದಕೀಯ

ಶ್ರೀ ಮುರುಘಾಮಠದ ತ್ರಿವಿಧ ದಾಸೋಹ ಮೂರ್ತಿಗಳು ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳು ಆಗಿರುವ ಪೂಜ್ಯ ಮಹಾಂತಪ್ಪಗಳು ನಮ್ಮ ಸಮಾಜದ, ನಮ್ಮ ನಾಡಿನ ಮಹಾಭಾಗ್ಯ ಸ್ವರೂಪರೇ ಆಗಿರುವರೆಂಬುದು ಕನ್ನಡಿಗರಿಗೆಲ್ಲ ವಿದಿತವಾದ ಸಂಗತಿ.

ಪೂಜ್ಯರಾದ ಅಪ್ಪಗಳು ನಮ್ಮಿಬ್ಬರನ್ನು ಬರಮಾಡಿಕೊಂಡು ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವವನ್ನು ನೆರವೇರಿಸಬೇಕಾಗಿದೆ. ಪಂಡಿತ ಶಾಸ್ತ್ರಿಗಳವರ ಬಗೆಗೆ ಒಂದು ಅಭಿನಂದನ ಗ್ರಂಥ ಸಂಪಾಸಿದಿರಿ ಎಂದು ಅಪ್ಪಣೆ ಮಾಡಿದರು. ನಾವು ಬಹಳ ಸಂತೋಷದಿಂದ ಒಪ್ಪಿಕೊಂಡೆವು. ಕೂಡಲೇ ನಾಡಿನ ಗಣ್ಯ ಸಾಹಿತಿಗಳಿಗೆ ಪತ್ರ ಬರೆದು ಲೇಖನಗಳನ್ನು ತರಿಸಿಕೊಂಡೆವು. ಮುದ್ರಣ ಪ್ರಾರಂಭವಾಯಿತು. ಆದರೆ ಸಮಗ್ರ ಲೇಖನಗಳನ್ನು ಪ್ರಕಾರಗೊಳಿಸಲು ಕೆಲವು ಅನಿವಾರ್ಯ ಕಾರಣಗಳ ಮೂಲಕ ಆಗಲಿಲ್ಲ. ಪೂಜ್ಯರು ನಮಗೆ ವಹಿಸಿದ್ದನ್ನು ನಾವು ನಿಷ್ಠೆಯಿಂದ ಮಾಡಿದ್ದೇವೆ.

ಗ್ರಂಥಕ್ಕೆ ಲೇಖನ ಕಳಿಸಿಕೊಟ್ಟವರನ್ನು ಹಾಗು ಅದು ಅಚ್ಚಾಗಿ ಹೊರ ಬರಲಿಕ್ಕೆ ಅನುಗ್ರಹಿಸಿದ ಪೂಜ್ಯರು, ಮಹಾಸ್ವಾಮಿಗಳನ್ನು ನಾವು ತ್ರಿಕರಣಪೂರಕ ಅಭಿವಂದಿಸುವೆವು.

ಧಾರವಾಡ
೬–೧೨–೮೨

ಡಾ|| ವಸಂತ ಪಾಟೀಲ
ಪ್ರೊ. ಎಸ್. ಎಸ್. ಭೂಸರಡ್ಡಿ

# ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವ

## ಪೋಷಕರು

ರೂಪಾಯಿಗಳು

೧) ಶ್ರೀ ನಿ. ಪ್ರ. ಮಹಾಂತಪ್ಪಗಳವರು, ಮುರುಘಾಮಠ, ಧಾರವಾಡ ೩೦೫೧

೨) ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರು, ಸಂಸ್ಥಾನಮಠ,
ಚಿತ್ತರಗಿ–ಇಲಕಲ್ಲ ೧೧೦೧

೩) ಶ್ರೀ ನಿ. ಪ್ರ. ಶಿವಕುಮಾರ ಸ್ವಾಮಿಗಳವರು, ಸರ್ಪಭೂಷಣ,
ಬೆಂಗಳೂರು ೧೦೦೧

೪) ಶ್ರೀ ನಿ. ಪ್ರ. ಪ್ರಭುಸ್ವಾಮಿಗಳವರು, ಅನ್ನದಾನೇಶ್ವರಮಠ,
ಹಾಳಕೆರೆ ೧೦೦೧

# ಪರಿವಿಡಿ

## ಭಾಗ : ೧

**ಆಶೀರ್ವಚನ :**



**ಶುಭ ಸಂದೇಶ :**



## ಭಾಗ : ೨

**ಆತ್ಮಕಥನ :**



**ನಿವೇದನ :**

## ಭಾಗ : ೩

### ಸಮುಚ್ಚಯ :



## ಭಾಗ : ೪

### ವಿಮರ್ಶೆ :



## ಭಾಗ : ೫

### ಬಿನ್ನವತ್ತಳೆ :



---

# ಆಶೀರ್ವಚನ

ಹುಬ್ಬಳ್ಳಿ ಮೂರುಸಾವಿರಮಠದ
ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ
ರಾಜಯೋಗೀಂದ್ರ ಮಹಾಸ್ವಾಮಿಗಳವರಿಂದ

ಧಾರವಾಡ ಮುರುಘಾಮಠದ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಜರುಗಲಿರುವ ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವದ ಶುಭ ಸಂದರ್ಭದ ಸವಿನೆನಪಿಗಾಗಿ ಅಭಿನಂದನ ಗ್ರಂಥವನ್ನು ತರುವ ಸಂಗತಿ ತಿಳಿದು ನಮಗೆ ಪರಮ ಸಂತೋಷವಾಗಿದೆ.

ಭಾಷೆ ಮಾನವನ ಬುದ್ಧಿಯ ಕೂಸು. ಮಾನವನ ಬುದ್ಧಿ ಭಾಷೆಯ ತಾಯಿ ಭಾಷೆ ಸಂಪರ್ಕ ಸಾಧನ. ಸಂಸ್ಕೃತ ಭಾಷೆ, ಸಾಹಿತ್ಯ ನಮ್ಮ ಆರ್ಷೇಯ ಪರಂಪರೆಯ ದಿವ್ಯ ಕಾಣಿಕೆ. ಇಂಥ ಸಂಸ್ಕೃತದ ದಿಗ್ಗಜ ಪಂಡಿತರು ಬೆರಳ ಮೇಲೆಣಿಸುವಷ್ಟು ವಿರಳ. ಪಂಡಿತರ ಪ್ರಪಂಚದಲ್ಲಿ ಉತ್ತರ ಕರ್ನಾಟಕ ಭಾಗದಿಂದ ಪಂ. ನಾಗಭೂಷಣ ಶಾಸ್ತ್ರಿಗಳವರೊಬ್ಬರು.

"ಶಿವಾದ್ವೈತ ಸಿದ್ಧಾಂತ ರತ್ನ", "ಶಿವಸಿದ್ಧಾಂತ ರತ್ನ" ಮತ್ತು "ದರ್ಶನ ವಿಶಾರದ" ಮುಂತಾದ ಬಿರುದಾಂಕಿತರಾದ ಸಂಸ್ಕೃತ ಪಂಡಿತರಾದ ಇವರು ಶಿವಾದ್ವೈತ ಸಿದ್ಧಾಂತವನ್ನು ಘಟ್ಟಿಯಾಗಿ ಹೇಳುವ ದಿಟ್ಟಕುಳ.

ಇವರು ಆದರ್ಶ ಲೇಖಕರಾಗಿರುವರು. ಆರು ಪುಸ್ತಕಗಳನ್ನು ಬರೆದಿರುವರು. ಮೂವತ್ತಕ್ಕೂ ಸಂಪಾದನಾ ಕೃತಿಗಳನ್ನು ಹೊರತಂದಿರುವರು. "ಸಾವಧಾನ" ಪತ್ರಿಕೆಯ ಸಂಪಾದಕರಾಗಿ ಧರ್ಮ, ಸಂಸ್ಕೃತಿ, ಸಾಹಿತ್ಯ, ತತ್ತ್ವಪ್ರಚಾರ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ್ದಾರೆ. ಮಾಡುತ್ತಲಿದ್ದಾರೆ. ಸೀದಾ ಸಾದಾ ಜೀವನದಲ್ಲಿ ಪಾಂಡಿತ್ಯ ಪ್ರಭೆಯನ್ನು ತುಂಬಿಕೊಂಡಿದ್ದಾರೆ. 'ವಿದ್ಯಾ ದದಾತಿ ವಿನಯಂ' ಎಂಬ ಮಾನತಿ ನಿದರ್ಶನವನ್ನು ಇವರಲ್ಲಿ ಕಾಣಬಹುದು. ಎಲೆಯ ಮರೆಯ ಹೂವಿನಂತಿ

ರುವರು. ಇವರ ಪಾಂಡಿತ್ಯ, ಆಚಾರ ಸಂಪನ್ನತೆ, ಸಾತ್ವಿಕ ಜೀವನ ನಡೆ, ಪತ್ರಿಕಾ ವ್ಯವಸಾಯದಲ್ಲಿಯ ದಕ್ಷತೆಯನ್ನು ಕಂಡ ನಾಡಿನ ಜನತೆ ಕೃತಜ್ಞತಾಪೂರ್ವಕ ಅಭಿನಂದನಾ ಕಾರ್ಯವನ್ನು ನಡೆಸಿರುವದು ಶ್ಲಾಘನೀಯ. ಇದು ನಾಡ ಜನತೆಯ ಹೃದಯ ಸಂಸ್ಕೃತಿಯನ್ನು ಪ್ರಕಟಿಸುತ್ತದೆ.

ಪ್ರೊ. ವಸಂತ ಪಾಟೀಲ ಹಾಗೂ ಪ್ರೊ. ಎಸ್. ಎಸ್. ಭೂಸರಡ್ಡಿಯವರ ಸಮರ್ಥ ಸಂಪಾದಕತ್ವದಲ್ಲಿ ಈ ಕೃತಿ ಸುಂದರವಾಗಿ ಮೂಡಿ ಬಂದಿರುವದು.

ಶ್ರೀ ಶಾಸ್ತ್ರಿಗಳವರು ಶತಾಯುಷಿಗಳಾಗಲೆಂದು ತುಂಬು ಹೃದಯದಿಂದ ಹರಸುವೆವು.

ಕರ್ತೃ ಶ್ರೀ ಜಗದ್ಗುರು ಗುರುಸಿದ್ಧೇಶ್ವರರು ಸಕಲ ಸನ್ಮಂಗಲವನ್ನುಂಟು ಮಾಡಲೆಂದು ಬಯಸುವೆವು.

**ಶ್ರೀಮನ್ಮಹಾರಾಜ ನಿರಂಜನ ಜಗ್ಗದುರು ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಸಂಸ್ಥಾನಮಠ, ಡಂಬಳ ಮತ್ತು ಗದಗ—ಅವರಿಂದ**

"ಜೀವೇಮ ಶರದಃಶತಮ್" ಇದು ಉಪನಿಷದ್ವಾಣಿ. ಪರಹಿತಾರ್ಥವಾಗಿ ಎಷ್ಟುಕಾಲ ಬದುಕಿದರೂ ಕಡಿಮೆ. ಅಂತೆಯೇ ನೂರು ಕಾಲ ಬದುಕಲು ಶ್ರುತಿ ಆದೇಶಕೊಡುತ್ತಿದೆ.

ತನ್ನ ಆತ್ಮೋದ್ಧಾರದ ಜತೆಗೆ ಇತರರ ಆತ್ಮಚಿಂತನೆ ಬಹುಕಾಲವಿದ್ದು ಮಾಡಲೆಂಬುದೇ ಶತಾಯುಷಿಯಾಗಲೆಂಬುವರ ತಾತ್ಪರ್ಯ.

ಜೀವನ ಮೌಲ್ಯಗಳ ಉಳಿವಿಗಾಗಿ ಪರಿಶ್ರಮಿಸಿಹೋದ ಪುಣ್ಯಪುರುಷರ ಸ್ಮಾರಕೋತ್ಸವಗಳಿಗಿರುವಷ್ಟೇ ಮಹತ್ವ "ಷಷ್ಠ್ಯಬ್ದ" ಹಾಗೂ "ಸಪ್ತತ್ಯಬ್ದ" ಮಹೋತ್ಸವಗಳಿಗೂ ಇದೆ ಎಂದು ಧಾರಾಳವಾಗಿ ಹೇಳಬಹುದು. ಏಕೆಂದರೆ ಅಂಥವರಿನ್ನೂ ಬದುಕಿರುವಾಗಲೇ ಅವರನ್ನು ಅರ್ಥಮಾಡಿಕೊಂಡು ಗೌರವಿಸುವದರ ಮೂಲಕ ಅವರ ಸದುಪಯೋಗ ಮಾಡಿಕೊಳ್ಳುವದು ಸುಸಂಸ್ಕೃತ ಸಮಾಜದ ಜಾಗ್ರತ ಲಕ್ಷಣವೆಂದ, ಹೇಳಬಹುದು.

ಈ ದಿಶೆಯಲ್ಲಿ ನಡೆಯಲಿರುವ ಪಂ. ನಾಗಭೂಷಣಶಾಸ್ತ್ರಿಗಳವರ ಸಪ್ತತ್ಯಬ್ಧ ಮಹೋತ್ಸವ ಅತ್ಯಂತ ಯಥೋಚಿತವೆಂದು ನಮ್ಮ ಅಭಿಪ್ರಾಯ.

'ವಿದ್ಯಾ ವಿನಯೇನ ಶೋಭತೇ' ಎಂಬ ಉಕ್ತಿಗೆ ಪಂ. ನಾಗಭೂಷಣ ಶಾಸ್ತ್ರಿಗಳವರು ಜೀವಂತದೃಷ್ಟಾಂತವಾಗಿದ್ದಾರೆ. ಈಗಾಗಲೇ ಅವರು ತಮ್ಮ ಅಧ್ಯಯನ ಅಧ್ಯಾಪನಗಳಿಂದ ಗಳಿಸಿದ "ಶಿವಾದ್ವೈತ ರತ್ನ" ಮುಂತಾದ ಪದವಿಗಳಿಗಿಂತಲೂ ಅವರಲ್ಲಿ ಸ್ವಯಂ ಸಿದ್ಧವಾಗಿದ್ದ "ಸದುವಿನಯ"ವೇ ಅವರಿಗೆ ಸದಾಶಿವನ ಒಲುಮೆಯನ್ನು ತಂದುಕೊಟ್ಟಿದೆ.

ಪರಮಗುರು ಶ್ರೀ ಸಿದ್ಧಲಿಂಗೇಶನ ಕರಣೆಯಿಂದ ಶ್ರೀಯುತರು ನೂರು ಕಾಲ ಬಾಳಿ ಸಮಾಜಕ್ಕೆ ದಾರಿದೀಪವಾಗಲಿ ಎಂದು ಈ ಮೂಲಕ ಹಾರೈಸಲಾಗಿದೆ.

ಇತ್ಯಾಶಿಷಃ

### ಸೂರ್ಯಸಿಂಹಾಸನಾಧೀಶ್ವರ, ಡಾ|| ಶ್ರೀ ಜ. ಚ. ನಿ.
### ಶ್ರೀಶೈಲ ಸಂಸ್ಥಾನ, ಗೂಳೂರು—ಅವರಿಂದ

ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವ ಅಭಿನಂದನಾ ಗ್ರಂಥ ಉಗ್ಗಡಣೆಯ ಕಿರಿ ಓಲೆ ಬಂದಿದೆ, ಆನಂದ ತಂದಿದೆ. ಆಗತ್ಕ ಆಗಬೇಕಾದ ಕಾರ್ಯ. ಅವರ ಈ ದಿಸೆಯ ಸೇವೆ ಅಷ್ಟಿಷ್ಟಲ್ಲ; ಕಡೆಗಣ್ಣಿಂದ ಕಾಣುವಂತಹದಲ್ಲ. ಅವರ ಸೈದ್ಧಾಂತಿಕ ಪ್ರಜ್ಞೆಯ ಪ್ರಭೆ ಆ ಭಾಗದ ವಿಸ್ತ್ರತ ಪ್ರದೇಶದಲ್ಲಿ ಪ್ರಸರಣಗೊಂಡಿದೆ, ಭಾವುಕರ ಭಾವಭೂಮಿಕೆಯಲ್ಲಿ ಬೆಳ್ಳಂಬೆಳಗುತ್ತಿದೆ. ಅವರು ದೃಕ್ಕ್ರಿಯಾಭೂಷಣರು.

ಅವರು ನಮಗೂ ತುಂಬಾ ಮೆಚ್ಚಿನವರು. ಈ ಕಜ್ಜವನ್ನು ನೀವೆಲ್ಲ ಹಮ್ಮಿಕೊಂಡುದಕ್ಕೆ ನಮಗೂ ಹೆಮ್ಮೆಯೆನಿಸಿದೆ. ಹರುಷವೆಂಟಾಗಿದೆ.

### ಪೂಜ್ಯ ಶ್ರೀ ನಿ. ಪ್ರ. ಶ್ರೀ ಪ್ರಭುರಾಜೇಂದ್ರ ಮಹಾಸ್ವಾಮಿಗಳವರು
### ಶ್ರೀ ಅನ್ನದಾನೀಶ್ವರ ಸಂಸ್ಥಾನಮಠ, ಹಾಲಕೆರೆ ಅವರಿಂದ

ಪಂಡಿತರ, ಕಲಾವಿದರ, ಅನುಭಾವಿಗಳ ಯೋಗ್ಯತೆಯನ್ನು ಮನಗಂಡು, ಸಮಾಜವು ಅಂಥವರನ್ನು ಗೌರವಿಸುವದು ಪೂರ್ವಕಾಲದಿಂದಲೂ ನಾಡಿನಲ್ಲಿ ಪರಂಪರಾಗತವಾಗಿ ನಡೆದು ಬಂದ ವಿಷಯವೇ ಸರಿ. ಅದರಂತೆ ಹಾಲಕೆರೆಯ ಶ್ರೀಗುರು ಅನ್ನದಾನ ಮಹಾಸ್ವಾಮಿಗಳವರ ಗುರುಕರಸಂಜಾತರಾದ ಪ್ರಸ್ತುತ ಪಂ. ನಾಗಭೂಷಣ

ಶಾಸ್ತ್ರಿಗಳವರ ಅಮೃತ ಮಹೋತ್ಸವ ನಡೆಯಲಿರುವುದು ಇದೇ ರೀತಿಯಲ್ಲಾದರೂ, ಅದೊಂದು ವಿಶೇಷ ಹೇಳಬೇಕು.

ಶ್ರೀ ಶಾಸ್ತ್ರಿಗಳವರು ಬಾಲ್ಯದಾರಭ್ಯ ಕಾಪಾಡಿಕೊಂಡು ಬಂದ ತಮ್ಮ ಪವಿತ್ರ ಜೀವನ, ಅಧ್ಯಯನ, ಅಧ್ಯಾಪನ ಅಲ್ಲದೆ ಅವರ ಸ್ವಯಂಪರಿಪೂರ್ಣ ಅನುಭಾವವು ಅವರ ಅಮೃತ ಮಹೋತ್ಸವಕ್ಕೆ ಸಾಕ್ಷಿಯಾಗಿವೆಯೆಂದೇ ಹೇಳಬೇಕು.

ಶ್ರೀ ಶಾಸ್ತ್ರಿಗಳವರನ್ನು ನಾವು ಬಾಲ್ಯದಿಂದಲೂ ಬಲ್ಲವರಾಗಿದ್ದೇವೆ. ನಾವು ಶ್ರೀ ನಿ. ಪ್ರ. ಗುರುವರ್ಯ ಹಾಲಕೆರೆ ಅನ್ನದಾನೀಶ್ವರರ ವಟುಗಳಾಗಿ ಬಂದಾಗ, ಶ್ರೀ ಶಾಸ್ತ್ರಿಗಳವರು ತಮ್ಮ ಜನ್ಮ ಸ್ಥಳವಾದ ಸಂಗನಹಾಳದಿಂದ ಹಾಲಕೆರೆ ಅನ್ನದಾನೀಶ್ವರರ ಸ್ಮಾರಕ ಸಂಸ್ಕೃತ ಪಾಠಶಾಲೆಗೆ ವಿದ್ಯಾರ್ಥಿಯಾಗಿ ಬಂದವರು. ವಿದ್ಯಾರ್ಥಿದೆಶೆಯಲ್ಲಿಯೇ ಅವರು ಆದರ್ಶಪ್ರಾಯರಾಗಿದ್ದರು. ಉನ್ನತ ಅಧ್ಯಯನಕ್ಕಾಗಿ ೧೯೨೫ ರಲ್ಲಿ ಶ್ರೀಕ್ಷೇತ್ರ ಕಾಶಿಗೆ ಹೋದರು. ೧೯೨೬ ರಲ್ಲಿ ನಮ್ಮ ಗುರುಗಳಾದ ಹಾಲಕೆರೆ ಗುರುಅನ್ನದಾನೀಶ್ವರರು ಅನೇಕ ಜನ ಭಕ್ತರೊಡಗೂಡಿಕೊಂಡು ಕಾಶೀಯಾತ್ರೆಗೆ ದಯಮಾಡಿಸಿದಾಗ ನಾವು ಕೂಡ ಅವರೊಡನೆ ಅಲ್ಲಿಗೆ ಹೋಗಿದ್ದೆವು. ರೋಣದ ಗುಲಗಂಜಿಮಠದ ಲಿಂ. ಶ್ರೀ ನಿ. ಪ್ರ. ಶ್ರೀಗುರುಪಾದ ಮಹಾಸ್ವಾಮಿಗಳವರ ಸಲಹೆಯಂತೆ, ಚಿಕ್ಕಂದಿನಲ್ಲಿಯೇ ಅಧ್ಯಯನಕ್ಕೆ ಕಾಶಿಯಲ್ಲಿ ಇಟ್ಟರೆ ಒಳ್ಳೆಯದು ಎಂದು ನಿರ್ಧರಿಸಿ ಶ್ರೀ ಶಾಸ್ತ್ರಿಗಳವರಲ್ಲಿಯೇ ನಮ್ಮನ್ನು ಇರಿಸಿ ಬಂದರು. ಕೆಲವು ಕಾಲ ಕಳೆಯುವಷ್ಟರಲ್ಲಿ ನಮಗೆ ಅಲ್ಲಿಯ ಹವೆಯು ಹಿಡಿಸದ ಮೂಲಕ ಹಿಂತಿರುಗಿ ಬಂದೆವು. ಶ್ರೀ ಶಾಸ್ತ್ರಿಗಳವರು ಕಾಶಿಯಲ್ಲಿ ೫ ವರ್ಷಗಳ ಪರ್ಯಂತ ಇದ್ದು ಸಾಹಿತ್ಯ, ನ್ಯಾಯ, ವೇದಾಂತ, ತರ್ಕ ಮೊದಲಾದ ಶಾಸ್ತ್ರಗಳ ಅಧ್ಯಯನಮಾಡಿ ಪಂಡಿತ, ಪದವೀಧರರಾಗಿ ನಾಡಿಗೆ ಹಿಂತಿರುಗಿ ಬಂದ ಮೇಲೆ ಶಾಸ್ತ್ರಿಗಳವರ ವಂಶಪರಂಪರಾಗತವಾಗಿ ಬಂದ ಹಾಲಕೆರೆ ಅನ್ನದಾನೀಶ್ವರ ಸಂಸ್ಥಾನಮಠದ ಆಸ್ಥಾನ ಪಂಡಿತ ಸ್ಥಾನವನ್ನು ಪುನಃ ಪಡೆದುಕೊಂಡು, ಗದುಗಿನಲ್ಲಿಯ ನಮ್ಮ ಶಾಖಾಮಠದಲ್ಲಿ ಹಾಲಕೆರೆ ಅನ್ನದಾನೀಶ್ವರ ಸಂಸ್ಕೃತ ವಿದ್ಯಾಲಯವನ್ನು ಪ್ರಾರಂಭಿಸಿ ಅಲ್ಲಿ ಅಧ್ಯಾಪಕರಾದರು; ಮತ್ತೆ ಅವರಲ್ಲಿ ನಾವು ವಿದ್ಯಾರ್ಥಿಗಳಾಗಿದ್ದೆವು. ಗದುಗಿನಲ್ಲಿ ಅಧ್ಯಾಪನವಲ್ಲದೆ, ಧಾರ್ಮಿಕ, ಸಾಮಾಜಿಕವಾಗಿ-ಪುರಾಣ, ಪ್ರವಚನ, ವೀರಶೈವ ವಿದ್ಯಾಪೀಠ, ವೀರಶೈವ ಸಾಹಿತ್ಯ ಪರೀಕ್ಷೆಗಳನ್ನು ನಡೆಯಿಸುವದರ ಜೊತೆಗೆ 'ಸಾವಧಾನ' ಪತ್ರಿಕೆಯ ಸಂಪಾದಕತ್ವ, ಗ್ರಂಥಪ್ರಕಟನೆಯ ಕಾರ್ಯವನ್ನು ಕೈಕೊಂಡರು. ಅಕ್ಕನ ಬಳಗ ಸ್ಥಾಪಿಸಿ, ಜ್ಞಾನ ದಾಸೋಹ ಬಿತ್ತರಿಸಿ, ಸಮಾಜವನ್ನು ಜಾಗ್ರತಗೊಳಿಸಿ ಲೋಕಪ್ರಿಯರಾಗಿ ಶಿವಾನುಭವಿಗಳಾದರು.

ನಮ್ಮ ಸಂಸ್ಥೆಯಲ್ಲಿಯೇ ವಿದ್ಯಾರ್ಥಿಗಳಾಗಿ, ಅಧ್ಯಾಪಕರಾಗಿ, ಮಹಾಸಭಾಪತಿಗಳಾಗಿ ಕೀರ್ತಿವೆತ್ತಿದುದು ನಮಗೊಂದು ಹೆಮ್ಮೆಯ ವಿಷಯವೇ ಸರಿ. ಶ್ರೀ ಶಾಸ್ತ್ರಿಗಳವರ ಕಾರ್ಯತತ್ಪರತೆಯನ್ನು ಗುರುತಿಸಿ, ಕರ್ನಾಟಕ ವಿಶ್ವವಿದ್ಯಾನಿಲಯವೂ ಕೂಡ ಇವರ ಸೇವೆಯನ್ನು ಪಡೆಯಿತು.

ಬಾಲ್ಯದಾರಭ್ಯ ಇಲ್ಲಿಯ ವರೆಗೂ ಶಾಸ್ತ್ರಿಗಳವರ ಹಾಗೂ ನಮ್ಮ ಸಂಪರ್ಕವು ಆತ್ಮೀಯ ಸಂಬಂಧ ಬೆಳೆದುಬಂದಿದೆ. ಉತ್ತರೋತ್ತರ ಬೆಳೆಯುತ್ತಲೇ ಇದೆ. ಎಂದಿನಿಂದಲೂ ಬೆಳೆದು ಬಂದ ನಮ್ಮ ಸಂಸ್ಥಾನ ಮಠದ ಸಂಬಂಧವನ್ನು ಅವರು ಎಲ್ಲಿದ್ದರೂ ಮುಂದುವರಿಸಿಕೊಂಡು ನಡೆದಿದ್ದಾರೆ, ನಡೆಯುತ್ತಲಿದ್ದಾರೆ.

ಇಂಥ ಮಹಾನ್ ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವವು ಜರುಗಲಿರುವದು ತುಂಬಾ ಸಮಯೋಚಿತವಾದುದಾಗಿದೆ. ಎಂದು ತಿಳಿಸಲು ಹರ್ಷಿಸುತ್ತೇವೆ.

ಶ್ರೀಗುರು ಅನ್ನದಾನೀಶ್ವರರ ಕರುಣೆಯಿಂದ ಶ್ರೀ ಶಾಸ್ತ್ರಿಗಳವರಿಗೆ ಇನ್ನೂ ಆಯುರಾರೋಗ್ಯಭಾಗ್ಯ ಬೆಳೆದು ಅವರಿಂದ ಶರಣಸಾಹಿತ್ಯ, ಶಿವಾನುಭವ ಪ್ರಸಾರ ಕಾರ್ಯಗಳು ಮುಂದೆಯೂ ಅವ್ಯಾಹತವಾಗಿ ನಡೆಯಲೆಂದು ಈ ಶುಭಪ್ರಸಂಗದಲ್ಲಿ ಹಾರೈಸುವೆವು.

ಶುಭವಾಗಲಿ !

**ಶ್ರೀ ಮ. ನಿ. ಪ್ರ. ಮಹಾಂತಪ್ಪಗಳು, ಶ್ರೀ ಮುರುಘಾಮಠ ಧಾರವಾಡ**

ಕನ್ನಡ ನಾಡಿನ ಗಣ್ಯ ಶಾಸ್ತ್ರಿಗಳಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳು ಅಪರೂಪದ ಅಪೂರ್ವ ವ್ಯಕ್ತಿ-ಶಕ್ತಿ. ನಮ್ಮ ಪರಮ ಗುರುಗಳಾದ ಶ್ರೀ ಮ. ನಿ. ಪ್ರ. ಮೃತ್ಯುಂಜಯಪ್ಪಗಳು ಇವರ ಪಾಂಡಿತ್ಯವನ್ನು ಗುರುತಿಸಿ ಕೂಡಲೇ ತಮ್ಮ ಆಪ್ತ ಬಳಗಕ್ಕೆ ಸೇರಿಸಿಕೊಂಡರು. 'ಸಾವಧಾನ' ಪಾಕ್ಷಿಕ ಪತ್ರಿಕೆಯ ಸಂಪಾದಕರನ್ನಾಗಿ ನಿಯಮಿಸಿದರು. (೧೯೪೭) ಅಂದಿನಿಂದ ಇಂದಿನವರೆಗೂ ಅ. ಭಾ. ಶಿ. ಸಂಸ್ಥೆಯ ಸಂಸ್ಥಾಪಕ ಸಂಪಾದಕರಾಗಿ ಸಮರ್ಥರೀತಿಯಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಹಾಗೆಯೇ ಬಾಲಲೀಲಾ ಮಹಾಂತಶಿವಯೋಗಿಗಳ ಗ್ರಂಥಮಾಲೆಗಾಗಿ ಅನೇಕ ಕೃತಿ ಕುಸುಮಗಳನ್ನು ಪೋಣಿಸಿದ್ದಾರೆ. ಶ್ರೀಮಠದ ಪ್ರತಿಯೊಂದು ಮಹತ್ವದ ಕಾರ್ಯಕ್ರಮದಲ್ಲಿ

ಸಕ್ರಿಯ ಪಾತ್ರವಹಿಸುತ್ತಿದ್ದಾರೆ. ಪ್ರತಿವರುಷ ಶಿವಯೋಗಿಗಳ ಯಾತ್ರಾಮಹೋತ್ಸವದಲ್ಲಿ ನಡೆಯುತ್ತಿರುವ ಸಂಸ್ಕೃತ ಪಂಡಿತ ಪರಿಷತ್ತಿನ ನಿಯೋಜಕರಾಗಿ ಕಾರ್ಯಭಾರಹೊತ್ತು ಯಶಸ್ವಿಯಾಗಿ ನಿರ್ವಹಿಸುತ್ತಿದ್ದಾರೆ. ಹೀಗಾಗಿ ಮಠದ ಮಹೋತ್ಸವಕ್ಕೆ ಅವರ ಸಂಬಂಧ ಅವಿನಾಭಾವವಾಗಿ ನಡೆದುಕೊಂಡಬಂದುದನ್ನು ಸ್ಮರಿಸಿಕೊಳ್ಳಲೇಬೇಕಾಗಿದೆ. ಅವರ ಘನವಿದ್ವತ್ತು. ಪಾಂಡಿತ್ಯ. ಪ್ರವಚನ ಕಲೆ ಸಂಪಾದಕೀಯ ಲೇಖಗಳು ಸಮಗ್ರಕನ್ನಡ ನಾಡಿನ ಮನೆಮಾತಾಗಿವೆ. ಗದುಗಿನಲ್ಲಿ ವೀರಶೈವ ವಿದ್ಯಾಪೀಠ ತೆಗೆದು ಶಿವಾನುಭವದ ಅಮೃತವನ್ನು ಕನ್ನಡ ನಾಡಿನ ಜನರಿಗೆ ಉಣಿಸಿದ್ದಾರೆ. ಶಿವಾನುಭವ ಪತ್ರ ಪುಸ್ತಕ ನಿರ್ಮಿಸುವದರಲ್ಲಿ, ಪರೀಕ್ಷೆಗಳನ್ನು ನಡೆಯಿಸುವದರಲ್ಲಿ ಅವರು ವಿಶೇಷ ಆಸ್ಥೆವಹಿಸಿ ಕೆಲಸಮಾಡುತ್ತಿದ್ದಾರೆ. ಇದೀಗ ಅವರಿಗೆ ಎಪ್ಪತ್ತೈ ತುಂಬಿದ್ದರೂ. ಇಪ್ಪತ್ತರ ಉತ್ಸಾಹವಿದೆ. ಇಂಥವರ ಅಮೃತಮಹೋತ್ಸವದ ಅಮೃತಗಳಿಗೆಯ ಸವಿನೆನಪಿಗಾಗಿ 'ನಾಡಭೂಷಣ' ಅಭಿಧಾನದ ಗ್ರಂಥ ಹೊರಬೀಳುತ್ತಿರುವುದು ನಮಗೆ ಅಪಾರ ಸಂತೋಷವನ್ನುಂಟುಮಾಡಿದೆ. ಪ್ರೊ. ವಸಂತ ಪಾಟೀಲ. ಹಾಗೂ ಎಸ್. ಎಸ್. ಭೂಸರಡ್ಡಿಯವರು ಸಂಪಾದಕರಾಗಿ ಈ ಮಹತ್ವದ ಸೇವೆಸಲ್ಲಿಸಿ ಕೃತಾರ್ಥರಾಗಿದ್ದಾರೆ. ಮಹಾಚೈತನ್ಯ ಶಕ್ತಿಯಾಗಿ ವಿಜೃಂಭಿಸುತ್ತಿರುವ ಅಥಣಿ ಮಹಾಶಿವಯೋಗಿಗಳ ಪರಮ ಪೂಜ್ಯ ಗುರುವರ್ಯರಾದ ಶ್ರೀ ಮೃತ್ಯುಂಜಯಪ್ಪಗಳ ಕೃಪಾಶೀರ್ವಾದ ಅವರ ಮೇಲೆ ಸದಾ ಇರಲೆಂದು ಈ ಶುಭ ಸಂದರ್ಭದಲ್ಲಿ ಹಾರೈಸುತ್ತೇವೆ.

ಚಿಕ್ಕತ್ತರಗಿ–ಇಳಕಲ್ಲ ಸಂಸ್ಥಾನಪೀಠದ
ಶ್ರೀ ಷ. ನಿ. ಪ್ರ. ಮಹಾಂತಸ್ವಾಮಿಗಳು ಇಳಕಲ್ಲ.

ವೀರಶೈವ ಧರ್ಮಸಿದ್ಧಾಂತದಲ್ಲಿ ಪ್ರಕಾಂಡ ಪಂಡಿತರೂ. ಸಾವಧಾನಪ್ರಕೆಯ ಸಮರ್ಥ ಸಂಪಾದಕರೂ. ಖ್ಯಾತ ಪ್ರವಚನಕಾರರೂ ಆದ ಪಂ. ನಾಗಭೂಷಣಶಾಸ್ತ್ರಿಗಳವರ ಅಮೃತಮಹೋತ್ಸವದ ಅಂಗವಾಗಿ ಅಭಿನಂದನಾಗ್ರಂಥವೊಂದನ್ನು ಹೊರತರುವ ವಿಚಾರ ಶ್ಲಾಘನೀಯ. ಅನುಕರಣೀಯ.

ಪಂಡಿತ ನಾಗಭೂಷಣಶಾಸ್ತ್ರಿಗಳನ್ನು ನಾವು ಬಹುಹತ್ತಿರ ಕಂಡಿದ್ದೇವೆ. ಕಳೆದನಲವತ್ತು ಅವರು ಧಾರ್ಮಿಕಕ್ಷೇತ್ರದಲ್ಲಿ ಸಲ್ಲಿಸಿದ ಸಲ್ಲಿಸುತ್ತಿರುವ ಸೇವೆ

ಅತ್ಯಮೂಲ್ಯವಾಗಿದೆ. ತಮ್ಮ ಇಳಿವಯಸ್ಸಿನಲ್ಲಿಯೂ ಸಹ ನಮ್ಮ ಆದೇಶದಂತೆ ಕಳೆದ ಹತ್ತುಮೂವರುಷಗಳಿಂದ ಶ್ರಾವಣಮಾಸದಲ್ಲಿ 'ಸಿದ್ಧಾಂತ ಶಿಖಾಮಣಿ' ಗ್ರಂಥ ಕುರಿತು ಅವ್ಯಾಹತವಾಗಿ ಪ್ರವಚನ ಸೇವೆಸಲ್ಲಿಸುತ್ತಿದ್ದಾರೆ. ಚಿತ್ತರಗಿ ಇಳಕಲ್ಲ ಸಂಸ್ಥಾನಮಠದ ಸಮಸ್ತ ಭಕ್ತರ ಪ್ರೇಮಾದರಗಳಿಗೆ ಪಾತ್ರರಾಗಿದ್ದಾರೆ. ಸಕಲ ಮಹಿಳೆಯರು ಆಸಕ್ತಿವಹಿಸಿ ಪ್ರವಚನ ಶ್ರವಣಮಾಡುತ್ತಿದ್ದಾರೆ. ಈ ಶತಮಾನದ ಶಾಸ್ತ್ರಿ ಪರಂಪರೆಯಲ್ಲಿ ಬೆಳಗುತ್ತಿರುವ ವಿರಳ ಪಙ್ತಿಗೆ ಸೇರಿದ ಪಂ. ನಾಗಭೂಷಣ ಶಾಸ್ತ್ರಿಗಳು ವೀರಶೈವ ತತ್ತ್ವ ಪ್ರತಿಪಾದನೆಯಲ್ಲಿ ಎತ್ತಿದ ಕೈಯಾಗಿದ್ದಾರೆ. 'ಸಾಪ ಥಾಸ'ದ ಸಂಪಾದಕೀಯ ಲೇಖನಗಳೇ ಮೇಲಣಮಾತಿಗೆ ಸಾಕ್ಷಿ. ದರ್ಶನಶಾಸ್ತ್ರದಲ್ಲಿ ಪ್ರವೀಣರು ವೇದಾಂತವನ್ನೂ ಚೆನ್ನಾಗಿ ಅವಗತಮಾಡಿಕೊಂಡಿದ್ದಾರೆ. ಈ ಅಭಿನಂದನಾ ಗ್ರಂಥವು ಅವರ ಬಹುಮುಖವ್ಯಕ್ತಿತ್ವ ಚೆನ್ನಾಗಿ ಪರಿಚಯಮಾಡಿಕೊಡುತ್ತದೆ. ಸಮರ್ಥಕ್ರಿಯಾಶೀಲಸಂಪಾದಕದ್ವಯರ ಈ ಸೇವೆ ನಿಜವಾಗಿಯೂ ಸ್ತುತ್ಯವಾಗಿದೆ. 'ಕನ್ನಡಿಗರು ಪಂ. ನಾಗಭೂಷಣಶಾಸ್ತ್ರಿಗಳು ಇನ್ನೂ ಹಲವಾರು ವರುಷ ಬಾಳಿ ಬದುಕಲೆಂದು, ನಾಡು-ನುಡಿಯ ಸೇವೆಯನ್ನು ಮಾಡಲೆಂದು ಹೃದಯಾರೆ ಹಾರೈಸುತ್ತೇವೆ.

### ಶ್ರೀ ನಿ. ಪ್ರ. ಕುಮಾರಸ್ವಾಮಿಗಳು ಕಲ್ಮಠ, ಸವದತ್ತಿ-ಬಿದರಿ-ಅವರಿಂದ

ಶ್ರೀ ಶಿವಯೋಗೀಶ್ವರ ಕೃಪಾಶೀರ್ವಾದ ಪಂಡಿತ ನಾಗಭೂಷಣ ಶಾಸ್ತ್ರಿಗಳಿಗೆ ಚಿರಾಯುರಾರೋಗ್ಯ ಭಾಗ್ಯ ದೊರೆಯಲಿ.

ನಿರಾಡಂಬರ ವ್ಯಕ್ತಿಗಳು, ಕನ್ನಡ-ಸಂಸ್ಕೃತ ವಿದ್ಯಾಪಾರಂಗತರಾದರೂ ಒಂದಿಷ್ಟು ಗರ್ವವಿಲ್ಲ. ಅವರು ಮೊದಲು ಲಿಂ. ಅನ್ನದಾನ ಮಹಾಸ್ವಾಮಿಗಳು ಹಾಲಕೇರಿ ಇವರ ಸಂಗಡ ಇಟಗಿ ಮಠದಲ್ಲಿ ನಂತರ ಗದುಗಿನ ಹಡಗಲಿ ಮಠದಲ್ಲಿ ಮಕ್ಕಳ ಮನಸ್ಸಿನಲ್ಲಿ ಮನದಟ್ಟಾಗುವಂತೆ ಬೋಧಿಸಲು ಅ. ಭಾ. ವಿದ್ಯಾಪೀಠವನ್ನು ಸ್ಥಾಪಿಸಿ ತನ್ಮೂಲಕ ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ವೀರಶೈವ ಸಾಹಿತ್ಯ, ತತ್ತ್ವಜ್ಞಾನವನ್ನು ಉಣಬಡಿಸಿದರು. ಚಿಕ್ಕಚಿಕ್ಕ ಕೃತಿಗಳ ಗ್ರಂಥಗಳನ್ನು ಬರೆದು ತದ್ವಾರ ವೀರಶೈವ ಧಾರ್ಮಿಕ ಪರೀಕ್ಷೆಗಳನ್ನೇರ್ಪಡಿಸಿ ವೀರಶೈವ ತತ್ತ್ವ ಪ್ರಚಾರಮಾಡಿದರು. ಪುರಾಣ ಪ್ರವಚನ ನಡಿಸಿ ಅಕ್ಕನ ಬಳಗ ಅಣ್ಣನ ಬಳಗಕಟ್ಟಿ ವೀರಶೈವ ಧರ್ಮ ಪ್ರಚಾರಗೈದರು. ಅವರು ಮಾಡಿದಸೇವೆ ಅಮೂಲ್ಯವಾದುದು. ಅವರ ಕಾರ್ಯ

ಚಟುವಟಿಕೆ, ಧರ್ಮದ ಬಗ್ಗೆ ಇದ್ದ ಕಳಿಕಳಿ ಕಂಡು ಲಿಂ. ಮೃತ್ಯುಂಜಯಪ್ಪಗಳವರು ಧಾರವಾಡ ಮುರುಘಾಮಠಕ್ಕೆ ಕರೆತಂದು ಸಾವಧಾನ ಪತ್ರಿಕೆಯ ಸಂಪಾದಕರನ್ನಾಗಿ ಮಾಡಿ, ಶಿವಾನುಭವ ಪರೀಕ್ಷೆಯನ್ನೇರ್ಪಡಿಸಿ, ಶಿವಾನುಭವ ಸಂಘ ಸ್ಥಾಪಿಸಿದರು.

ವಿಶ್ವವಿದ್ಯಾಲಯದಲ್ಲಿ ಕನ್ನಡ ವಚನ ವಾಙ್ಮಯ, ವೀರಶೈವ ಧರ್ಮ ಗ್ರಂಥ ಸಂಶೋಧನೆ, ವ್ಯಾಖ್ಯಾನ, ಪ್ರವಚನ. ವೇದಾಂತ ಸಿದ್ಧಾಂತ ಪ್ರವಚನದಲ್ಲಿ ಎತ್ತಿದಕೈ. ಪ್ರತಿವರ್ಷ ಇವರ ಪ್ರವಚನ ನಡದೇ ಇರುತ್ತದೆ. ಸಾವಧಾನ ಪತ್ರಿಕೆಯ ಸಂಪಾದಕರಾಗಿ ಧರ್ಮಪ್ರಚಾರ ಮಾಡುವದಲ್ಲದೆ ಶ್ರೀ ಲಿಂ. ಮೃತ್ಯುಂಜಯಪ್ಪಗಳ ಅಷ್ಟಮಿ ತಿಥಿಯ ರಾತ್ರಿಯ ಕಾಲದಲ್ಲಿ ಸಂಸ್ಕೃತ ವಿದ್ವತ್ ಸಭೆಯಲ್ಲಿ ಮುಂದಾಳುಗಳಾಗಿ ದುಡಿಯುತ್ತಾರೆ. ಲಿಂ. ಮೃತ್ಯುಂಜಯಪ್ಪಗಳ, ಶ್ರೀ ನಿ. ಪ್ರ. ಮಹಾಂತಪ್ಪಗಳ ಉದಾರಾಶ್ರಯದಿಂದ ಸ್ವತಂತ್ರ ಸಿದ್ಧಲಿಂಗೇಶ್ವರ ಪ್ರಿಂಟಿಂಗ್ ಪ್ರೆಸ್‌ಹಾಕಿ ವೀರಶೈವ ಧಾರ್ಮಿಕ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ವಿಶ್ವವಿದ್ಯಾಲಯಕ್ಕೂ ಇವರ ಅನುಭವ ಸಂದಿದೆ. ಮೂವತ್ತಕ್ಕೂಮಿಕ್ಕ ಕೃತಿಗಳನ್ನು ಬರೆದಿರುವರು. ಪಂ. ನಾಗಭೂಷಣ ಶಾಸ್ತ್ರಿಗಳ ವಿದ್ವತ್ತನ್ನು ಮನದಂದು ನಾಡಿನ ಮಹಾಜನರೂ, ಮಹಾಸ್ವಾಮಿಗಳವರೂ ಸತ್ಕರಿಸಿದ್ದಾರೆ. ಅದರಂತೆ ಶ್ರೀ ನಿ. ಪ್ರ. ಮಹಾಂತಪ್ಪಗಳು ಅವರ ಎಪ್ಪತ್ತೈದನೆ ವರ್ಷದ ಸವಿನೆನಪಿಗಾಗಿ ಹಮ್ಮಿಣಿಯನ್ನು ಸಲ್ಲಿಸಿ ಅಭಿನಂದನ ಗ್ರಂಥ ಸಲ್ಲಿಸಿ ಆಶೀರ್ವದಿಸಲಿದ್ದಾರೆ.

### ಶ್ರೀ ಮರಿಮಲ್ಲಯ್ಯ ಸ್ವಾಮಿಗಳವರು, ಸಿದ್ಧಾಶ್ರಮ, ಗಿಣಿವಾಡ ಬಸವನಕೊಪ್ಪ (ತಾ. ಕಲಘಟಗಿ)

ಲಿಂಗಸ್ವರೂಪಿಗಳೂ, ವಯೋವೃದ್ಧರೂ, ಜ್ಞಾನವೃದ್ಧರೂ ಆದಂಥ ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತಮಹೋತ್ಸವಕ್ಕೆ ನನ್ನ ಶುಭಾಶಯಗಳು.

— —

# ನಾನು ನಡೆದು ಬಂದ ದಾರಿ.........

—ಪಂ. ನಾಗಭೂಷಣ ಶಾಸ್ತ್ರಿಗಳವರು
ಸಂಗ್ರಹ : ಶ್ರೀ ಎಸ್. ವಿ. ಅಯ್ಯನಗೌಡರು

ಅಂದು ನಿಜಾಮರಾಜ್ಯಾಂತರ್ಗತವಾಗಿದ್ದ (ಈಗ ಕರ್ನಾಟಕದಲ್ಲಿ ಸೇರಿದ) ಕೊಪ್ಪಳ ವಿಭಾಗದಲ್ಲಿಯ ಸಂಗನಾಳ ಒಂದು ಚಿಕ್ಕ ಹಳ್ಳಿ. ಅಲ್ಲೊಂದು ಪ್ರಸಿದ್ಧ ಶಾಸ್ತ್ರೀಮಠ. ಶಾಸ್ತ್ರೀಮಠ ಅನ್ನುವುದು ಅನ್ವರ್ಥಕವಾಗಿಯೇ ಬಂದಿದೆ. ಆ ಮಠದಲ್ಲಿ ಎಲ್ಲರೂ ಶಾಸ್ತ್ರಿಗಳಾಗುತ್ತ ಬಂದಿದ್ದರಿಂದ ಜನರು ಶಾಸ್ತ್ರೀಮಠವೆಂದು ಕರೆಯುತ್ತ ಬಂದಿದ್ದಾರೆ. ಮಠಕ್ಕೆ ಸುಮಾರು ೨೦ ಕೂರಿಗೆ ಇನಾಮು ಜಮೀನು. ಪುರಾಣ ಪ್ರವಚನ ನಡೆಸುವ ಪದ್ಧತಿ ಇದ್ದು, ಅಲ್ಲಿ ಅಜ್ಜ ನಾಗಪ್ಪಯ್ಯನವರೇ ಹಿರಿ... ಇವರಿಗೆ ಮೂವರು ಸಹೋದರರು, (೧) ತೀರ್ಥಯ್ಯ (೨) ಸಂಗಯ್ಯ ...ಅನ್ನದಾನಯ್ಯ. ಇವರೆಲ್ಲರೂ ಪುರಾಣ ಪ್ರವಚನಕಾರರೇ ಆಗಿದ್ದರು. ವಿಶೇಷ ...ನಿರ್ಗುಣರ ಕೈವಲ್ಯಪದ್ಧತಿಯನ್ನು ಹೇಳುವುದರಲ್ಲಿ ನಿಪುಣರು.

...ಜನನ : ನಾಗಪ್ಪಯ್ಯನವರಿಗೆ ಅನ್ನದಾನಯ್ಯ, ಪರ್ವತರಾಜಯ್ಯ, ...ಅರ್ಜುನಯ್ಯ ಎಂದು ಮೂವರು ಗಂಡು ಮಕ್ಕಳು. ಗಂಗಮ್ಮ, ಸಂಗಮ್ಮ, ...ಮ್ಮ ಎಂದು ಮೂವರು ಹೆಣ್ಣುಮಕ್ಕಳು. 'ನಾಗಸಮುದ್ರ' ಗದಗ ...ಕಿಗೆ ಸೇರಿದ ಒಂದು ಹಳ್ಳಿ. ಅಲ್ಲಿಯ ಹಿರೇಮಠದಲ್ಲಿ ಜನ್ಮವೆತ್ತಿದ ಲಿಂಗಮ್ಮ ...ಗೇ ಪರ್ವತರಾಜಯ್ಯನವರ ಧರ್ಮಪತ್ನಿ. ಅವರ ಪುಣ್ಯಗರ್ಭದಿಂದ ಜನಿಸಿದವರು ...ರು-ಪಾರ್ವತೆವ್ವ ಮತ್ತು ನಾಗಯ್ಯ. ಈ ನಾಗಯ್ಯನೇ ನಾನು. ತಾಯಿಯ ...ರುಮನೆಯಾದ 'ನಾಗಸಮುದ್ರ'ದ ಹಿರೇಮಠದಲ್ಲಿ ದಿನಾಂಕ ೮-೪-೧೯೦೬ ರಲ್ಲಿ ...ನ ಜನನವಾಯಿತು. ದೇವರ ಸಂಕಲ್ಪಕ್ಕನುಸರಿಸಿ ತಂದೆಯವರಾದ ಪರ್ವತ ರಾಜಯ್ಯನವರು ನಾನು ಅಂಬೆಗಾಲಿನಿಂದಾಡುವ ವಯಸ್ಸಿಗೆ ಶಿವೈಕ್ಯರಾದರು. ಇನ್ನು ಸ್ವಲ್ಪ ಬೋಧಸ್ಥಿತಿಯಲ್ಲಿರುವಾಗ್ಗೆ ತಾಯಿಯೂ ಲಿಂಗೈಕ್ಯಳಾದಳು. ದೊಡ್ಡಪ್ಪ

ಅನ್ನದಾನಯ್ಯ, ಚಿಕ್ಕಪ್ಪ ಮಲ್ಲಿಕಾರ್ಜುನಯ್ಯ ಇಬ್ಬರೂ ಅಷ್ಟರಲ್ಲಿಯೇ ಲಿಂಗೈಕ್ಯರಾಗಿದ್ದರು. ಮನೆಯಲ್ಲಿ ಯಾರೂ ಇಲ್ಲ. ತಂದೆಯ ತಾಯಿಯವರಾದ 'ವೀರಮ್ಮ'ನವರೊಬ್ಬರೇ. ಅವೂ ನಿಶ್ಯಕ್ತಸ್ಥಿತಿಯಲ್ಲಿ. ತಾವೇ ಮತ್ತೊಬ್ಬರಿಂದ ರಕ್ಷಿತರಾಗಿಬೇಕಾದ ಕಾಲದಲ್ಲಿ ಇಬ್ಬರು ಮೊಮ್ಮಕ್ಕಳ ರಕ್ಷಣೆಯ ಭಾರವನ್ನು ಅವರೇ ಹೊರಬೇಕಾಯಿತು. ಅಮ್ಮನ ರಕ್ಷಣೆ ಮಾಡುವ ಭಾರ ಪಾಪ ಸಣ್ಣ ಹುಡುಗ (೪-೫ ವರ್ಷ) ನಾಗಯ್ಯನಿಗೆ ಬಂತೆಂದು ಊರ ಜನರು ಮರುಗಿದರು. ಆಗ ಅವರು "ಅಮ್ಮಾ ನೀನು ಇಷ್ಟು ಇಳಿವಯಸ್ಸಿನಲ್ಲಿ ಯಾವ ಕೆಲಸ ಮಾಡಲೂ ಸಮರ್ಥಳಲ್ಲ. ಕುಟ್ಟುವುದು, ಬೀಸುವುದು ನಿನ್ನಿಂದಾಗುವುದಿಲ್ಲ. ನಿಮ್ಮ ಮಠದ ಮೇಲೆ ಜನರ ವಿಶ್ವಾಸ ಬಹಳವಿದೆ, ನಿಮ್ಮ ಮೊಮ್ಮಗನನ್ನು ಹಿಟ್ಟಿನ ಭಿಕ್ಷೆಗೆ ಊರಲ್ಲಿ ಕಳಿಸಿದರೆ ಸಾಕಷ್ಟು ಭಿಕ್ಷೆ ಬರುವುದು. ಆದರಿಂದ ನಿನ್ನ ಮೊಮ್ಮಕ್ಕಳನ್ನು ಪೋಷಿಸಿಕೊಂಡು ಹೋಗಲು ಅನುಕೂಲವಾಗುವುದು" ಎಂದು ಜನರು ಅಮ್ಮನಿಗೆ ಹೇಳಿದರು. ಅವರ ಮಾತು ಕೇಳಿ ಮುದುಕಿಯು ನನಗೆ "ಮುದುಕಾ, ಬಾ ಇಲ್ಲಿ! ನೋಡು ಊರ ಹಿರಿಯರು ಹಿಟ್ಟಿನ ಭಿಕ್ಷೆಗೆ ಕಳಿಸಬೇಕೆಂದು ಒತ್ತಾಯಿಸುತ್ತಿದ್ದಾರೆ. ನೀನು ಈ ಕೆಲಸ ಮಾಡಪಾ, ನಿನ್ನ ಅಕ್ಕ ಮನೆಯಲ್ಲಿ ನನ್ನ ಜೊತೆ ಕೆಲಸ ಮಾಡತಾಳೆ" ಎಂದು ಪ್ರೀತಿಯಿಂದ ಹೇಳಿದಳು.

**ಭಿಕ್ಷಾಟನೆ :** ತೀರ ಏನೂ ತಿಳಿಯದ ಸ್ಥಿತಿಯಲ್ಲಿರುವ ನಾನು ಅಮ್ಮನ ಮಾತನ್ನು ಕೇಳಿ ಮತ್ತಾವುದನ್ನೂ ವಿಚಾರಿಸದೆ ಹಾಗೇ ಆಗಲೆಂದು ಒಪ್ಪಿಕೊಂಡೆ, ಮತ್ತು ಕಾಲಿಗೆ ಜಂಗು ಕಟ್ಟಿಕೊಂಡು ಊರಲ್ಲಿ ಭಿಕ್ಷೆಗೆ ಹೊರಟೆ. ೨-೩ ಮನೆಗಳಿಗೆ ಹೋಗಿ 'ಭಿಕ್ಷಾಂದೇಹಿ' ಎಂದು ಕೇಳುವಾಗ ಏನೋ ಒಂದು ರೀತಿಯಲ್ಲಿ ನನ್ನ ಮನಸ್ಸಿನ ಮೇಲೆ ಪರಿಣಾಮವಾಗಿ ಮುಂದಿನ ಮನೆಗಳಿಗೆ ಹೋಗದೆ ಹಾಗೆಯೇ ಮನೆಗೆ ಬಂದು ಅಮ್ಮನೆದುರು ಜೋಳಿಗೆ ಇಟ್ಟೆ. ಆಗ ಅದನ್ನು ನಿರೀಕ್ಷಿಸಿದ ಅಮ್ಮ ಬಹಳ ವಿಷಾದಪಟ್ಟಳು. ಈ ಹುಡುಗ ಹೀಗೇ ಸಂಕೋಚಪಟ್ಟರೆ ಮುಂದೆ ನಾವು ಹೇಗೆ ಗತಿಗಾಣಬೇಕು ! ಎಂಬ ವ್ಯಥೆ ಅವಳ ಮುಖದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಅದನ್ನು ನಿರೀಕ್ಷಿಸಿದ ನಾನು ಪುನಃ ದೃಢವಾಗಿ ನಿಶ್ಚಯಿಸಿ, ಏನಾದರಾಗಲಿ, ಎಂತಾದರಾಗಲಿ, ಊರಲ್ಲಿ ಎಲ್ಲ ಕಡೆಗೂ ಸಂಚರಿಸಿ ಭಿಕ್ಷೆಬೇಡಿಕೊಂಡು ಬರಬೇಕೆಂದು ನಿರ್ಧರಿಸಿ, ಆ ರೀತಿ ಮಾಡಿದೆ. ಜನರೆಲ್ಲರೂ ಪ್ರೀತಿಯಿಂದ ಭಿಕ್ಷೆ ನೀಡುತ್ತಿದ್ದರು. ಅವನ್ನು ಅಮ್ಮನ ಸಮ್ಮುಖದಲ್ಲಿ ತಂದಿಟ್ಟಾಗ ಅಮ್ಮನಿಗೆ ಸಂತೋಷವಾಯಿತು. ಅವಳು ನಮ್ಮನ್ನು ಪ್ರೀತಿಯಿಂದ ಕಂಡು ನಾವು ಬೇಗ ಬೆಳೆದು ದೊಡ್ಡವರಾಗಲಿ ಎಂದು ಹಾರೈಸುತ್ತಿದ್ದಳು.

ವಿದ್ಯಾರ್ಜನೆ : ಮಠದಲ್ಲಿ ಸಣ್ಣ ಅಜ್ಜನವರಾದ ಅನ್ನದಾನಶಾಸ್ತ್ರಿಗಳು ನನ್ನನ್ನು ಕರೆದು ಕೆಲವು ಶ್ಲೋಕಗಳನ್ನು ಕಂಠಪಾಠಮಾಡಲಿಕ್ಕೆ ಹೇಳುತ್ತಿದ್ದರು. ಅದೇ ಕಾಲದಲ್ಲಿ *ದ್ಯಾಂಪುರದ ಕಲ್ಲಯ್ಯನವರು ಗಾವಟಿ ಶಾಲೆಯನ್ನು ಊರ ನಾಗನಾಥನ ಗುಡಿಯಲ್ಲಿ ಪ್ರಾರಂಭಿಸಿದ್ದರು. ಅವರ ಶಾಲೆಗೆ ನಾನು ಹೋಗ ಹತ್ತಿದೆ. ಅವರು ನನ್ನನ್ನು ಗರ್ಭಗುಡಿಯಲ್ಲಿ ದೇವರ ಹತ್ತಿರ ಕೂಡ್ರಿಸುತ್ತಿದ್ದರು. ನಮ್ಮ ಮಠದ ಯಜಮಾನರಲ್ಲಿ ಆ ಶಿಕ್ಷಕರಿಗೆ ಗೌರವಬುದ್ಧಿಯಿತ್ತು. ಅವರ ವಸತಿ ನಮ್ಮ ಮಠದಲ್ಲಿಯೇ. ಅವರು ಪ್ರತಿಯೊಬ್ಬ ಭಕ್ತರ ಮನೆಗೆ ಊಟಕ್ಕೆ ಹೋಗುತ್ತಿದ್ದರು. ಪುರಾಣ ಹೇಳುವ ರೂಢಿಯೂ ಅವರಿಗೆ ಮಠದಲ್ಲಿಯೇ ಪ್ರಾರಂಭವಾಯಿತು. ಅವರೊಡನೆ ನಮ್ಮ ಮನೆತನಕ್ಕೆ ಸಂಬಂಧಿಸಿದ ಕಕ್ಕಂದಿರಾದ ಗುರಯ್ಯನವರು ಪುರಾಣ ಓದುತ್ತಿದ್ದರು. ಅನ್ನದಾನ ಶಾಸ್ತ್ರಿಗಳು ನನಗೆ 'ಅಮರಕೋಶ'ವನ್ನು ಹೇಳಿಕೊಟ್ಟು ಕಂಠಪಾಠ ಮಾಡಿಕೊಂಡು ಬರಬೇಕೆಂದು ಕಟ್ಟಪ್ಪಣೆ ಮಾಡುತ್ತಿದ್ದರು. ಮಠದಲ್ಲಿ ಹಚ್ಚಿದ ದೀಪದ ಬೆಳಕಿನಲ್ಲಿ ಕೋಶವನ್ನು ಎರಡು ಸಲ ಓದಿದರೆ ಸಾಕು, ಕಂಠಪಾಠವಾಗುತ್ತಿತ್ತು. ಅದನ್ನು ಅವರಿಗೆ ಒಪ್ಪಿಸುತ್ತಿದ್ದೆ. 'ಶಿವಾಪರಾಧಕ್ಷಮಾಪಣ ಸ್ತೋತ್ರ.' ಹಾಗೂ 'ಜ್ಯೋತಿಷ್ಯ ಬಾಲಬೋಧೆ' ಮೊದಲಾದವುಗಳನ್ನು ಕಲಿಸಲು ಪ್ರಯತ್ನಿಸಿದರು. ಅಷ್ಟರಲ್ಲಿ ರೋಣ ತಾಲೂಕಿನ ನಿಡಗುಂದಿಯಲ್ಲಿಯ ನನ್ನ ಸೋದರತ್ತೆಯು ತಮ್ಮ ತಾಯಿಗೆ ಹೇಳಿ ನಿಡಗುಂದಿಗೆ ಅಭ್ಯಾಸಮಾಡಲೆಂದು ನನ್ನನ್ನು ಕರೆಸಿಕೊಂಡಳು. ಆಗ ನಾನು ೮ ವರ್ಷದವನಾಗಿರಬಹುದು. ಅಲ್ಲಿ ಮನೆಯ ಮುಂದಿರುವ ಶಾಲೆಗೆ ಹೋಗಲಾರಂಭಿಸಿದೆ— ಕನ್ನಡ ಒಂದನೆಯ ಇಯತ್ತೆಯಿಂದ. ಆಗ ನನಗೆ ಕಲಿಸುವ ಶಿಕ್ಷಕರು ಗಜೇಂದ್ರಗಡದ ಕೊಟಗಿ ರುದ್ರಪ್ಪ ಮಾಸ್ತರರು. ಅವರು ನನ್ನನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರಲ್ಲದೆ ನನ್ನ ಓದು-ಬರಹಗಳ ಬಗೆಗೆ ಮೆಚ್ಚಿಗೆ ವ್ಯಕ್ತಪಡಿಸುತ್ತಿದ್ದರು. ಶಾಲೆಯ ವರ್ಗದ ೫೦ ಜನ ವಿದ್ಯಾರ್ಥಿಗಳಲ್ಲಿ ಒಂದನೇ ನಂಬರು ಇರಬೇಕಾದ ನಾನು ೨ ನೇ ನಂಬರು ಇರುತ್ತಿದ್ದೆ. ಅದಕ್ಕೆ ಕಲಿಸುವ ಮಾಸ್ತರರು ಒಂದನೇ ನಂಬರಿನ ಹುಡುಗ ಲಿಂಗನಗೌಡನ ಮನೆಯಲ್ಲಿರುತ್ತಿದ್ದುದೇ ಕಾರಣ! ಆದರೂ ಆ ಮಾಸ್ತರರು ೫೦ ಜನ ವಿದ್ಯಾರ್ಥಿಗಳಲ್ಲಿ ಓದಲು-ಬರೆಯಲು ಸಮರ್ಥರೆನಿಸಿದ ಇಬ್ಬರು ವಿದ್ಯಾರ್ಥಿಗಳನ್ನು ತಮ್ಮ ದೃಷ್ಟಿಯಲ್ಲಿಟ್ಟುಕೊಂಡಿದ್ದರು. ಅದರಲ್ಲಿ ನಾನೊಬ್ಬ, ಮತ್ತೊಬ್ಬ ಬಡಿಗೇರ ಎಚ್ಚರಪ್ಪ. ಮಾಸ್ತರರು ಒಮ್ಮೊಮ್ಮೆ ಬಹಳೇ ಸಂತೋಷದಿಂದ ನನ್ನ ಕಡೆಗೆ ಬೆರಳು ತೋರಿಸಿ

* ಪ್ರಸಿದ್ಧ ಸಾಹಿತಿಗಳಾದ ಡಾ॥ ಸಿದ್ಧಯ್ಯ ಪುರಾಣಿಕ ಅವರ ತಂದೆಯವರು

ಎಲ್ಲ ವಿದ್ಯಾರ್ಥಿಗಳಿಗೆ "ಅದೋ, ಅಲ್ಲಿ ನೋಡಿರಿ," "ಅವನು ಮುಂದ ದೊಡ್ಡ ಶಾಸ್ತ್ರಿಯಾಗುತ್ತಾನೆ" ಎಂದು ಹೇಳುತ್ತಿದ್ದರು. ಆ ಮಾಸ್ತರರು ಹೇಳಿದ ಆ ಮಾತನ್ನೇ ಎತ್ತಿಕೊಂಡು ಎಲ್ಲ ಹುಡುಗರು 'ಶಾಸ್ತ್ರಿ' 'ಶಾಸ್ತ್ರಿ', ಎಂದು ಕರೆದು ಚೇಷ್ಟೆ ಮಾಡುತ್ತಿದ್ದರಲ್ಲದೆ, ನನ್ನೊಡನೆ 'ಶಾಸ್ತ್ರಿ' ಎಂದು ಕರೆದೇ ವ್ಯವಹರಿಸುತ್ತಿದ್ದರು. ಶಿಕ್ಷಕರಾದ ರುದ್ರಪ್ಪನವರು ಬಹಳ ಆಚಾರವಂತರು; ಅವರಿಗೆ ಇನ್ನೂ ಲಗ್ನವಾಗಿದ್ದಿಲ್ಲ. ಮಡಿಯಿಂದ ಸ್ವತಃ ತಾವೇ ಪಾಕ ತಯಾರಿಸುತ್ತಿದ್ದರು. ಊಟಕ್ಕೆ ಹಿಟ್ಟು ಕೊಟ್ಟು ನಿಮ್ಮ ಮನೆಯಲ್ಲಿ ಇಂದು ರೊಟ್ಟಿ ಮಾಡಿಸಿಕೊಂಡು ಬಾ, ಎಂದು ಹೇಳುತ್ತಿದ್ದರು.

**ಬಾಲ ವಿವಾಹ :** ಹೀಗೆಯೇ ೪ನೆಯ ಕ್ಲಾಸ್ ಮುಗಿಸಿ ೫ನೆಯ ಕ್ಲಾಸಿಗೆ ಕಾಲಿಟ್ಟಾಗ, ಒಂದು ದಿನ ನಮ್ಮ ಇನ್ನೊಬ್ಬ ಸೋದರತ್ತೆಯ ಊರಾದ ಇಟಗಿಗೆ ಹೋದಾಗ (ಸು. ೧೯೧೪) ಸೋದರತ್ತೆಯ ಮಗ ಸಿದ್ಧಯ್ಯನಿಗೆ ನನ್ನ ಅಕ್ಕನನ್ನು ನಿಶ್ಚಯಿಸಿ ಲಗ್ನ ಮಾಡಲು ಯೋಚಿಸಿದ್ದರು. ಆಗ ಅಮ್ಮನು ನನಗೂ ಇದರಲ್ಲಿಯೇ ಲಗ್ನ ಮಾಡಬೇಕೆಂದು ವಿಚಾರಿಸಿದಳಲ್ಲದೆ, ನಿಡಗುಂದಿಯ ಸೋದರತ್ತೆಗೆ ಇರುವ ಇಬ್ಬರು ಹೆಣ್ಣುಮಕ್ಕಳಲ್ಲಿ ನನ್ನ ವಯಸ್ಸಿನವಳಾದ ರುದ್ರವ್ವನನ್ನು ಬಿಟ್ಟು ಇನ್ನೊಬ್ಬಳಾದ ೬ ತಿಂಗಳಿನ ಶಿವಗಂಗಾ ಎಂಬವಳನ್ನೇ ನನಗೆ ಲಗ್ನ ಮಾಡಿದರಾಯಿತೆಂದು ಅಕ್ಕನ ಲಗ್ನದಲ್ಲಿಯೇ ಲಗ್ನ ಮಾಡಿದರು.

**ಹಾಲಕೆರೆಗೆ :** ೧೯೧೮ರಲ್ಲಿ ಹಾಲಕೆರೆಯ ಗುರು ಅನ್ನದಾನ ಮಹಾಸ್ವಾಮಿಗಳು ಶ್ರಾವಣಮಾಸದ ನಿಮಿತ್ತ ಇಟಗಿಯ ತಮ್ಮ ಮಠದಲ್ಲಿ ಪುರಾಣವನ್ನು ಹಚ್ಚಿ ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಸುಪ್ರಸಿದ್ಧ ಲಿಂ. ಪಂಚಾಕ್ಷರಿ ಗವಾಯಿಗಳು ಕೂಡ ಆಗ ಅಲ್ಲಿದ್ದರು. ಆ ಪ್ರಸಂಗದಲ್ಲಿ ನನ್ನ ಅತ್ತೆ– "ತಮ್ಮಾ ಅನ್ನದಾನ ಸ್ವಾಮಿಗಳು ಸಂಸ್ಕೃತ ಪಾಠಶಾಲೆಯನ್ನು ಹಾಲಕೆರೆಯಲ್ಲಿ ಪ್ರಾರಂಭಿಸಿದ್ದಾರೆ. ನೀನು ಅಲ್ಲಿಗೆ ಓದಲು ಹೋಗು" ಎಂದು ಹೇಳಿ ನನ್ನನ್ನು ಅಲ್ಲಿಗೆ ಕಳಿಸಿ ಬರಲು ತಮ್ಮ ಯಜಮಾನರಾದ ಬಸಯ್ಯನವರಿಗೆ ತಿಳಿಸಿದರು. ಅವರು ಮಗ ಗುರುಬಸಯ್ಯನನ್ನು ಹಾಗೂ ನನ್ನನ್ನೂ ಕರೆದುಕೊಂಡು ಹೋಗಿ ಪಾಠಶಾಲೆಯಲ್ಲಿ ಸೇರಿಸಿದರು.

ಮಹಾಯುದ್ಧ (೧೯೧೮) ಮುಗಿದು ಕೆಲಸಮಯದ ನಂತರ ವಾತಾವರಣ ದೂಷಿತವಾಗಿ ಇನ್‌ಫ್ಲೂಯೆಂಜಾ ರೋಗ ಉಲ್ಬಣಗೊಂಡಿತು. ಒಂದೊಂದು

ಹಳ್ಳಿಯಲ್ಲಿ ೨೦-೩೦ ಜನರ ಮರಣ. ಇಂಥ ಉಗ್ರ ಸ್ಥಿತಿಯಲ್ಲಿ ನಾನು ಪುನಃ ನಿಡಗುಂದಿಯಲ್ಲಿ ವಾಸಿಸಬೇಕಾಯಿತು. ಆ ರೋಗ ಪೂರ್ಣ ನಿಂತಮೇಲೆ(೧೯೧೯)ಹಾಲಕೆರೆಗೆ ಬಂದು ಗುರುಬಸಯ್ಯ, ನಾನು ಪಾಠಶಾಲೆಯಲ್ಲಿ ಪ್ರವೇಶ ಪಡೆದೆವು. ಆಗ ನನಗೆ ಸುಮಾರು ೧೨-೧೩ ವರ್ಷವಿರಬೇಕು. ಕಾಶಿ ಪಂಡಿತರಾದ ಬಸವರಾಜ ಶಾಸ್ತ್ರಿಗಳು ಪಾಠಶಾಲೆಗೆ ಅಧ್ಯಾಪಕರು. ಅವರು ಸಂಸ್ಕೃತ ಅಭ್ಯಾಸ ಪ್ರಾರಂಭಿಸಿ, ಪಂಚಕಾವ್ಯಗಳನ್ನು, ನಾಟಕಗಳನ್ನು, ವ್ಯಾಕರಣವನ್ನು, ಲಘುಕೌಮುದಿಯನ್ನು ಹೀಗೆ ಹಲವಾರು ಗ್ರಂಥಗಳನ್ನು ಸುಮಾರು ೧೯೨೪ ರ ವರೆಗೆ ಅಭ್ಯಾಸ ಮಾಡಿಸಿದರು.

ಕಾಶಿ ಕ್ಷೇತ್ರಕ್ಕೆ : ಕಾಶಿಯಿಂದ ಅಧ್ಯಯನ ಮಾಡಿಬಂದ ಉಪ್ಪಿನಬೆಟಿಗೇರಿಯ ವಿಶ್ವನಾಥ ಶಾಸ್ತ್ರಿಗಳು ಹಾಲಕೆರೆಗೆ ಬಂದರು. ಅವರಲ್ಲಿ ರಘುವಂಶ, ಕುಮಾರ ಸಂಭವ, ಕಿರಾತಾರ್ಜುನೀಯ, ಮಾಘನ ಶಿಶುಪಾಲವಧ, ನೈಷಧ-ಮೊದಲಾದವುಗಳನ್ನು ಅಭ್ಯಸಿಸಲಾಯಿತು. ಇಷ್ಟೆಲ್ಲ ಅಭ್ಯಾಸ ಮಾಡಿದ ನಾವೆಲ್ಲ ಸಹಪಾಠಿಗಳು ಒಂದು ದಿವಸ ಕೂಡಿ ಹೀಗೆ ವಿಚಾರಿಸಿದೆವು. ನಮ್ಮ ಜೀವನದ ಭವಿಷ್ಯವೇನು ? ಇವೆಲ್ಲವುಗಳ ಓದಿನಿಂದ ನಮಗೆ ಏನು ಪ್ರಯೋಜನ ? ಏನು ಮಾಡಲು ಸಮರ್ಥರಾಗುತ್ತೇವೆ ? ನಾವು ಮಾಸ್ತರರಾಗುವುದೇ ಒಳ್ಳೆಯದೆಂದು ನಿರ್ಧರಿಸಿದೆವು. ಆಗ ಮುಲ್ಕಿಪರೀಕ್ಷೆ ಪಾಸಾದವರಿಗೆ ಅರ್ಜಿಯನ್ನು ಹಾಕದಿದ್ದರೂ ಮಾಸ್ತರ ಜಾಗೆ ಕೊಡುತ್ತಿದ್ದರು. ಅಂದು ಮಾಸ್ತರರಿಗೆ ಅಷ್ಟು ಗೌರವ. ಆದರೂ ಕೆಲವರು ಕೀರ್ತನಕಾರರಾಗೋಣವೆಂದರು. ಹೀಗೆ ವಿಚಾರದ ಸುಳಿಯಲ್ಲಿದ್ದಾಗ ಹಾಲಕೆರೆ ಸ್ವಾಮಿಗಳು ಹೆಚ್ಚಿನ ಅಭ್ಯಾಸಕ್ಕಾಗಿ ಕಾಶಿಗೆ ಕಳಿಸಬೇಕೆಂದು ವಿಚಾರಿಸಿದರು. ಅಂದು ಕಾಶಿಗೆ ಹೋಗಿ ಬಂದವರನ್ನು ದೇವತಾ ಸ್ವರೂಪದಲ್ಲಿ ಕಾಣುತ್ತಿದ್ದುದನ್ನು ಸ್ಮರಿಸಿಕೊಂಡಾಗ ಆದರಿಂದ ನಮ್ಮಲ್ಲಿಯೂ ಉತ್ಸುಕತೆ ಹೆಚ್ಚಾಯಿತು. ಕಾಶಿಗೆ ಹೋಗಿ ಬಂದ ಪಂಡಿತರಂತೆ ನಾವು ಸಂಪೂರ್ಣವಾಗಿ ಓದಿ ಬರುವೆವೆಂಬ ನಂಬಿಕೆಯೂ ಇಲ್ಲದಾದಾಗ, ಕೊನೆಯ ಪಕ್ಷ "ಕಾವ್ಯ ತೀರ್ಥ" ಪರೀಕ್ಷೆಯನ್ನು ಮುಗಿಸಿಕೊಂಡು ಬಂದರಾಯಿತೆಂದು ವಿಚಾರಿಸಿದಾಗಲೂ ಸಂಶಯ ಸುಳಿಯುತ್ತಿತ್ತು. ಇಂಥ ಪ್ರಸಂಗದಲ್ಲಿ ಹಾಲಕೆರೆ ಮಹಾ ಸ್ವಾಮಿಗಳು ತಮ್ಮ ಪಾಠಶಾಲೆಯಲ್ಲಿ ಅಭ್ಯಸಿಸಿದ ಮೂವರನ್ನು ಕಾಶಿ ಕ್ಷೇತ್ರಕ್ಕೆ ಕಳಿಸಲು ವ್ಯವಸ್ಥೆಮಾಡಿದರು. ಆಗ ಮನೆಯಲ್ಲಿದ್ದ ನನ್ನ ಅಮ್ಮ ಇವನನ್ನು ಕಾಶಿಗೆ ಕಳಿಸಿ ನಾನು ಹೇಗಿರಬೇಕು— ಎಂಬ ಮೊಮ್ಮಗನ ಮೇಲಿನ ಪ್ರೇಮವನ್ನು ವ್ಯಕ್ತಪಡಿಸಿದಳು. ಆಗ ಮಹಾಸ್ವಾಮಿಗಳ ಅಪ್ಪಣೆಯಾಗಿದೆಯೆಂದು ಅದಕ್ಕೆ ವಿಘ್ನಮಾಡಿ ಪಾಪಕಟ್ಟಿಕೊಳ್ಳಬೇಡವೆಂದು ಊರ ಜನರು ತಿಳಿಸಿ ಹೇಳಿದ

ನಂತರ ಗುರುಬಸಯ್ಯ, ನಾನು ಮತ್ತು ಶಂಕರಯ್ಯ ಮೂವರೂ ಕಾಶಿಗೆ ಹೋಗಲು ಸಿದ್ಧರಾದೆವು.

ಕೆಲವು ದಿವಸಗಳ ನಂತರ ಹಿರಿಯರ ಹಾಗೂ ಅಪ್ಪಗಳ ಆಶೀರ್ವಾದ ಪಡೆದು ಕೊಂಡು ಕಾಶಿಗೆ ಹೊರಡುವ ಸಿದ್ಧತೆಯೊಂದಿಗೆ ಊರನ್ನು ಬಿಟ್ಟು ಬಾಗಿಲುಕೋಟೆಗೆ ಹೋದೆವು. ಮುಂದೆ ಬಾಗಿಲುಕೋಟೆಯಿಂದ ಸೊಲ್ಲಾಪುರಕ್ಕೆ ಹೋಗಿ ಖಾನಾವಳಿ ಯಲ್ಲಿ ಉಳಿದುಕೊಂಡು ನಂತರ ಮ:ಹಾಶಿವಶರಣೆ ರುದ್ರಮ್ಮನವರ ದರ್ಶನ ಪಡೆಯ ಬೇಕೆಂದು ಅವರ ಮನೆಗೆ ಹೋದೆವು. ಆಗ ರುದ್ರಮ್ಮ ಶರಣೆಯರು ತಮ್ಮ ಚಿಕ್ಕ ಮನೆಯ ಬಾಗಿಲಲ್ಲಿ ನಿಂತುಕೊಂಡು ದರ್ಶನಕೊಡುತ್ತಿದ್ದರು. ನಾವು ಮೂವರೂ ದರ್ಶನಾರ್ಥಿಗಳ ಗುಂಪಿನಲ್ಲಿ ಸೇರಿಕೊಂಡು ಶರಣಮ್ಮನವರ ದರ್ಶನ ಪಡೆದುಕೊಂಡು ಮಲ್ಲಿಕಾರ್ಜುನ ದೇವಸ್ಥಾನದೆಡೆಗೆ ಹೊರಟೆವು. ಶರಣಮ್ಮನವರು ತಮ್ಮ ಸಮೀಪ ದವನೊಬ್ಬನಿಂದ ನಮ್ಮನ್ನು ಕರೆಯುಕಳಿಸಿದರು. ಅವರ ಕರೆಗೆ ಓಗೊಟ್ಟು, ಪುನಃ ಅವರು ಕರೆಯುಕಳಿಸಿದಬಗ್ಗೆ ಆಶ್ಚರ್ಯ ಹಾಗು ಸಂತೋಷವಾಯಿತು. ಅಂತಃಕರಣ ಮಿಡಿದು ಅವರೆದುರು ಹೋದಾಗ ಶರಣಮ್ಮನವರೇ ಒಳಗೆ ಕರೆದುಕೊಂಡು ಹೋಗಿ ಚಾಪೆಹಾಸಿ ಕುಳಿತುಕೊಳ್ಳಲು ಹೇಳಿ, ತಾವೂ ನತಿಸಿ ಕುಳಿತು ನೀವು ಎಲ್ಲಿಂದ ಬಂದಿರಿ ? ಎಲ್ಲಿಗೆ ಹೋಗುವಿರಿ ? ಎಂದು ಕೇಳಿದರು. "ನಾವು ಹಾಲಕೆರೆ ಪಾಠಶಾಲೆಯಿಂದ ಕಾಶಿಗೆ ಕಲಿಯಲು ಹೋಗುತ್ತಿದ್ದೇವೆ. ಹಾಲಕೆರೆ ಸ್ವಾಮಿಗಳು ಕಳಿಸಿದ್ದಾರೆ." ಎಂದು ಹೇಳಿದೆವು. "ಓಹೋ !, ಹೀಗೋ ನೀವು ಇಲ್ಲಿಯೇ ಉಳಿಯಬೇಕಾಗಿತ್ತಲ್ಲಾ ! " ಎಂದು ಉದ್ಗಾರ ತೆಗೆದರಲ್ಲದೆ "ನೋಡ್ರೆಪಾ, ನೀವು ಚೆನ್ನಾಗಿ ಅಭ್ಯಾಸಮಾಡಿ ಸಮಾಜದಲ್ಲಿ ದೊಡ್ಡವ್ಯಕ್ತಿಗಳಾಗಬೇಕು" ಎಂದು ತಮ್ಮ ಪ್ರಸಾದ ವಾಣಿಯಿಂದ ಬೋಧಿಸುವ ಮುಖಾಂತರ ಆಶೀರ್ವಾದ ಮಾಡಿದರೆಂದೆನಿ ಸಿತು. ನಂತರ ದೊಡ್ಡ ತಾಟಿನಲ್ಲಿ ತುಂಬಿಟ್ಟಿದ್ದ ಹಣ್ಣು ದ್ರಾಕ್ಷೆಗಳನ್ನು ಕೊಟ್ಟರು, ಆಗ ಅವರ ಅಪ್ಪಣೆ ಪಡೆದು ರೇಲ್ವೆ ಸ್ಟೇಶನ್‌ಗೆ ಬಂದು ಮುಂಬೈಗೆ ಪ್ರಯಾಣ ಬೆಳೆಸಿದೆವು.

ಮುಂಬೈಯನ್ನು ತಲುಪಿ ಅಲ್ಲಿಯ 'ಗೌರೀಶಂಕರ ಖಾನಾವಳಿ'ಯಲ್ಲಿ ಉಳಿದು ಕೊಂಡು, ಪುನಃ ರಾತ್ರಿ ೭ ಗಂಟೆಗೆ ಕಲ್ಕತ್ತೆಗೆ ಹೊರಡುವ ರೈಲಿನಲ್ಲಿ ಕುಳಿತು, ಅಂದು ರಾತ್ರಿ, ಮರುದಿವಸ, ಹಗಲು, ಮತ್ತು ರಾತ್ರಿ (ಬೆಳಗಿನಜಾವ) ರೈಲಿನಲ್ಲಿಯೇ ಪ್ರವಾಸಮಾಡಿ ಮೊಗಲ ಸರಾಯಿಗೆ ತಲುಪಿದೆವು. ಅಲ್ಲಿಂದ ಮುಂದೆ ಕಾಶಿ ರೇಲ್ವೆ ಶ್ಟೇಶನ್ ತಲುಪಿ ಅಲ್ಲಿಂದ ಪಂಚಾಚಾರ್ಯ ಪೀಠಗಳಲ್ಲೊಂದಾದ (ವಿಶ್ವಾರಾಧ್ಯ ಪೀಠ) 'ಜಂಗಮವಾಡಿಮಠ'ಕ್ಕೆ ಹೋದೆವು. ಅಲ್ಲಿ ಪೂರ್ವಪರಿಚಿತ

ವ್ಯಕ್ತಿಗಳೊಂದಿಗೆ ಇರಲು ನಮಗೆ ಅನುಮತಿ ಸಿಕ್ಕಿತು. ಕಲ್ಕತ್ತೆಯಲ್ಲಿ ನಡೆವ ಸಾಹಿತ್ಯ ಆದ್ಯ ಮತ್ತು ಮಧ್ಯಮ ಪರೀಕ್ಷೆಗಳಿಗೆ ಫಾರ್ಮ ತುಂಬಿ ಅಭ್ಯಸಿಸ ಲಾರಂಭಿಸಿದೆವು. ಪರೀಕ್ಷೆಗಳು ನಡೆಯುವ ಅವಧಿ ಮುಂದೆ ನಾಲ್ಕು ತಿಂಗಳು ಮಾತ್ರವಿತ್ತು. ಆದರೂ ಇತರ ಯಾವ ಭಾಷೆಗಳನ್ನು ತಿಳಿಯದ ನಾವು ಪಂಡಿತರ ಹತ್ತಿರ ಹೋಗದೆ ಸ್ವತಃ ಗ್ರಂಥಗಳನ್ನು ಅಭ್ಯಸಿಸಹತ್ತಿದೆವು. ಬೆಳಗಿನ ೪ ಗಂಟೆಗೆ ಎದ್ದು ಪ್ರಾರಂಭಿಸಿದ ಅಭ್ಯಾಸ ಮಧ್ಯಾಹ್ನ ೧೨ ಗಂಟೆಯ ವರೆಗೂ ಸಾಗುತ್ತಿತ್ತು. ಆದ್ಯ (ಪ್ರಥಮ) ಮತ್ತು ಮಧ್ಯಮ ಪರೀಕ್ಷೆಗಳ ಅಭ್ಯಾಸವನ್ನು ಮುಗಿಸಿದೆವು. ಈ ಪರೀಕ್ಷೆಗಳು ನಡೆಯಲು 'ವರ್ಧಮಾನ'ವೇ ಕೇಂದ್ರವಾಗಿತ್ತು ಫಾರ್ಮ ತುಂಬಿದ ಕೆಲ ದಿವಸಗಳ ನಂತರ ಪರೀಕ್ಷಾ ಕೇಂದ್ರದಿಂದ ಹೀಗೆ ಸೂಚನೆ ಬಂದಿತು. "ನೀವು ಸಾಹಿತ್ಯ ಆದ್ಯ ಪರೀಕ್ಷೆಗೆ ಮಾತ್ರ ಕುಳಿತುಕೊಳ್ಳಲು ಬರುವುದು ಮಧ್ಯಮ ಪರೀಕ್ಷೆಗೆ ಕುಳಿತುಕೊಳ್ಳಲು ಬರುವದಿಲ್ಲ" ಎಂದು. ಇದನ್ನು ತಿಳಿದು ನಿರಾಶರಾದವರಲ್ಲಿ ನಾನು ಪರೀಕ್ಷೆಗೆ ಹೋಗಬಾರದೆಂದು ನಿರ್ಣಯಿಸಿದೆ. ಆದರೆ ನನ್ನ ಸಹಪಾಠಿಗಳು ಎಂಟು ಜನರಿದ್ದರು. ಅವರು ಪರೀಕ್ಷೆಗೆ ಹೋಗುವ ನಿರ್ಧಾರ ಮಾಡಿ ಗಂಗಾಸ್ನಾನಮಾಡಿ ವಿಶ್ವನಾಥನ ದರ್ಶನ ಪಡೆದು 'ವರ್ಧಮಾನ'ಕ್ಕೆ ಹೋಗಲು ಸಕಲಸಿದ್ಧತೆಗಳೊಂದಿಗೆ ಸ್ಟೇಶನ್ನಿನ ಕಡೆಗೆ ಹೋದರು. ಮಠದಲ್ಲಿಯೇ ಕುಳಿತುಕೊಂಡ ನನ್ನನ್ನು ನೋಡಿ ಬಾಲ್ಯ ಮಿತ್ರರಾದ ಕಡೇನಂದೀಹಳ್ಳಿಯ ಗುರುಮೂರ್ತಿ ದೇವರು "ನೀವೇಕೆ ಹೋಗಲಿಲ್ಲ" ಎಂದು ವಿಚಾರಿಸಿದರು, ಆಗ ನಾನು "ನನಗೆ ಪರೀಕ್ಷೆಗೆ ಕುಳಿತುಕೊಳ್ಳುವುದೇ ಬೇಸರವಾಗಿದೆ. ಒಂದೇ ಪರೀಕ್ಷೆಗೆ ಕಟ್ಟಿ ಏನು ಮಾಡುವುದು?" ಎಂದು ನಿರಾಸೆಯಿಂದ ಮಾತನಾಡಿದೆ, ಆಗ ಅವರು ನಿಮಗೆ ಪರೀಕ್ಷೆಯೆಂದರೆ ಏನು ಹೇಗೆಂಬುದು ಇನ್ನೂ ತಿಳಿದಿಲ್ಲ. ಬಿಟ್ಟರೆ ಎಂದೆಂದೂ ತಿಳಿಯಲಿಕ್ಕಿಲ್ಲ. ನೀವು ಈ ಸಾರೆ ಹೋಗಲೇಬೇಕು" ಎಂದು ಹಟ ಹಿಡಿದು "ನಿಮಗೆ ಹಣ ಬೇಕಾದರೆ, ಏನಾದರೂ ತೊಂದರೆಯಿದ್ದರೆ, ಹೇಳಿರಿ" ಎಂದು ವಾತ್ಸಲ್ಯ ಪೂರ್ಣವಾಗಿ ಮಾತನಾಡಿದರು. ಅವರ ಮಾತನ್ನು ಕೇಳಿದ ಮೇಲೆ ಏನಾದರಾಗಲಿ ಎಂದು ತಿಳಿದು ಆಶಾಂಕುರನಾಗಿ ನಳದಲ್ಲಿಯೇ ಸ್ನಾನಮಾಡಿ, ಪೂಜೆಮಾಡಿಕೊಂಡು, ಊಟ ಮುಗಿಸಿ ಸ್ಟೇಶನ್‌ಕ್ಕೆ ಹೋದೆ. ಇನ್ನೂ ರೈಲು ಹೋಗುವುದು ತಡವಿತ್ತು. ನನ್ನ ಸಹಪಾಠಿಗಳು ನೋಡಿ "ಇವರೂ ಬಂದು ಬಿಟ್ಟರಲ್ಲ" ಎಂದು ಅಂದಾಗ ಗುರುಮೂರ್ತಿ ದೇವರು ನನ್ನನ್ನು ಒತ್ತಾಯಿಸಿ ಕಳಿಸಿದರೆಂದು ಹೇಳಿದೆ. ಅಷ್ಟರಲ್ಲಿಯೇ ರೈಲು ಬಂದಿತು. ಎಲ್ಲರೂ ವರ್ಧಮಾನಕ್ಕೆ ಹೋಗಲು ರೈಲಿನಲ್ಲಿ ಕುಳಿತುಕೊಂಡೆವು. ಕೆಲ ಸಮಯದ ನಂತರ ರೈಲು ವರ್ಧಮಾನ ತಲುಪಿತು.

ಮೂರನೆಯ ದಿನವೇ ಪರೀಕ್ಷೆಗಳನ್ನು ನಡೆಸುವ ಪರೀಕ್ಷಾ ಭವನಕ್ಕೆ ಹೋದೆ. ಮೊದಲನೆಯ ಪೇಪರನ್ನು ಸರಿಯಾಗಿ ಅರ್ಥೈಸಿಕೊಂಡು ಸಮರ್ಪಕವಾಗಿ ಉತ್ತರಿಸಿದೆನು. ಆದರೆ ಮೂರನೆಯ ದಿನ ೨ನೆಯ ಪತ್ರಿಕೆಯನ್ನು ಕೈಗೆ ಕೊಟ್ಟಾಗ ಅದರಲ್ಲಿ ಒಟ್ಟು ೧೦೦ ಗುಣಗಳಲ್ಲಿ ೫೦ ಗುಣಗಳನ್ನು ಮಾತೃಭಾಷೆಯಲ್ಲಿದ್ದದ್ದನ್ನು ಸಂಸ್ಕೃತಕ್ಕೆ, ಸಂಸ್ಕೃತದಲ್ಲಿದ್ದದ್ದನ್ನು ಮಾತೃಭಾಷೆಗೆ ಭಾಷಾಂತರಿಸುವ ವ್ಯವಸ್ಥೆ ಇತ್ತು. ಹಿಂದಿ, ಮರಾಠಿ, ಗುಜರಾಥಿ ಹೀಗೆ ಎಲ್ಲ ಭಾಷೆಗಳಿಗೆ ಅನುವಾದಿಸುವ ಸೌಕರ್ಯವಿದ್ದರೂ ಕನ್ನಡಕ್ಕೆ ಭಾಷಾಂತರಿಸಲು ಅನುಕೂಲವಿದ್ದಿಲ್ಲವೆಂದು ನನಗನಿಸಿತು. ಇದನ್ನು ತಿಳಿದ ನಾನು ೫೦ ಗುಣಗಳ ಪ್ರಶ್ನೆಯನ್ನು ಬಿಡಿಸದಿದ್ದರೆ ಉಳಿದುದರಲ್ಲಿ ಏನು ಬಿಡಿಸುವದೆಂದು ಭಯವಾಗಿ ಕಾಲೇಜಿನ ಪ್ರಿನ್ಸಿಪಾಲರನ್ನು ಕರೆದು- ನಾವು ಫಾರ್ಮ ತುಂಬುವಾಗ 'ಕರ್ನಾಟಕ ಭಾಷಾ' ಎಂದು ತುಂಬಿದ್ದೇವೆ. ಈ ಪೇಪರಿನಲ್ಲಿ ಮಾತೃಭಾಷೆಯಾದ ಕರ್ನಾಟಕ ಭಾಷೆಯ ಅನುವಾದಕ್ಕೆ ಅನುಕೂಲವಿಲ್ಲವೆಂದು ತಿಳಿಸಿದೆ. ಆಗ ಅವರು "ನಿಮ್ಮಲ್ಲಿ ಕನ್ನಡ ಪುಸ್ತಕವಿದೆಯೇ?" ಎಂದು ಕೇಳಿದರು. ನಮ್ಮಲ್ಲಿ ಕನ್ನಡ ಪುಸ್ತಕವಿರಲಿಲ್ಲ. ಆದರೆ ಒಬ್ಬರಲ್ಲಿ ಒಂದು ಡೈರಿ ಇತ್ತು. ಡೈರಿಯ ಕೊನೆಯ ಪುಟದಲ್ಲಿ ಪುರಾಣದ ಜಾಹೀರಾತು ಕೊಟ್ಟಿದ್ದರು. ಅದರಲ್ಲಿದ್ದ ಈ ವಿಷಯ ಅವರಿಗೆ ತಿಳಿಸಿದಾಗ ಕನ್ನಡದಲ್ಲಿದ್ದದ್ದನ್ನು ಸಂಸ್ಕೃತಕ್ಕೆ, ಸಂಸ್ಕೃತದಲ್ಲಿದ್ದದ್ದನ್ನು ಕನ್ನಡಕ್ಕೆ ಬರೆಯಿರೆಂದು ಪ್ರಿನ್ಸಿ-ಪಾಲರು ತಿಳಿಸಿದರಲ್ಲದೆ ಮುಂದಿನ ಸಲ ಪತ್ರಿಕೆಗಳಲ್ಲಿ ಈ ವ್ಯವಸ್ಥೆ ಮಾಡುವದಾಗಿ ಹೇಳಿದರು. ಅವರ ಸೂಚನೆಯಂತೆ ಎಲ್ಲರೂ ಆ ಕನ್ನಡದ ಭಾಗವನ್ನು ಬರೆದು ಕೊಡು ಸಂಸ್ಕೃತದಲ್ಲಿ ಬರೆದೆವು. ಪರೀಕ್ಷಾ ಭವನದಿಂದ ಹೊರಗೆ ಬಂದ ನಂತರ ನಮ್ಮ ಸಹದ್ಯೋಗಿಗಳಲ್ಲಿ ಕೆಲವರು ನೀವು ಈ ರೀತಿ ಪ್ರಿನ್ಸಿಪಾಲರನ್ನು ಕೇಳಿದುದು ಸರಿಯಲ್ಲವೆಂದು ಸಿಟ್ಟಾದರಲ್ಲದೆ ನಾವು ನಪಾಸಾಗುವೆವೆಂದು ಗೊಣಗುಟ್ಟಿದರು. ಮುಂದೆ ಪರೀಕ್ಷೆ ಪರಿಣಾಮ ೨ ತಿಂಗಳ ನಂತರ ಬಂದಿತು. ಆ ಪರಿಣಾಮ ನೋಡಲು ಛತ್ರದ ಹಳ್ಳಿ ಪಂಡಿತ ಚಂದ್ರಶೇಖರ ಶಾಸ್ತ್ರಿಗಳೊಡನೆ ಹೋದಾಗ ೯ ಜನರಲ್ಲಿ ಎಲ್ಲರೂ ನಪಾಸಾಗಿ ನನ್ನದೊಂದೇ ಪಾಸಾದುದು ಕಂಡು ಬಂದಿತು. ಆಗ ನನಗೆ ವಿಚಿತ್ರವಾಯಿತು. ಹುಮ್ಮಸ್ಸಿನಿಂದ ಹೋದವರ ಪಾಡು ಹೀಗಾಯಿತಲ್ಲಾ ಎಂದೆನಿಸಿತು.

ಮುಂದೆ ೨ನೇ ವರ್ಷ ನ್ಯಾಯ ಪರೀಕ್ಷೆಗೆ ಕೂಡ್ರಲು ವಿಚಾರಿಸಿ ಅದರ ಅಭ್ಯಾಸವನ್ನು ಪ್ರಾರಂಭಿಸಿದೆ. 'ನ್ಯಾಯ' ಓದುವುದರಲ್ಲಿ ನಿರಾಶೆ ಹೊಂದಿದವರೇ ಬಹಳ; ಒಂದೇ ವರ್ಷದಲ್ಲಿ ಮುಗಿಸುವುದೂ ಕಷ್ಟ, ಎಂದು ಹೇಳುವ ಮಾತನ್ನು ಕೇಳಿದ ನಾನು ನನ್ನಷ್ಟಕ್ಕೆ ನಾನೇ ಧೈರ್ಯ ತೆಗೆದುಕೊಂಡು ನ್ಯಾಯ ಶಾಸ್ತ್ರದ ಗ್ರಂಥಗಳನ್ನು ಅಭ್ಯಸಿಸಿ ಅದೇ ವರ್ಷ ೧) ನ್ಯಾಯದ ಆದ್ಯ ಪರೀಕ್ಷೆ ೨) ಸಾಹಿತ್ಯದ ಮಧ್ಯಮ

ಎರಡೂ ಪರೀಕ್ಷೆಗಳಿಗೂ ಕುಳಿತುಕೊಂಡೆ. ಆದರೆ ನನ್ನ ಸಂಗಡಿಗರಾರೂ ಕೂಡ್ರಲಿಲ್ಲ. ನಾನು ಎರಡೂ ಪರೀಕ್ಷೆಗಳಿಗೆ ಕುಳಿತಾಗ, ನ್ಯಾಯ ಪರೀಕ್ಷೆ ಮುಗಿದ ನಂತರ ಸಾಹಿತ್ಯದ ಮಧ್ಯಮಾದಲ್ಲಿಯ ೨ ಪತ್ರಿಕೆಗಳಲ್ಲಿ ಒಂದು ಪತ್ರಿಕೆಯನ್ನು ಮುಗಿಸಿದೆ. ೨ನೆಯ ಪತ್ರಿಕೆಯಲ್ಲಿಯ ಮಾಲವಿಕಾಗ್ನಿಮಿತ್ರದಲ್ಲಿಯ ವಿಷಯವನ್ನು ಸಂಸ್ಕೃತದಲ್ಲಿ ಬರೆಯಿರಿ ಎಂದು ಕೇಳಿದ್ದರಲ್ಲದೆ ಮುಂದೆ "ಅಥವಾ" ಎಂದು ಕೆಲ ಪ್ರಶ್ನೆಗಳನ್ನು ಕೊಟ್ಟಿದ್ದರು. ಈ ಅಥವಾ ಎನ್ನುವುದು ಒಂದೇ ಪ್ರಶ್ನೆಗೆ ಮಾತ್ರವಿತ್ತು. ನಾನು ಮೇಲಿನದನ್ನು ಮಾತ್ರ ಬಿಡಿಸಿ ಉಳಿದವುಗಳನ್ನು ಬಿಡಿಸಲಿಲ್ಲ. ಬಿಡಿಸಿದ ಒಂದು ಪ್ರಶ್ನೆಗೆ ಮಾತ್ರ ೪೦ ಮಾರ್ಕ್ಸ್ ಇತ್ತು. ಉಳಿದ ೬೦ಮಾರ್ಕ್ಸ್ ಪ್ರಶ್ನೆಗಳಿಗೆ ಉತ್ತರಿಸಿರಲಿಲ್ಲ. ಪರೀಕ್ಷಾ ಭವನದಿಂದ ಹೊರಗೆ ಬಂದು ನಮ್ಮ ಜೊತೆ ಓದುತ್ತಿದ್ದ ರಾಮದುರ್ಗದ ಮರುಳಾರಾಧ್ಯರಿಗೆ ಕೇಳಿದಾಗ ಅವರು ಗಾಬರಿಗೊಂಡು ಪ್ರಶ್ನೆಪತ್ರಿಕೆಯನ್ನು ನೋಡಿ, ನೀವು ಉತ್ತರಿಸಿದುದೇ ತಪ್ಪೆಂದು ತಿಳಿಸಿದರು. ಅವರು ಹೇಳಿದುದು ಸರಿ ಇದೆಯೆಂದು ತಿಳಿದ ನನಗೆ ಕಸಿವಿಸಿಯಾಯಿತಲ್ಲದೆ ಕಠಿಣವಾದ ನ್ಯಾಯಶಾಸ್ತ್ರದಲ್ಲಂತೂ ನಪಾಸಾಗುವದರಲ್ಲಿ ಸಂದೇಹವೇ ಇಲ್ಲೆಂದು ಮನಸ್ಸಿಗೆ ಹಳಹಳಿಯಾಯಿತು. ಮುಂದೆ ಕೆಲವು ದಿನಗಳ ನಂತರ ನಾನೊಂದು ಕನಸನ್ನು ಕಂಡೆ. ಕನಸಿನಲ್ಲಿ ಎರಡೂ ಪರೀಕ್ಷೆಗಳು ಪಾಸಾದವೆಂದು ತಿಳಿದು ಹಾಳಕೆರೆಯಲ್ಲಿ ಮೆರವಣಿಗೆ ಮಾಡಿದಂತಾಯಿತು. ಕನಸಿನಿಂದ ಎಚ್ಚರಾದಾಗ ನಾನು ನಪಾಸಾಗುವುದೇ ನಿಶ್ಚಿತವೆನಿಸಿತು. ಆದರೆ ಪರೀಕ್ಷೆ ಪರಿಣಾಮ ತಿಳಿದಾಗ 'ನ್ಯಾಯ ಆದ್ಯ' ಪ್ರಥಮ ಶ್ರೇಣಿಯಲ್ಲಿ ಸಾಹಿತ್ಯ ಮಾಧ್ಯಮಾ ಪರೀಕ್ಷೆ ಪಾಸು ಮಾತ್ರ ಆಗಿತ್ತು. ನಾನು ಪ್ರಯತ್ನಿಸಿ ಉತ್ತರಿಸಿದ ಒಂದೇ ಪ್ರಶ್ನೆಗೆ ಹೆಚ್ಚು ಮಾರ್ಕ್ಸ್ ಕೊಟ್ಟಿರಬೇಕೆಂದು ಸಂತೋಷವಾಯಿತು. ಪರೀಕ್ಷೆ ಮುಗಿಸಿ ನನ್ನೂರಿಗೆ ಬರುವಷ್ಟರಲ್ಲಿಯೇ ಅಮ್ಮನವರು ಲಿಂಗೈಕ್ಯರಾಗಿದ್ದರು.

ಕೊಪ್ಪಳದಲ್ಲಿ : ಅಂದು ಕೊಪ್ಪಳದ ಶ್ರೀ ಮ. ನಿ. ಪ್ರ. ಶಾಂತವೀರ ಸ್ವಾಮಿಗಳು ನ್ಯಾಯಶಾಸ್ತ್ರದಲ್ಲಿ ಪಂಡಿತರೆಂದು ಪ್ರಸಿದ್ಧರಾಗಿದ್ದರು. ಅವರ ದರ್ಶನ ಪಡೆಯಬೇಕೆಂಬ ಉತ್ಕಟೇಚ್ಛೆ ಇದ್ದ ನನಗೆ ಅವರ ದರ್ಶನ ಪಡೆದಮೇಲೆ ಬಹಳೇ ಸಂತೋಷವಾಯಿತು. ಹಾಗೆಯೇ ಅವರೂ ಬಹಳ ಸಂತೋಷದಿಂದ ನನ್ನ ಜೊತೆ ಮಾತನಾಡಿದರು. ಅಪ್ಪಗಳ ದರ್ಶನ ಪಡೆಯುವ ವೇಳೆಯಲ್ಲಿ ೮೦ ವರ್ಷದ ಮುದುಕ ಚೆನ್ನವೀರದೇವರು ಕುದುರೆಯನೇರಿಕೊಂಡು ಬಂದರು. ಅವರು ಆಗ ಮೈಸೂರು, ವಿರಕ್ತಮಠಕ್ಕೆ ಒಬ್ಬ ಸ್ವಾಮಿಗಳನ್ನು ಮಾಡಬೇಕೆನ್ನುವ ಪ್ರಯತ್ನದಲ್ಲಿದ್ದರು. ಸ್ವಾಮಿಗಳ ಸನ್ನಿಧಿಗೆ ಬಂದು ನಮಸ್ಕರಿಸಿ ಕುಳಿತು ಕೊಂಡಾಗ ನನ್ನ ಕಡೆಗೆ ನೋಡಿ, 'ಬುದ್ಧಿ ಇವರಾರು ? ಹೊಸಬರು ಕಾಣುತ್ತಾರಲ್ಲಾ' ಎಂದು ಕೇಳಿದರು. ಅಪ್ಪಗಳು ಇವರು ನಾಗಪ್ಪಯ್ಯ ಶಾಸ್ತ್ರಿಗಳ ಮೊಮ್ಮಕ್ಕಳು,

ಕಾಶಿಯಲ್ಲಿ ಓದುತ್ತಿದ್ದಾರೆಂದು ಹೇಳಿದರು: ಆಗ ಅವರು ಆನಂದ ತುಂದಿಲರಾಗಿ "ಓಹೋ, ನಾಗಪ್ಪಯ್ಯ ಶಾಸ್ತ್ರಿಗಳ ಮೊಮ್ಮಕ್ಕಳೇ ? !" ನಾವು ಬಂದ ಕೆಲಸ (ಮೈಸೂರು ವಿರಕ್ತಮಠಕ್ಕೆ ಸ್ವಾಮಿಗಳನ್ನು ಮಾಡಬೇಕೆಂದು ಒಬ್ಬರನ್ನು ಹುಡುಕುವದು)ಸಫಲವಾಯಿತೆಂದು ಉದ್ಗಾರ ತೆಗೆದರು. ಅದನ್ನು ಕೇಳಿದ ನನಗೆ ನಗು ಬಂದಿತು. "ಏನ್ರೀ ಯಜಮಾನರೆ ! ನೀವು ಅಪೇಕ್ಷೆ ಮಾಡಿದ್ದು ಸಾಧಿಸಲಿಲ್ಲವೆಂದು ನಿರಾಶರಾಗಬೇಡಿರಿ. ನಾನು ಬಹಳ ಚಿಕ್ಕವನಿದ್ದಾಗಲೇ ಲಗ್ನ ಮಾಡಿದ್ದಾರೆ. ಆದ್ದರಿಂದ ನಿಮ್ಮ ಕೈಯಲ್ಲಿ ಸಿಗುವುದು ತಪ್ಪಿದಂತಾಯಿತು" ಎಂದೆ. ಇದೊಂದು ಸುದೈವವೆಂದು ತಿಳಿದಿದ್ದ ಅವರು ನಿಟ್ಟುಸಿರುಗರೆದರು: ಮುಂದೆ ಸ್ವಾಮಿಗಳ ಸನ್ನಿಧಿಯಲ್ಲಿಯೇ ನಾನು ೩-೪ ದಿವಸ ಇರುವ ಪ್ರಸಂಗ ಒದಗಿತು. ವೇದಾಂತ ದರ್ಶನದ ವಿವರ್ತವಾದವನ್ನು ಖಂಡಿಸಿ ಸಿದ್ಧಾಂತದ ಅವಿಕೃತ ಪರಿಣಾಮವಾದವನ್ನು ಎತ್ತಿಹಿಡಿಯುವಂಥ ಗ್ರಂಥ "ಶಿವಾದ್ವೈತ ಮಂಜರಿ". ಅದು ತರ್ಕಪೂರ್ಣವಾದ ಗ್ರಂಥ. ಅದನ್ನು ಶ್ರೀಗಳು ಓದುತ್ತ ತಾವು ಸಂತೋಷ ಹೊಂದಿ ನನ್ನನ್ನೂ ಸಂತೋಷಪಡಿಸುತ್ತಿದ್ದರು. ಆ ಮೇಲೆ ನಾನು ಊರಿಗೆ ಹೊರಟು ನಿಂತಾಗ ೧೦೦ ರೂ. ಗಳನ್ನು ಆಶೀರ್ವದಿಸಿ ನನ್ನನ್ನು ಬೀಳ್ಕೊಟ್ಟರು. ಮುಂದೆ ಕೆಲವು ದಿವಸಗಳ ನಂತರ ಇಳಕಲ್ಲಿನಲ್ಲಿ ನಡೆಯುತ್ತಕ್ಕ ವಿರಕ್ತಾಧಿಕಾರಕ್ಕೆ ಹಾಲಕೆರೆಯ ಹಾಗೂ ಹಾನಗಲ್ ಸ್ವಾಮಿಗಳವರು ದಯಮಾಡಿಸುವಾಗ ಇಳಕಲ್ಲಿಗೆ ನನ್ನನ್ನೂ ಕರೆದುಕೊಂಡು ಹೋದರು. ಅದೇ ಪ್ರಸಂಗದಲ್ಲಿ ನನ್ನ ಜೊತೆ ಓದುತ್ತಿದ್ದ ಶಂಕರಶಾಸ್ತ್ರಿಗಳು ಗದಗ, ಬಸವರಾಜ ಶಾಸ್ತ್ರಿಗಳು ಪಗಡದಿನ್ನಿ ಇವರೂ ಅಲ್ಲಿ ಉಪಸ್ಥಿತರಿದ್ದರು. ಕಾಶಿಯಿಂದ ಬಂದ ನಮ್ಮ ಮೂವರ ವ್ಯಾಖ್ಯಾನವನ್ನು ಅಲ್ಲಿ ಏರ್ಪಡಿಸಿದ್ದರು. ಈ ವೇಳೆಯಲ್ಲಿ ಶಿವಯೋಗ ಮಂದಿರ ಮತ್ತು ಅಖಿಲ ಭಾರತ ವೀರಶೈವ ಮಹಾಸಭೆ ಇವುಗಳನ್ನು ಸ್ಥಾಪಿಸಿದ ೨೦ನೇ ಶತಮಾನದ ಕಾರಣಿಕ ಮಹಾಪುರುಷರೆನಿಸಿದ ಹಾನಗಲ್ ಕುಮಾರ ಸ್ವಾಮಿಗಳು ಅಲ್ಲಿ ಉಪಸ್ಥಿತರಿದ್ದರು. ಅದೇ ಅವರ ಕೊನೆಯ ದರ್ಶನ.

**ಪುನಃ ಕಾಶಿಗೆ**

ಹೀಗೆ ಕೆಲವು ದಿನಗಳು ಕಳೆದ ನಂತರ ಪುನಃ ಕಾಶಿಗೆ ಹೋಗಿ (೧) ಕಾವ್ಯತೀರ್ಥ (೨) ನ್ಯಾಯ ಮಧ್ಯಮ ಪರೀಕ್ಷೆಗಳ ಬಗೆಗೆ ಅಭ್ಯಸಿಸಿ ಫಾರ್ಮ ತುಂಬಿ ವರ್ಧಮಾನದಲ್ಲಿ ನ್ಯಾಯ ಮಧ್ಯಮಾ ಪರೀಕ್ಷೆಯನ್ನೂ, ಕಲ್ಕತ್ತೆಯಲ್ಲಿ ಕಾವ್ಯತೀರ್ಥ ಪರೀಕ್ಷೆಯನ್ನೂ ಮುಗಿಸಿದೆ. ಇವು ಮುಗಿದ ಮಾರನೇ ವರುಷ ನ್ಯಾಯತೀರ್ಥ ಪರೀಕ್ಷೆಯ ಅಭ್ಯಾಸವನ್ನು ಮಾಡುತ್ತ ವೇದಾಂತ ಆದ್ಯ ಪರೀಕ್ಷೆಯನ್ನು ಅಭ್ಯಸಿಸಿ ಅದರಲ್ಲಿ (ವೇದಾಂತ ಆದ್ಯ ಪರೀಕ್ಷೆಯಲ್ಲಿ.) ಉತ್ತೀರ್ಣನಾದೆನು. ಮರುವರ್ಷ ನ್ಯಾಯತೀರ್ಥ ಅಭ್ಯಸಿಸುತ್ತ ವೇದಾಂತ ಮಧ್ಯಮಾ ಪರೀಕ್ಷೆ ಪಾಸಾದೆನು. ನ್ಯಾಯತೀರ್ಥ ಅಭ್ಯಾಸದೊಂದಿಗೆ

ವೇದಾಂತತೀರ್ಥಪರೀಕ್ಷೆಯ ಅಭ್ಯಾಸಕ್ಕೆ ಹೆಚ್ಚು ಗಮನ ಕೊಟ್ಟು ವೇದಾಂತ ತೀರ್ಥಕ್ಕೆ ಹಚ್ಚಿದ ಪ್ರಮುಖ ಗ್ರಂಥಗಳ ಅಭ್ಯಾಸ ಮಾಡಲು "ಬಾಲಕೃಷ್ಣಮಿಶ್ರ" ಗುರುಗಳ ಹತ್ತಿರ ಹೋಗುತ್ತಿದ್ದೆ. ಆಗ ಅವರು ಹೇಳುವ ಅಭ್ಯಾಸ ಅವರು ಅರ್ಥೈಸುವ ರೀತಿಗಳನ್ನು ಕಂಡು ಸಂತೋಷಗೊಂಡೆ. ವೇದಾಂತ ಶಾಸ್ತ್ರದಲ್ಲಿ ಮುಖ್ಯವಾದ "ಅದ್ವೈತ ಸಿದ್ಧಿ" ಗ್ರಂಥವನ್ನು ಓದಲು ಕಳಿಸಿಕೊಟ್ಟವರು ಹಿರಿಯರಾದ ಪಂಡಿತ ಗೌರೀಶಂಕರ ಸ್ವಾಮಿಗಳು. ಅವರು ಪಾಠವನ್ನು ಹೇಳುತ್ತಿರುವಾಗ ಅವರಲ್ಲಿಯೇ ಅಭ್ಯಾಸಮಾಡಿ ವೇದಾಂತ ಆಚಾರ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾದ ಕೆಲವರು ಪಾಠವನ್ನು ಕೇಳುವ ಅಭಿಲಾಷೆಯಿಂದ ಬಂದು ಕೂಡ್ರುತ್ತಿದ್ದರು. ಅವರಿಗೆ ವೇದಾಂತದಲ್ಲಿ ಪ್ರಶ್ನೆಗಳನ್ನು ಗುರುಗಳು ಕೇಳುತ್ತಿದ್ದರು. ಅವರೆದುರು ಅವರಿಗ ಪ್ರಶ್ನೆಗಳಿಗೆ ಉತ್ತರಿಸುವದಾಗುತ್ತಿದ್ದಿಲ್ಲ. ಆಗ ಗುರುಗಳು "ದೇಖೊ ನಾಗಭೂಷಣಜಿ ಜೋ ಆದಮಿ ಪರೀಕ್ಷಾ ದೇನೇಕೊ ಚಾಹತಾ ಹೈ ವಹ ಬಹುತ ಮೂರ್ಖ ರಹತಾ ಹೈ" (ಪರೀಕ್ಷೆಗೆ ಕೂಡಲು ಬಯಸುವನು ಮೂರ್ಖನಿರುತ್ತಾನೆ). ನೀನೂ ಪರೀಕ್ಷೆಗೆ ಕೂಡಬೇಕೆಂದು ಅಪೇಕ್ಷಿಸಿದರೆ ನಾನು ನಿನಗೆ ಹೇಳುವದಿಲ್ಲವೆಂದು ಹೇಳಿದರು. ಅವರ ಈ ಮಾತನ್ನು ಕೇಳಿದ ನನಗೆ ಈ ಪರೀಕ್ಷೆ ಕೊಡಬೇಕು ಎನ್ನುವ ಅಪೇಕ್ಷೆ ಇಲ್ಲದಾಯಿತು. ಆ ಜ್ಞಾನವನ್ನು ಪಡೆದು ಪರೀಕ್ಷೆಗೆ ಕೂಡ್ರದ ನಾನು ಕಾಶೀ ಕ್ಷೇತ್ರದಲ್ಲಿ (೧೯೩೦) ಚಿತ್ರದುರ್ಗದ ಮಹಾಸ್ವಾಮಿಗಳು ಸ್ಥಾಪಿಸಿದ ವಿದ್ಯಾರ್ಥಿ ಮಂದಿರದಲ್ಲಿ (ಒಂದೂವರೆ ತಿಂಗಳು) ಎಲ್ಲ ಶಾಸ್ತ್ರಿಗಳ ಸಮ್ಮುಖದಲ್ಲಿ "ಸಿದ್ಧಾಂತ ಶಿಖಾಮಣಿಯ" ಪ್ರವಚನ ಮಾಡಿದೆನು. ೧೯೩೧ ಕ್ಕೆ ನಾನು ಕರ್ನಾಟಕಕ್ಕೆ ಬಂದೆನು. ಅಲ್ಲಿಂದ ಬರಲು ಖರ್ಚಿಗೆ ಹುಬ್ಬಳ್ಳಿಯ ಮೂರು ಸಾವಿರಮಠದ ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳವರು, ಸಂಪಗಾಂವಿ ಚರಮೂರ್ತಿಗಳ ಹೇಳಿಕೆಯ ಪ್ರಕಾರ ೧೦೦ ರೂಪಾಯಿಗಳನ್ನು ನನಗೆ ಕಳಿಸಿಕೊಟ್ಟಿದ್ದರು.

ಶಿವಯೋಗ ಮಂದಿರಕ್ಕೆ : ನಾನು ಕರ್ನಾಟಕಕ್ಕೆ ಬಂದಮೇಲೆ ಸಂಪಗಾಂವಿ ಚರಮೂರ್ತಿಗಳು ನನ್ನನ್ನು ಶಿವಯೋಗಮಂದಿರಕ್ಕೆ ಕರೆದುಕೊಂಡು ಹೋದರು. ಆಗ್ಗೆ ಪಂಡಿತ ರೇವಣಸಿದ್ಧ ಶಾಸ್ತ್ರಿಗಳು ಅಲ್ಲಿ ಅಧ್ಯಾಪಕರಾಗಿದ್ದರು. ಅವರ ಸನ್ನಿಧಿಯಲ್ಲಿ ಈಗಿನ ಹಾನಗಲ್ಲ ಶ್ರೀ ಮ. ನಿ. ಪ್ರ. ಸದಾಶಿವಸ್ವಾಮಿಗಳು, ತೆಲಸಂಗದ ಪಟ್ಟಾಧ್ಯಕ್ಷರು, ಗುಳೇದ ಗುಡ್ಡದ ಶ್ರೀಗಳವರು– ಮೊದಲಾದವರು ನ್ಯಾಯಶಾಸ್ತ್ರದ ಅಭ್ಯಾಸ ನಡೆಸಿದ್ದರು. 'ಮುಕ್ತಾವಲಿ' ಎಂಬ ಗ್ರಂಥದ ಅಭ್ಯಾಸ ಪ್ರಾರಂಭವಾಗಿತ್ತು. ಆಗ ನಾನು ನ್ಯಾಯಶಾಸ್ತ್ರ ಓದಿದ್ದನ್ನು ತಿಳಿದ ಪಂಡಿತ ರೇವಣಸಿದ್ಧಶಾಸ್ತ್ರಿಗಳು ತಾವು ಹೇಳಬೇಕಾದ ಗ್ರಂಥದ ಅಭ್ಯಾಸವನ್ನು ನನಗೇ ಹೇಳಲು ತಿಳಿಸಿದರು. ಆ ಪ್ರಕಾರ ಎರಡು ವಾರಗಳವರಗೆ ನಾನು ನೆರವೇರಿಸಿದೆನು.

ಹಾಲಕೆರೆಗೆ : ಮುಂದೆ ಶಿವಯೋಗ ಮಂದಿರದಿಂದ ಹಾಲಕೆರೆಗೆ ಬಂದೆನು. ಅಲ್ಲಿಯ ಮಠದಲ್ಲಿರುವ ಪಾಠಶಾಲೆಗೆ ಗೌರೀನಾಥ ಶಾಸ್ತ್ರಿಗಳು ಪ್ರಾಧ್ಯಾಪಕರಾಗಿದ್ದರು. ಅವರು ನನಗೆ ಚಿರಪರಿಚಿತರು. ನಾನು ಓದುವಾಗ ನನಗಿಂತ ಒಂದು ವರ್ಷ ಮುಂದ ಓದುತ್ತಿದ್ದರು. ಅವರು ನನಗೆ ನೀವೇ ಈ ಪಾಠಶಾಲೆಯ ಅಧ್ಯಾಪಕರಾಗಿರೆಂದು ಹೇಳು ತ್ತಿದ್ದರು. ಹುಬ್ಬಳ್ಳಿಯ ಜಗದ್ಗುರುಗಳಾದ ಶ್ರೀ ಗುರುಸಿದ್ಧಸ್ವಾಮಿಗಳು ನನ್ನನ್ನು ತಮ್ಮ ಮಠದಲ್ಲಿ ಪ್ರಾಧ್ಯಾಪಕರಾಗಬೇಕೆಂದು ತಿಳಿಸಿದ್ದಾರೆಂದು ಅವರಿಗೆ ಹೇಳುತ್ತಿದ್ದ. ಮುಂದೆ ಸ್ವಲ್ಪ ದಿವಸದಲ್ಲಿ ಹುಬ್ಬಳ್ಳಿಯಲ್ಲಿ ಕಾಲರಾಬೇನೆ ಸುರುವಾದದ್ದರಿಂದ ಹುಬ್ಬಳ್ಳಿಯ ಜಗದ್ಗುರುಗಳ ದರ್ಶನಕ್ಕೆ ಹೋಗುವುದು ತಡವಾಯಿತು. ಕಾಲರಾ (ಮಾರಿಕಾ) ರೋಗ ಕಡಿಮೆಯಾದ ನಂತರ ಅವರ ದರ್ಶನ ಪಡೆಯಬೇಕೆನ್ನುವಷ್ಟರಲ್ಲಿ ಯಾದಗಿರಿ ಸಂಸ್ಕೃತ ಕಾಲೇಜದ ಪ್ರಿನ್ಸಿಪಾಲರಾಗಿದ್ದ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳವರು ತಮ್ಮ ಪ್ರಾಧ್ಯಾಪಕ ವೃತ್ತಿಯನ್ನು ಬಿಟ್ಟು ಮೂರುಸಾವಿರ ಮಠಕ್ಕೆ ಬಂದು "ನಾನು ಇಲ್ಲಿಯೇ ಸಂಸ್ಕೃತ ಕಾಲೇಜ ಪ್ರಾರಂಭಿಸುತ್ತೇನೆ. ನೀವು ಆಶ್ರಯ ಕೊಡಬೇಕು" ಎಂದು ಬಿನ್ನವಿಸಿಕೊಳ್ಳಲು, "ಇಲ್ಲಾ, ನಾವು ಪಂಡಿತ ನಾಗಭೂಷಣ ಶಾಸ್ತ್ರಿಗಳಿಗೆ ಅಧ್ಯಾಪಕರಾಗಲು ವಚನಕೊಟ್ಟಿರುವೆವು" ಎಂದು ಅವರಿಗೆ ತಿಳಿಸಿದರು. ಆದರೂ ಅವರು "ನನಗೆ ಇಷ್ಟುವರ್ಷ ಯಾದಗಿರಿ ಕಾಲೇಜನ್ನು ನಡೆಸಿದ ಅನುಭವ ಇದೆ ಆದ್ದರಿಂದ ನೀವು ನನಗೆ ಇಲ್ಲಿ ಅವಕಾಶಮಾಡಿಕೊಟ್ಟರೆ ನಾನು ಪಂಡಿತ ನಾಗಭೂಷಣಶಾಸ್ತ್ರಿಗಳವರಿಗೆ ಬೇರೆ ಕಡೆಗೆ ವ್ಯವಸ್ಥೆ ಮಾಡುವೆ" ಎನ್ನಲಾಗಿ ಜಗದ್ಗುರುಗಳು ನಿರ್ವಾಹವಿಲ್ಲದೆ ಒಪ್ಪಬೇಕಾಯಿತು. ಇಷ್ಟರಲ್ಲಿಯೇ ಧಾರವಾಡದ ಮುರುಘಾಮಠದಲ್ಲಿ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳು ೬೩ ಪುರಾತನರ ಪೂಜೆಯನ್ನು ವಿಜೃಂಭಣೆಯಿಂದ ನಡೆಸಲು ಪ್ರಾರಂಭಿಸಿದ್ದರು. ಆಗ ಸಮಾಜದ ಎಲ್ಲ ಜಗದ್ಗುರುಗಳು, ಸ್ವಾಮಿಗಳು, ಪಂಡಿತರು ಕಲಾವಿದರೆಲ್ಲರೂ ಉಪಸ್ಥಿತರಾಗಲು ಅವಕಾಶ ದೊರೆಯಿತು. ಆಗ ನಾನೂ ಅದರಲ್ಲಿ ಭಾಗವಹಿಸಿದ್ದೆನು. ಪಂಡಿತ ಚಂದ್ರಶೇಖರ ಶಾಸ್ತ್ರಿಗಳೂ ಬಂದಿದ್ದರು. ಅವರು ನನಗೆ "ನೀವು ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ಅಧ್ಯಾಪಕರಾಗಬೇಕಿತ್ತು. ನಾನು ಯಾದಗಿರಿಯನ್ನು ಬಿಟ್ಟಿರುವುದರಿಂದ ಇಲ್ಲಿ ಪ್ರಿನ್ಸಿಪಾಲನಾಗಿ ಕೆಲಸ ಮಾಡಲು ಕೇಳಿಕೊಂಡು ನಿಮಗೆ ಬೇರೆ ಕಡೆಗೆ ಪ್ರಯತ್ನಮಾಡುವದಾಗಿ ತಿಳಿಸಿದ್ದೇನೆ. ಆದ್ದರಿಂದ ನೀವು ಬೆಟ್ಟದಪುರ (ಮೈಸೂರಿನ ಹತ್ತಿರವಿರುವದು) ಕ್ಕೆ ಹೋಗಬೇಕು," ಎಂದು ಹೇಳಿದರು. ಅವರ ಮಾತಿನಲ್ಲಿ ನನಗೆ ಯಾವ ಆಸಕ್ತಿಯೂ ಉಂಟಾಗಲಿಲ್ಲ. "ಏನಾಗುತ್ತದೆಯೋ ನೋಡೋಣ" ಎಂದು ಸಮಾಧಾನದಿಂದ ಇದ್ದೆ.

ಮುರುಘಾಮಠದಲ್ಲಿ ಏರ್ಪಡಿಸಿದ ಪೂಜೆಗೆಂದು ಕೂಡಿದ ಪಂಡಿತರೆಲ್ಲರೂ "ಪಂಡಿತ ಮಂಡಲ"ವನ್ನು ಸ್ಥಾಪಿಸಿ ಅದರ ಮುಖಾಂತರವಾಗಿ ಕೆಲವು ಕಾರ್ಯಕ್ರಮು ಗಳನ್ನು ಯೋಜಿಸಿಕೊಂಡಿದ್ದರು. ಅದರಲ್ಲಿ ಭಾಗವಹಿಸಲು ನನಗೂ ಅವಕಾಶ ಸಿಕ್ಕಿತ್ತು. ಪೂಜಾ ಸಮಾರಂಭ ಮುಗಿದ ನಂತರ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಸ್ವಾಮಿಗಳ ಆಶೀರ್ವಾದ ಪಡೆದು ಊರಿಗೆ ಹೊರಟೆನು. ಸ್ವಲ್ಪ ಅಂತರ ಮುಂದೆ ಹೋದ ನನ್ನನ್ನು ಮೃತ್ಯುಂಜಯಪ್ಪಗಳು ಕರೆಸಿಕೊಂಡು "ಶಾಸ್ತ್ರಿಗಳೇ, ನೀವು ಎಲ್ಲಿಯೂ ಅಧ್ಯಾಪಕರಾಗಲು ವಚನ ಕೊಡಬೇಡಿರಿ" ಎಂದು ಅಪ್ಪಣೆ ಮಾಡಿದರು. ಆಗ ಅವರ ಮಾತಿನ ರಹಸ್ಯ ತಿಳಿಯದಾದೆನು. 'ಆಗಲಿ ಬುದ್ಧಿ' ಎಂದು ಪುನಃ ನಮಸ್ಕರಿಸಿ ಊರಿಗೆ ಹೊರಟು ಹೋದೆನು.

ಗದುಗಿಗೆ : ಮುಂದೆ ಸ್ವಲ್ಪ ದಿವಸ ನಿಡಗುಂದಿಯಲ್ಲಿರುವ ಸೋದರತ್ತೆಯ ಮನೆಯಲ್ಲಿ ರಲಾರಂಭಿಸಿದೆನು. ಅಲ್ಲಿಗೆ ಹಾಲಕೆರೆ ಸಮೀಪವಿದ್ದುದರಿಂದ ಮೇಲಿಂದ ಮೇಲೆ ಹೋಗುತ್ತಿದ್ದೆನು. ಆಗ ಹಾಲಕೆರೆ ಸ್ವಾಮಿಗಳಿಗೆ ಗದಗಿನ ಹಡಗಲಿ ಮಠವು ದಾನವಾಗಿ ಬಂದಿತ್ತು. ದಾನವಾಗಿ ಬಂದ ಆ ಮಠದ ಪ್ರವೇಶ ಕಾಲಕ್ಕೆ ಸ್ವಾಮಿಗಳವರು ತಮ್ಮ ಜೊತೆ ನನ್ನನ್ನು ಕರೆದುಕೊಂಡು ನರೇಗಲ್ಲಿಗೆ ಸಮೀಪವಿರುವ ಕೋಡೀಕೊಪ್ಪ ಮಠಕ್ಕೆ ಬಂದರು. ಅಂದು ಬಸವಜಯಂತಿಯ ಕಾರ್ಯಕ್ರಮವು ಅವರ ಸನ್ನಿಧಿಯಲ್ಲಿಯೇ ಪ್ರಾರಂಭವಾಯಿತು. ಅದನ್ನು ಮುಗಿಸಿಕೊಂಡು ಶ್ರೀಗಳ ಸಂಗಡ ಗದುಗಿಗೆ ಬಂದೆನು. ಸಂಗಡ ಗೌರೀನಾಥ ಶಾಸ್ತ್ರಿಗಳು ಇದ್ದರು. ಸ್ವಾಮಿಗಳ ಸನ್ನಿಧಿಯಲ್ಲಿ 'ಶಿವಾನುಭವ ಪ್ರವಚನ' ಕಾರ್ಯಕ್ರಮ ಸುರು-ವಾಯಿತು. ಅದರಲ್ಲಿ ನಾನು ಹಾಗು ಪಂಡಿತ ಗೌರೀನಾಥ ಶಾಸ್ತ್ರಿಗಳು ಭಾಗವಹಿಸು ತ್ತಿದ್ದೆವು. ಈ ಕಾರ್ಯಕ್ರಮ ಒಂದೂವರೆ ತಿಂಗಳು ನಡೆಯಿತು. ನಂತರ ಸ್ವಾಮಿ ಗಳು ಹೋಗುವಾಗ ನೀವು ಇಲ್ಲಿಯೇ ಇದ್ದು ಪಾಠಶಾಲೆಗೆ ಅಧ್ಯಾಪಕರಾಗಿರಬೇಕೆಂದು ಅಪ್ಪಣೆಮಾಡಿದರು. ನಾನು ಹಾಗೆಯೇ ಆಗಲೆಂದು ಒಪ್ಪಿಕೊಂಡೆನು. ಕೆಲವು ವಿದ್ಯಾರ್ಥಿಗಳು ಪಾಠಶಾಲೆಗೆ ಓದಲು ಬಂದರು. ಬೇರೆ ಬೇರೆ ಕಡೆಯಲ್ಲಿ ಅಭ್ಯಸಿಸಿದ ವಿದ್ಯಾರ್ಥಿಗಳೂ ಅದರಲ್ಲಿದ್ದರು. ವಿದ್ಯಾರ್ಥಿಗಳಿಗೆ ಪಾಠಹೇಳುವದಲ್ಲದೆ ಸಾಯಂಕಾಲ ಸಾರ್ವಜನಿಕ ಪ್ರವಚನವನ್ನೂ ಪ್ರಾರಂಭಿಸಲಾಯಿತು. ಆಗ ಗದುಗಿನಲ್ಲಿಯ ಶಹ ಪೂರ ಪೇಟೆಯ ಜನರು ವೇದಾಂತ ಕೇಳುವಲ್ಲಿ ಪ್ರೀತಿಯುಳ್ಳವರಾಗಿ ವೇದಾಂತ ಕೂಟಕ್ಕೆ ಹೋಗುತ್ತಿದ್ದರು. ಅವರೆಲ್ಲ ಈ ಪ್ರವಚನಕ್ಕೆ ತಿರುಗಿದರು. ಇದರಿಂದ ದಿನದಿನಕ್ಕೂ ಪ್ರವಚನ ಕೇಳಲು ಜನ ಬರುವದನ್ನು ಕಂಡು ಬಹಳ ಸಂತೋಷವಾಗು ತ್ತಿತ್ತು. ಈ ವೇಳೆಯಲ್ಲಿ ಪಂಚಾಕ್ಷರಿ ಗವಾಯಿಗಳ[1] ಶಿಷ್ಯರಾದ ಡಾ. ಪುಟ್ಟರಾಜ

ಗವಾಯಿಗಳು ನನ್ನ ಕಡೆಗೆ "ವೇದಾಂತ ಪರಿಭಾಷಾ" (ಇದೊಂದು ಪ್ರಮಾಣ ಗ್ರಂಥ) ಗ್ರಂಥವನ್ನು ಓದಲು ಬರುತ್ತಿದ್ದರು.

ಪ್ರವಚನವು ಗದುಗಿನ ಭಕ್ತರಿಗೊಂದು ಹೊಸ ಉಪಕ್ರಮವೇ ಆಯಿತು. ಇದರಿಂದ ಪ್ರಚೋದನೆಗೊಂಡು 'ಅನುಭವ ಮಂಟಪ' ವೆಂಬ ಹೆಸರಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ನಡೆಸಲಾಯಿತು. ಇದೇ ವೇಳೆಯಲ್ಲಿ ಕೆಲವು ಪ್ರೌಢ ವಿದ್ಯಾರ್ಥಿಗಳು ಅಭ್ಯಾಸಮಾಡಿ ಕಲ್ಕತ್ತಾ ಸಾಹಿತ್ಯ ಪರೀಕ್ಷೆಗೆ ಕುಳಿತುಕೊಂಡು ಉತ್ತೀರ್ಣರಾದರು. 'ನಂದಿವೇರಿ ಮಠ'ದ ಮರಿದೇವರೊಬ್ಬರು ಗದುಗಿನ ನಮ್ಮ ಪಾಠಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗ ಅವರು ಕಪ್ಪತಗುಡ್ಡ ನೋಡಲು ಕರೆದುಕೊಂಡು ಹೋಗಬೇಕೆಂದು ಬಯಸಿದರು. ಆಗ ಪಾದಯಾತ್ರೆಯಿಂದ ಹೋಗಬೇಕೆನ್ನುವ ನಿರ್ಣಯದೊಂದಿಗೆ ಅನೇಕ ಭಕ್ತರು ವಿದ್ಯಾರ್ಥಿಗಳು ಕೂಡಿಕೊಂಡು ಹೋದೆವು. ಮಠ ತಲುಪುವುದರಲ್ಲಿ ಸಾಯಂಕಾಲ ೭-೮ ಗಂಟೆಯಾಯಿತು, ಬಹಳೇ ದಣಿವೂ ಆಯಿತು. ಆಗ ಆ ಮಠದ ಅಧಿಕಾರಿಗಳಾದ ಶ್ರೀ ಶಂಕರಸ್ವಾಮಿಗಳವರು, ಮತ್ತು ಈಗ ಬೆಂಗಳೂರಿನ ಸರ್ಪಭೂಷಣ ಮಠಕ್ಕೆ ಸ್ವಾಮಿಗಳಾದ ಶ್ರೀ ಶಿವಕುಮಾರ ಮರಿದೇವರು ಬಹಳ ಉಪಚರಿಸಿದರಲ್ಲದೆ ನನಗಾದ ಆ ಶ್ರಮವನ್ನು ಪರಿಹರಿಸುವುದಕ್ಕಾಗಿ ತಮ್ಮೊಬ್ಬ ಶಿಷ್ಯನನ್ನು ಎಣ್ಣೆಯಿಂದ ಮೀಯಿಸಲು ಕಳಿಸಿದರು. ಎಲ್ಲ ರೀತಿಯಿಂದಲೂ ಅವರು ವ್ಯವಸ್ಥೆಮಾಡಿದ್ದರು. ಮಾರನೆಯ ದಿವಸ ಕಪ್ಪತೇಶ್ವರನನ್ನು ನೋಡಲು ಆ ಗುಡ್ಡವನ್ನು ಏರಿ ಹೋಗುವಾಗ 'ಮೊಣಕಾಲ್ಮುರಿ' ಎಂಬ ಸ್ಥಳಕ್ಕೆ ಹೋದಾಗ ಮೊಣಕಾಲು ನೋಯಿಸಹತ್ತಿದ್ದವು. ಆ ಹೆಸರನ್ನು ಹೊಂದಿದ ಆ ಸ್ಥಳವು ಅನ್ವರ್ಥಕವಾಗಿದೆಯೆಂದೆನಿಸಿತು. ಮುಂದೆ ಕಪ್ಪತೇಶ್ವರನ ದರ್ಶನ ಪಡೆದು ಗದಗಿಗೆ ಮರಳಿಬಂದೆವು. ನಂತರ ಚಳಿಜ್ವರದಿಂದ ಬಳಲಬೇಕಾಯಿತು. ಕಪ್ಪತೇಶ್ವರನಿಗೆ ಹಣ್ಣು-ಕಾಯಿ ಮಾಡಲಿಲ್ಲ. ಕರ್ಪೂರ ಹಚ್ಚಲಿಲ್ಲ. ಅದಕ್ಕೆ ಹೀಗೆ ಆಯಿತೊ? ಎಂದೆನಿಸಿತು. ರೋಗ ಕಡಿಮೆಯಾಗದೆ ಮನಸ್ಸಿನಲ್ಲಿ ನಿರಾಶಾಭಾವವುಂಟಾಗಲು ಪ್ರಾರಂಭಿಸಿತು. ಆಗ ಅಂತಃಪ್ರೇರಣೆಯ ಪ್ರಕಾರ, ಎಡೆಯೂರ ಸಿದ್ಧಲಿಂಗೇಶ್ವರನಿಗೆ ಮೊರೆ ಹೋಗುವುದೇ ಉಪಾಯ ಎಂದು ಬಗೆದು ತೋಂಟದ ಸಿದಲಿಂಗಪುರಾಣಪ್ರವಚನವನ್ನು ಪ್ರಾರಂಭಿಸಿದೆನು (೧೯೩೪). ೪ ತಿಂಗಳ ವರೆಗೆ ಪುರಾಣ ನಡೆಯಿತು. ಸಿದ್ಧಲಿಂಗನ ಅನೇಕ ಭಕ್ತರು ಕಿಕ್ಕಿರಿದು ಕೂಡಹತ್ತಿದರು. ಪುರಾಣ ಮುಗಿಯುತ್ತ ಬಂದಂತೆ ಯಾವ ಔಷಧಿಗಳಿಲ್ಲದೆ ಆರೋಗ್ಯ ಸುಧಾರಿಸಿ ಮನಸ್ಸಿಗೆ ಸಂತೋಷವೂ ಆಯಿತು. ಪುರಾಣ ಸಮಾಪ್ತಿಯ ಕಾಲದಲ್ಲಿ ಪುರಾಣ ಕೇಳಿದ ಗದುಗಿನ ಭಕ್ತರು ತಮ್ಮ ಭಕ್ತಿಯ ಕುರುಹಿಗಾಗಿ ಬೆಳ್ಳಿ ತಂಬಿಗೆ, ಬೆಳ್ಳಿ ಥಾಲಿಗಳನ್ನರ್ಪಿಸಿದರು. ಆಗ ನಾನು

ಅವುಗಳನು ಸ್ವೀಕಾರ ಮಾಡಲು ಬಯಸದೆ ಈ ಸಾಮಾನುಗಳನ್ನು ನೀವೇ ತೆಗೆದುಕೊಂಡು ಇದರ ಹಣದಲ್ಲಿಗ್ರಂಥಾಲಯವನ್ನು ಸುರುವು ಮಾಡಬೇಕೆಂದು ತಿಳಿಸಿದೆನು. ಆಗ ಜನರು ಒಪ್ಪದೆ ನಾವು ಅದನ್ನು ಬೇರೆ ಹಣದಿಂದ ಮಾಡುತ್ತೇವೆ ನೀವು ಸ್ವೀಕರಿಸಲೇ ಬೇಕೆಂದು ಹಟ ಹಿಡಿದು ನನ್ನನ್ನು ಒಪ್ಪಿಸಿದರು.

೧೯೩೪ಳ ನೇ ಇಸ್ವಿಯಲ್ಲಿ ನಮ್ಮ ಹಿರಿಯ ಮಗಳು ಜನ್ಮವೆತ್ತಿದಳು. ಆಕೆಗೆ ನಮ್ಮನ್ನು ಜೋಪಾನಮಾಡಿದ ಅಮ್ಮನ ಸ್ಮಾರಕವಾಗಿ ವೀರಮ್ಮನೆಂದು ಹೆಸರಿಡ ಲಾಯಿತು. ಇದೇ ವೇಳೆಯಲ್ಲಿ ಹಾಲಕೆರೆ ಸ್ವಾಮಿಗಳವರು ಗದುಗಿನ ಊರ ಹೊರಗೆ ಮಾವಿನ ಮರಗಳ ಮಧ್ಯದಲ್ಲಿ ಸ್ಥಾಪಿಸಿದ "ಆನಂದಾಶ್ರಮ"ದಲ್ಲಿ ಸಾಯಂಕಾಲ ಪ್ರವಚನ ನಡೆಯಹತ್ತಿತು. ಅಲ್ಲಿ ಇಳಕಲ್ಲ ಮಠಕ್ಕಾದ ಕೊಪ್ಪದ ಮಹಾಂತಸ್ವಾಮಿಗಳು ಅನುಷ್ಠಾನ ಮಾಡುತ್ತಿದ್ದರು. ಅಲ್ಲಿಯೂ ಜನರು ಪ್ರವಚನಕ್ಕೆ ವಿಶೇಷವಾಗಿ ಬರುತ್ತಿ ದ್ದರು. ಜೋಪಡಿಯಲ್ಲಿಸುರುವಾದ ಪ್ರವಚನ ಮುಂದೆ ಇಮಾರತಿಯೊಂದಿಗೆ ಬೆಳೆ ಯಿತು. ಇಮಾರತಿಯ ಉದ್ಘಾಟನ ಕಾಲಕ್ಕೆ ೨೦ ದಿವಸಗಳ ಕಾರ್ಯಕ್ರಮ ಹಮ್ಮಿ ಕೊಳ್ಳಲಾಗಿತ್ತು. ಅದು ಅಭೂತಪೂರ್ವವಾಗಿ ನಡೆಯಿತು. ಆ ಸಮಾರಂಭದಲ್ಲಿ ಮುರು- ಗೋಡದ ಶ್ರೀ ಮ.ನಿ.ಪ್ರ. ಮಹಾಂತ ಶಿವಯೋಗಿಗಳು ಶಿವಪೂಜೆಮಾಡಿಕೊಂಡಿರ ಬೇಕು ಮತ್ತು ಧಾರವಾಡದ ಮುರುಘಾಮಠದ ಮೃತ್ಯುಂಜಯಪ್ಪಗಳು ಸಭಾಕಾರ್ಯ ವನ್ನು ನಿರ್ವಹಿಸುವರಾಗಬೇಕೆಂದು ನಿರ್ಣಯಿಸಿ ಹಾಗೆಯೇ ವ್ಯವಸ್ಥೆ ಮಾಡತ್ತು ಸಮಾರಂಭ ಗದಗಿನ ಇತಿಹಾಸದಲ್ಲಿಯೇ ಚಿರಸ್ಮರಣೀಯವಾಗಿ ನಡೆಯಿತು. ಮೈಸೂ ರಿನ ಗವಿಮಠದ ಘನ ವಿದ್ವಾಂಸರಾದ ಗೌರೀಶಂಕರ ಮಹಾಸ್ವಾಮಿಗಳವರ ( ೫ ದಿನ ಗಳ ವರೆಗೆ ) ಪ್ರವಚನ ಇಡಲಾಗಿತ್ತು, ಈ ಸಮಾರಂಭಕ್ಕೆ ಕಾರ್ಯದರ್ಶಿಯಾದ ನನ್ನ ಮೇಲೆಯೇ ಹೊಣೆಬಿದ್ದಿತ್ತು.

ಯಥಾ ಪ್ರಕಾರ ಬೆಳಗು ಮತ್ತು ಮಧ್ಯಾಹ್ನ ಪಾಠ ಕ್ರಮ, ಸಾಯಂಕಾಲ ಪ್ರವಚನ ಹಾಗೆಯೇ ಮುಂದುವರಿದವು. ಆಗ ಗದುಗಿನ ವೀರಶೈವರಲ್ಲುಂಟಾದ ಧಾರ್ಮಿಕ ಶ್ರವಣ, ಭಕ್ತಿ ಅಪೂರ್ವವಾಗಿತ್ತು. ಹೆಣ್ಣುಮಕ್ಕಳು ಸಹ ಪ್ರವಚನ ಕೇಳಲು ಭಾಗಿಗಳಾಗುತ್ತಿದ್ದರು. ಇದನ್ನು ನಿರೀಕ್ಷಿಸಿ 'ಅಕ್ಕನ ಬಳಗ' ಸ್ಥಾಪಿಸಬೇಕೆಂಬ ವಿಚಾರಣೆ ಹೊಳೆಯಿತು. ವಿಜಾಪುರ ಜಿಲ್ಲೆಯ ಮಮದಾಪುರದ ಮಹಾದೇವರು ಆಗ ಬೆಂಗಳೂರಿನ ಸರ್ಪಭೂಷಣ ಮಠಕ್ಕೆ ಅಧಿಕಾರವನ್ನು ಹೊಂದಿ ಶರಣರ ವಚನ ವಾಙ್ಮಯವನ್ನು ಅಭ್ಯಾಸಮಾಡಿ ಅದರ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು. ಅವರು ನನಗೆ ಕಾಶಿಯಲ್ಲಿದ್ದಾಗ ಪರಿಚಿತರು. ಅವರನ್ನು ಬರಮಾಡಿಕೊಂಡು ಅವ

ರಿಂದಲೇ ಕರ್ನಾಟಕದಲ್ಲಿ ಪ್ರಪ್ರಥಮವಾಗಿ "ಅಕ್ಕನ ಬಳಗ"ವನ್ನು ೧೯೩೬ರಲ್ಲಿ ಸ್ಥಾಪಿಸ ಲಾಯಿತು. ಈ ಅಕ್ಕನ ಬಳಗದ ಕಾರ್ಯಕ್ರಮದ ಪ್ರಾರಂಭದಲ್ಲಿ ಸಾರ್ವಜನಿಕವಾಗಿ ಷಟ್ ಸ್ಥಲ ಧ್ವಜವನ್ನೇರಿಸುವ ಕಾರ್ಯವನ್ನೂ ಕೈಕೊಂಡದ್ದು ಹೊಸದೇ ಆಯಿತು. ಮುಂದೆ ಒಂದು ವರ್ಷದಲ್ಲಿಯೇ (೧೯೩೭ ರಲ್ಲಿ) 'ಅಕ್ಕಮಹಾದೇವಿಯ ಆದರ್ಶ ಜೀವನ' ಎಂಬ ಗ್ರಂಥವನ್ನು ಬರೆದನು. ಈ ಮೊದಲು ೧೯೩೬ನೇ ಇಸ್ವಿಯಲ್ಲಿ ಬಸವ ಜಯಂತಿ ದಿನ ನಾನು ಬರೆದ "ಬಸವಣ್ಣನವರ ಆದರ್ಶ ಜೀವನ" ಎಂಬ ಪುಸ್ತಕದ ಉದ್ಘಾಟನೆ ಆಯಿತಲ್ಲದೆ, ಅದೇ ದಿನ ಗಂಡು ಮಗುವಿನ ಜನನವಾಯಿತು. ಅವನಿಗೆ ಬಸವರಾಜನೆಂದು ಹೆಸರಿಡಲಾಯಿತು.

ಅನೇಕ ಒಡಕುಗಳಿಂದ ತತ್ತರಿಸುತ್ತಿದ್ದ ಸಮಾಜವನ್ನು ಸುಧಾರಿಸಲು ನಾವು ಸುಸಂಘಟಿತರಾಗಿ ಧರ್ಮ ಪ್ರಚಾರ ಮಾಡಬೇಕೆಂಬ ಪ್ರೇರಣೆ ಯಾಗಹತ್ತಿತು. ಧರ್ಮಪ್ರವೃತ್ತಿಯುಳ್ಳ ಗದುಗಿನ ಕೆಲ ಜನರೊಡನೆ ವಿಚಾರ ವಿನಿಮಯ ಮಾಡ ಲೋಸುಗ ಒಂದು ಪ್ರಕಟನೆಯನ್ನು ಹೊರಡಿಸಿ ಹಂಚಿದೆವು. ಆದರೆ ದುರ್ದೈವ ಆಗ್ಗೆ ಈ ದಿಶೆಯತ್ತ ಜನತೆ ಜಾಗೃತವಾಗಲಿಲ್ಲ.

ನಾವು ಜಾಹೀರಾತು ಹೆಚ್ಚಿಸಿದಂತೆ ಜನರು ಉದಾಸೀನರಾಗುತ್ತ ಹೊರಟರು. ಕೊನೆಗೆ ೧೯೪೦ ನೇ ಇಸ್ವಿಯಲ್ಲಿ ಹಾಲಕೆರೆ ಸ್ವಾಮಿಗಳವರ ಸನ್ನಿಧಿಯಲ್ಲಿ ಗದುಗಿನ ಹಡಗಲಿ ಮಠದಲ್ಲಿ ಸೇರಿ ಪುನಃ ಈ ದಿಶೆಯತ್ತ ವಿಚಾರಿಸಲಾಯಿತು. ಇಂದಿನ ಸಮಾಜದ ಪರಿಸ್ಥಿತಿ ಎಷ್ಟು ಶೋಚನೀಯವಾಗಿದೆ, ಈ ಪರಿಸ್ಥಿಯನ್ನು ನಾವು ಉಪೇಕ್ಷೆ ಮಾಡಿದ್ದಾದರೆ ಮುಂದೆ ಎಂಥ ಅಂಧಕಾರಮಯವಾದ ಭವಿಷ್ಯತ್ತನ್ನು ಎದುರಿಸಬೇಕಾಗುತ್ತದೆ, ಅದನ್ನು ತಪ್ಪಿಸಲು ನಾವು ಈಗ ಒಂದು ವಿಶಿಷ್ಟವಾದ ಸಂಘ ಸ್ಥಾಪಿಸುವುದು ಅಗತ್ಯವಿದೆಯೆಂಬ ವಿಚಾರವನ್ನು ಎಲ್ಲರೂ ಒಪ್ಪಿಕೊಂಡರು. ಆಗ್ಗೆ "ವೀರಶೈವ ಸಂಸ್ಕೃತಿ ಪ್ರಕಾಶನ ಸಮಿತಿ"ಯ ಸ್ಥಾಪನೆ ಆಯಿತು. ಅದರ ಅಧ್ಯಕ್ಷತೆಯನ್ನು ಮಾಧ್ಯಮಿಕ ಶಾಲಾ ಮುಖ್ಯಾಧ್ಯಾಪಕರಾದ ಶ್ರೀ ಸಂಗಯ್ಯನವರು ಕಲ್ಮಠ ಅವರಿಗೆ ವಹಿಸಲಾಯಿತು. ನನ್ನನ್ನು ಕಾರ್ಯಾಧ್ಯಕ್ಷನನ್ನಾಗಿ ಮಾಡಿದರು. ಶಿಕ್ಷಕ ರಾದ ಶ್ರೀ ಕೆ. ಬಿ. ಅಂಗಡಿ ಮತ್ತು ಶ್ರೀಮಾನ್ ಓಲಿಯವರನ್ನು ಕಾರ್ಯದರ್ಶಿಗಳ ನ್ನಾಗಿ ಮಾಡಿದರು. ನಂತರ ಈ ಸಮಿತಿಯು ವಿದ್ಯಾರ್ಥಿಗಳಿಗೆ ಸಾಹಿತ್ಯ ನೀಡುವು ದರ ಮುಖಾಂತರ ಧರ್ಮ ಪ್ರಚಾರ ಮಾಡಬೇಕೆಂದು ನಿರ್ಣಯಿಸಿತು.

ಸಾಹಿತ್ಯ ಪ್ರವೇಶ,<br>
ಸಾಹಿತ್ಯ ಮಧುಕರ,

ಸಾಹಿತ್ಯ ಭೂಷಣ,
ಸಾಹಿತ್ಯ ರತ್ನ
ಸಾಹಿತ್ಯ ಶಿರೋಮಣಿ.

—ಹೀಗೆ ತರಗತಿಗಳನ್ನು ಏರ್ಪಡಿಸಿ, ಅದಕ್ಕನುಗುಣವಾದ ಪಠ್ಯಪುಸಕ್ತಗಳನ್ನು ಯೋಜಿಸಲಾಯಿತು. ಈ ಯೋಜನೆಯ ಅಂಗವಾಗಿ ವಚನ ಮಧು ಭಾಗ ೧-೨ [1]ವೀರಶೈವ ತತ್ತ್ವಪ್ರವೇಶ, ಸರ್ವಜ್ಞನ ವಚನ ಸಂಗ್ರಹ, ಗದ್ಯ ಸಂಗ್ರಹ ಮೈಲಾರ ಶರಣರ ಅಷ್ಟಾವರಣ-ಪಂಚಾಚಾರ ಧರ್ಮಾಚಾರ ಮುಂತಾದ ಪುಸ್ತಕಗಳನ್ನು ನಾನು ಸಂಗ್ರಹಿಸಿ ಸಂಪಾದಿಸಿದೆನಲ್ಲದೆ ಇನ್ನು ಕೆಲವನ್ನು ರಚಿಸಿದೆ.

ಕೆಲವು ಸಮಯದ ನಂತರ ಈ "ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿ" ಯಿಂದ ನಡೆಸುವ ಎಲ್ಲ ಪರೀಕ್ಷೆಗಳನ್ನು "ಅಖಿಲ ಭಾರತ ವೀರಶೈವ ವಿದ್ಯಾಪೀಠ" ಎಂಬ ಹೆಸರಿನಿಂದ ನಡೆಸಲು ಸಮಿತಿಯು ನಿರ್ಣಯಿಸಿತು. ಇಡೀ ಕರ್ನಾಟಕದಲ್ಲಿ ಈ ವಿದ್ಯಾಪೀಠದ ಪರಿಕ್ಷಾ ಕೇಂದ್ರಗಳನ್ನು (ಧಾರವಾಡ, ವಿಜಾಪುರ, ಬೆಂಗಳೂರು ಬೆಳಗಾಂವ ಮುಂತಾದ ಪಟ್ಟಣಗಳಲ್ಲಿ) ನಡೆಸಲಾಯಿತಲ್ಲದೆ, ಅದರ ಹೊರಗೂ ಮಹಾರಾಷ್ಟ್ರ (ಪುಣೆಯಲ್ಲಿ), ಹೈದರಾಬಾದ ಕಾಶಿಯಲ್ಲಿಯೂ ಸಹ ಕೇಂದ್ರಗಳನ್ನು ತೆರೆಯಲಾಯಿತು. ಪ್ರತಿವರ್ಷ ಆರು-ಏಳು ಸಾವಿರ ಮಿಕ್ಕಿ ವಿದ್ಯಾರ್ಥಿಗಳು ಪರೀಕ್ಷೆಗೆ, ಕಟ್ಟತೊಡಗಿದರು.

ಈ ಪರೀಕ್ಷೆಗಳ ಪ್ರವೇಶ ಫಾರ್ಮ ಧನವನ್ನು ಅಭ್ಯಾಸ ಪತ್ರಿಕೆ, ಪ್ರಶ್ನೆ ಪತ್ರಿಕೆ, ಪ್ರಮಾಣ ಪತ್ರಿಕೆಗಳಿಗೆ ಎಷ್ಟು ವೆಚ್ಚ ಬರುತ್ತಿತ್ತೋ ಅಷ್ಟು ಮಾತ್ರ ಸ್ವೀಕರಿಸಲಾಗುತ್ತಿತ್ತು. ಇದರಲ್ಲಿ ಪ್ರತ್ಯಕ್ಷ ದುಡಿಯುವವರಿಗೆ ಯಾವುದೇ ತರಹದ ಆರ್ಥಿಕ ಅನುಕೂಲತೆ ಇರಲಿಲ್ಲವಾದರೂ ಇದನ್ನು ಸ್ಥಿರಗೊಳಿಸಿ ವೃದ್ಧಿಗೊಳಿಸಬೇಕೆಂಬ ಹವ್ಯಾಸದಿಂದ ನಿಲ್ಲಿಸದ ನಡೆಸಿಕೊಂಡು ಬಂದೆವು. ಇಂಥ ವ್ಯಾಪ್ತಿ ಪಡೆದ ವಿದ್ಯಾಪೀಠದ ಈ ಕಾರ್ಯಕ್ರಮವನ್ನು ನೀರೀಕ್ಷಿಸಿದ ದೊಡ್ಡ ದೊಡ್ಡ ಸಾಹಿತಿಗಳು ಹರ್ಷಿತರಾಗಿ ಗೌರವದ ಉದ್ಗಾರವನ್ನು ತೆಗೆದದ್ದುಂಟು. ಸುಪ್ರಸಿದ್ಧರಾದ ಪ್ರೊ. ಶಿ. ಶಿ. ಬಸವನಾಳರವರು ಧಾರವಾಡ, ಹಿರೇಕೇರೂರಿನ ದೊಡ್ಡ ಸಭೆಯಲ್ಲಿ ಇದರ ಮಹತ್ವವನ್ನು ಬಿಚ್ಚುನುಡಿಯಲ್ಲಿ ಹೇಳಿದ್ದಾರೆ.

ಹೆಚ್ಚು ಪ್ರಚಾರದಲ್ಲಿದ್ದರೂ ಆರ್ಥಿಕ ದೃಷ್ಟಿಯಿಂದ ಹಿಂದುಳಿದ "ಅಖಿಲ ಭಾರತ ವೀರಶೈವ ವಿದ್ಯಾಪೀಠ"ಕ್ಕೆ "ಅಖಿಲ ಭಾರತ ವಿದ್ಯಾಪೀಠ" ಎಂದಿಷ್ಟೇ ಹೆಸರಿಸಿದರೆ ಹೇಗಾಗಬಹುದೆಂದು ವಿಚಾರಿಸಿ ಈ ವಿಷಯ ಕುರಿತು

1 ಲಾತೂರಿನಲ್ಲಿ ಮರಾಠಿ ಭಾಷೆಗೆ ಅನುವಾದವಾಗಿದೆ.

ಧಾರವಾಡದಲ್ಲಿದ್ದ ನಿವೃತ್ತ ನ್ಯಾಯಾಧೀಶರಾದ ಹಾಲಭಾವಿಯವರಿಗೆ, ಬುದ್ಧ
ನವರಿಗೆ, ಬಸವನಾಳರವರಿಗೆ, ಜಿ.ಎ. ಹಿರೇಮಠ ಸಾಹೇಬರಿಗೆ,ನಂದೀಮಠರಿಗೆ ಹರ್ಡೇ
ಮಂಜಪ್ಪನವರಿಗೆ ಫ. ಗು. ಹಳಕಟ್ಟಿಯವರಿಗೆ ಸರ್ಪಭೂಷಣ ಮಠದ ಮಹದ
ಸ್ವಾಮಿಗಳವರಿಗೆ ಹಾಗೂ ಇನ್ನುಳಿದ ಮಾನ್ಯರಿಗೆ ಬರೆದುತಿಳಿಸಿದೆ. ಸಾಮಾನ್ಯ
ಎಲ್ಲರೂ ಮೊದಲಿನ ಹೆಸರನ್ನು ಮುಂದುವರಿಸಲು ತಿಳಿಸಿದರು. ಮೊದಲಿದ್ದುದ
ಸರಕಾರದಲ್ಲಿ ನೋಂದಾಯಿಸಲು ಕಲ್ಮಠ ಮಾಸ್ತರವರಿಗೂ ಮತ್ತು ಡಾ॥ ಹಳಕ
ನಂದೀಮಠ ಅವರಿಗೂ ತಿಳಿಸಿದಾಗ ಅವರೆಲ್ಲ ಮಾಡಿಸೋಣವೆಂದು ಹೇಳುತ್ತ ಸು
ನಿರುತ್ತಿದ್ದರು. ನಿರಾಶೆಯಾದರೂ ಕೂಡ ಕಾರ್ಯ ಒಳ್ಳೆಯದೆಂದು ಅದನ್ನು ಹಾಗೆ
ನಿರ್ವಹಿಸುತ್ತ ಬಂದೆವು. ಇದೇ ಕಾಲಕ್ಕೆ ಹರ್ಡೇಕರ ಮಂಜಪ್ಪನವರು ವೀರಶೈ
ಸಂಬಂಧಿಸಿದಂತೆ ಒಂದು ಪೀಠವನ್ನು ಪ್ರಾರಂಭಿಸಿದ್ದಾದರೂ ಅದು ಸರಿಯಾಗಿ ನಡ
ಲಿಲ್ಲ. ಆಗ ಅವರು ನಮ್ಮ ಕಾರ್ಯವನ್ನು ಪ್ರಶಂಸಿಸಿ "ನೀವು ಸರಿಯಾಗಿ ನ
ಕೊಂಡು ಹೋಗುತ್ತಿರುವಿ" ಎಂದು ಸಂತೋಷದಿಂದ ಹೇಳುತ್ತಿದ್ದರು.

ವಿದ್ಯಾಪೀಠಕ್ಕೆ ಸರಿಯಾದ ಸ್ವರೂಪ ಕೊಡಬೇಕೆಂದು ಶ್ರೀ ಕೆ. ಎಚ್. ಓಲಿ ಅಧ್ಯಾ
ಪಕರು ಮತ್ತುನಾನು ಕೂಡಿ ಇಟಗಿ ಮುಕ್ಕಾಮಿನಲ್ಲಿದ್ದ ಹಾಲಕೆರೆ ಸ್ವಾಮಿಗಳೊ
ಸಮಾಲೋಚಿಸಿ ಈ ಸಂಸ್ಥೆಗೆ ಪ್ರಚೋದಕವಾಗಬಲ್ಲ ಒಂದು ಇಮಾರತಿಯನ್ನು ಕಟ್ಟಿ
ಕೊಡಬೇಕೆಂದು ತಿಳಿಸಿದೆವು. ಅವರು ಒಪ್ಪಿಕೊಂಡು ಇಮಾರತಿ ಕಟ್ಟಿಸಿಕೊಟ್ಟರಲ್ಲದೆ ಪ್ರ
ವರ್ಷ ಸಾವಿರ ಒಂದು ರೂ. ಗಳನ್ನು ಕೊಡುವದಾಗಿ ಅಪ್ಪಣೆ ಮಾಡಿದರು.

ಪ್ರತಿ ರವಿವಾರಕ್ಕೊಮ್ಮೆ ಮುರುಘಾಮಠದ ಶ್ರೀ ಮ. ನಿ. ಪ್ರ. ಮೃತ್ಯುಂಜಯ
ಸ್ವಾಮಿಗಳ ಅಪ್ಪಣೆ ಪ್ರಕಾರ ಧಾರವಾಡಕ್ಕೆ 'ಶಿವಾನುಭವ'ವನ್ನು ಹೇಳಲಿಕ್ಕೆ ಹೋಗು
ದ್ದೆನು, ನಮ್ಮ ಸಮಾಜಕ್ಕೊಂದು ಧಾರ್ಮಿಕ ಪತ್ರಿಕೆಯು ಅವಶ್ಯಕತೆ ಇರುವುದೆಂ
ಶ್ರೀಗಳವರಿಗೆ ಆಗಾಗ್ಗೆ ಹೇಳುತ್ತ ಬಂದೆನು. ಅದಕ್ಕೆ ಅವರು ಒಪ್ಪಿ ೧೯೪೭ರಲ್ಲಿ ಭಾರತ
ಸ್ವಾತಂತ್ರ್ಯ ದೊರತ ಶುಭ ಮುಹೂರ್ತದಲ್ಲಿಯೇ "ಸಾವಧಾನ" ಪಾಕ್ಷಿಕ ಪತ್ರಿಕೆ ಜ
ತಾಳಿದಂತಾಯಿತಲ್ಲದೆ, ಅದರ ಸಂಪಾದಕತ್ವದ ಹೊಣೆ ಶ್ರೀ ಮ.ನಿ.ಪ್ರ. ಮೃತ್ಯುಂಜಯ
ಸ್ವಾಮಿಗಳ ಅಪ್ಪಣೆಯ ಪ್ರಕಾರ ನನಗೆ ಬಂದಿತು. ಈ ಪತ್ರಿಕೆಗೆ ಹೆಸರು ಸೂಚಿಸು
ಪ್ರಸಂಗ ಬಂದಾಗ ಕೆಲ ಪ್ರಮುಖರಿಗೆ ತಿಳಿಸಲಾಗಿತ್ತು. ಯಾರಿಂದಲೂ ಉತ್ತ
ಬಾರದಿದ್ದಾಗ ಕೊನೆಗೆ ಪ್ರೋ. ಶಿ. ಶಿ. ಬಸವನಾಳರವರನ್ನು ಭೆಟ್ಟಿಯಾ
'ಸಾವಧಾನ' ಎಂಬ ಹೆಸರನ್ನಿಟ್ಟರೆ ಹೇಗೆಂದು ವಿಚಾರಿಸಲಾಗಿ ಅವರು ಅದಕ್ಕೆ ಸಮ್ಮ
ಸೂಚಿಸಿದರು. ಒಳ್ಳೆಯದೆಂದು ನಿರ್ಣಯಿಸಿ ನಂತರ ಈ ವಿಚಾರವನ್ನು ಪೂ

ಮೃತ್ಯುಂಜಯಪ್ಪಗಳ ಎದುರಿಗಿಟ್ಟಾಗ ಅದಕ್ಕೆ ಅವರೂ ಒಪ್ಪಿಗೆ ಸೂಚಿಸಿದರು. ೧೯೪೭ ರಿಂದ ೧೯೬೧ ರ ವರೆಗೆ ಗದುಗಿನಲ್ಲಿಯೇ ಈ ಸಾವಧಾನವು ಹೊರಡುತ್ತಲಿತ್ತು.

ನಾನು ಗದುಗಿನಿಂದ ಪ್ರತಿ ರವಿವಾರ 'ಶಿವಾನುಭವ' ವರ್ಗಗಳನ್ನು ನಡೆಸಲು ಬಂದಾಗ ಒಮ್ಮೆ ಸಾಯಂಕಾಲ ಮೃತ್ಯುಂಜಯಪ್ಪಗಳ ಹಾಗೂ ಮಹಾಂತಪ್ಪಗಳ ಜೊತೆಗೆ ಅಡ್ಡಾಡಲು ಹೊರಟಾಗ ಸಮಾಜದ ಸುಧಾರಣೆಯ ಬಗೆಗೆ ವಿಚಾರ ಮಾಡುತ್ತ ನಾನು "ಶಿವಾನುಭವ" ಕಾರ್ಯಕ್ರಮವನ್ನು ಮುರುಘಾಮಠಕ್ಕೆ ಮಾತ್ರ ಸೀಮಿತಗೊಳಿಸದೆ ಸಮಾಜದಲ್ಲಿಯ ಅನೇಕ ಪ್ರಸಾದ ನಿಲಯಗಳ ವಿದ್ಯಾರ್ಥಿಗಳಿಗೂ ತಲುಪುವಂತಾಗಬೇಕೆಂದು ತಿಳಿಸಿದೆನು. ಈ ವಿಚಾರವು ಶ್ರೀಗಳ ಮನಸ್ಸಿಗೆ ಹಿಡಿಸಿತಲ್ಲದೆ ಆ ಕಾರ್ಯದಲ್ಲಿ ಮುಂದುವರೆಯುವದಾಗಿ ನಿಶ್ಚಯಿಸಿದರು. ಮರುದಿವಸ ಪ್ರಾತಃಕಾಲದಲ್ಲಿ ಮೃತ್ಯುಂಜಯಪ್ಪಗಳ ದರ್ಶನ ಪಡೆದಾಗ, ಸಮೀಪದಲ್ಲಿರುವ ಮಹಾಂತಪ್ಪಗಳಿಗೆ "ನಿನ್ನೆ ನಾಗಭೂಷಣ ಶಾಸ್ತ್ರಿಗಳು ಸೂಚಿಸಿರುವ ವಿಷಯವನ್ನು ಕಾರ್ಯರಂಗಕ್ಕಿಳಿಸಬೇಕು" ಎಂದರು. ಆಗ ಮಹಾಂತಪ್ಪಗಳು ವಿಚಾರಮಗ್ನರಾಗಿ ಕುಳಿತಾಗ "ಒಳ್ಳೇ ಕೆಲಸ ಮಾಡಲಿಕ್ಕೆ ಬೇಗನೆ ಸಮ್ಮತಿಸುವದಿಲ್ಲವೇಕೆ" ಎಂದು ಗದರಿಸಿದಂತೆ ಮಾಡಿದರು. ಮುಂದೆ ಕೆಲ ನಿಮಿಷಗಳ ನಂತರ ಕೆಲವು ಜನರು ಸ್ವಾಮಿಗಳ ದರ್ಶನಕ್ಕೆ ಬಂದರು. ಅದರೆಲ್ಲರ ಸಮಕ್ಷಮ ಪ್ರಸಾದನಿಲಯದ ವಿದ್ಯಾರ್ಥಿಗಳಿಗಾಗಿ 'ಶಿವಾನುಭವ' ಪರೀಕ್ಷೆಗಳನ್ನೇರ್ಪಡಿಸಬೇಕೆಂದು ನಿರ್ಣಯಿಸಲಾಯಿತು.

ಕೆಲವು ದಿವಸಗಳ ನಂತರ ಬಳ್ಳಾರಿಯ ಶ್ರೀಮಂತರಾದ ಶ್ರೀ ಮಹಾಬಳೇಶ್ವರಪ್ಪನವರ ಅಧ್ಯಕ್ಷತೆಯಲ್ಲಿ ಪ್ರಸಾದ ನಿಲಯದ ಸಮ್ಮೇಳನ ನಡೆಸಿ ಎಲ್ಲ ಪ್ರಸಾದ ನಿಲಯಗಳಲ್ಲಿಯೂ ಈ ಪರೀಕ್ಷೆಯ ಏರ್ಪಾಟು ಮಾಡಬೇಕೆಂದು ಪ್ರಚಾರ ಪಡಿಸಲಾಯಿತು. 'ಶಿವಾನುಭವ' ಪರೀಕ್ಷೆಗಳೂ ಪ್ರಾರಂಭವಾದವು. ಮೃತ್ಯುಂಜಯಪ್ಪಗಳು ತಾವು ಎಲ್ಲಿಯಾದರೂ ದಯಮಾಡಿಸುವ ಪ್ರಸಂಗ ಬಂದಾಗ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರಲ್ಲದೆ, ಅಲ್ಲಿ ಶಿವಾನುಭವದ ಬಗೆಗೆ ಮಾತನಾಡಲು ತಿಳಿಸುತ್ತಿದ್ದರು. ಒಂದು ಸಲ ಕಲ್ಯಾಣ ಪಟ್ಟಣಕ್ಕೆ ಹೋಗುವ ಪ್ರಸಂಗ ಒದಗಿತು. ರಜಾಕರ ದಬ್ಬಾಳಿಕೆಗೆ ತುತ್ತಾದ ಆ ಕಲ್ಯಾಣ ಪಟ್ಟಣವು ನೈತಿಕ ಅಧಃಪತನಕ್ಕೊಳಗಾಗಿತ್ತು. ಕಲ್ಯಾಣ ಪಟ್ಟಣದ ಪರುಷಗಟ್ಟೆಯ ಮೇಲೆ ಕಟುಕರು ಮಾಂಸ ಮಾರಿದರೆ ಒಂದಕ್ಕೆ ನಾಲ್ಕು ಪಟ್ಟು ಲಾಭವಾಗುತ್ತಿತ್ತಂತೆ. ಬಸವ ಜಯಂತಿಗಾಗಿ ಸೊಲ್ಲಾಪುರದ ವಾರದ ಬಾಬಾ ಸಾಹೇಬರವರು ಮೃತ್ಯುಂಜಯಪ್ಪಗಳಿಗೆ ಆಮಂತ್ರಣ ಕೊಟ್ಟು ಕರೆಸಿದಾಗ ಅವರ ಜೊತೆಗೆ ಪೂಜ್ಯ ಮಹಾಂತಪ್ಪಗಳು ಸರ್ಪಭೂಷಣ ಮಠದ ಮಹದೇವಸ್ವಾಮಿಗಳು ಮತ್ತು ನಾನು ಹೋಗಿದ್ದೆವು. ಮೃತ್ಯುಂಜಯಪ್ಪಗಳು

ಪರುಷಗಟ್ಟೆಯ ಕಡೆಗೆ ಎಲ್ಲರನ್ನು ಕರೆದುಕೊಂಡು ಹೋಗಿ ನೀವು ಇಲ್ಲಿ ಶಿವಾನುಭ ಪ್ರವಚನವನ್ನು ಮಾಡಬೇಕೆಂದು ನನಗೆ ಅಪ್ಪಣೆಮಾಡಿದರು. ಆ ಪ್ರಕಾರ ನಾನು ಪ್ರವಚ ಮಾಡಿದೆ, ಮಹಾದೇವ ಸ್ವಾಮಿಗಳು ಶಿವಾನುಭವ ಪಾಠಶಾಲೆಯನ್ನು ಪ್ರಾರಂಭಿ ದರು. ಕಲ್ಯಾಣಕ್ರಾಂತಿಯಾದ ನಂತರ ಪರುಷಗಟ್ಟೆಯಮೇಲೆ ಶಿವಾನುಭವ ನ ದದ್ದೂ ಒಂದು ಕ್ರಾಂತಿಯೇ ! ಈ ರೀತಿ ಮೃತ್ಯುಂಜಯಪ್ಪಗಳು ಶಿವಾನುಭವ ಕಾರ್ ವನ್ನು ಸೀಮಿತಗೊಳಿಸದೆ, ಅಥಣಿ, ಹಂಸಭಾವಿ, ಮುಂಬೈ, ಪುಣೆ, ನಾಶಿಕ ಮೊದಲ ಭಾಗಗಳಲ್ಲಿಯೂ ವ್ಯಾಪಕಗೊಳಿಸಿದರು.

ನಾನು ಗದುಗಿನಲ್ಲಿದ್ದು ಕಾರ್ಯಗಳನ್ನು ನಡೆಸುತ್ತಿರುವಾಗ ಹಾಲಕೆರೆ ಸ್ವಾ ಗಳವರು ನನಗೆ ಮಾಸಿಕ ವೇತನವೆಂದು ೨೫ ರೂ. ಗಳನ್ನು ಮಾತ್ರ ಕೊಡುತ್ತಿದ್ದ ಅಷ್ಟರಲ್ಲಿಯೇ ನಮ್ಮ ಸಂಸಾರ ಸಾಗಿಸುತ್ತಿದ್ದೆವು. ಆಗ ಅಲ್ಲಿಯ ಒಬ್ಬ ಸುಸಂಸ್ಕ ವಕೀಲರು ನಮ್ಮ ಚಟುವಟಿಕೆಗಳನ್ನು ಕಂಡು ಶಾಸ್ತ್ರಿಗಳು ಧಾರ್ಮಿಕ ಹಾಗೂ ಸಾಹಿ ಸೇವೆಯನ್ನು ಮಾಡುವಲ್ಲಿ ಶ್ರಮಿಸುತ್ತಿದ್ದಾರೆ, ಇವರಿಗೆ ಸಮಾಜದಿಂದ ಸಹಾ ಒದಗಿಸಬೇಕೆಂದು ಆಲೋಚಿಸಿ, ಐದು ಸಹಸ್ರ ರೂಗಳನ್ನು ಸಂಗ್ರಹಿಸಿದರಲ್ಲ ತೋಂಟದಾರ್ಯ ಮಠದ ಆಗಿನ ಜಗದ್ಗುರುಗಳಾದ ಗುರುಬಸವಸ್ವಾಮಿಗಳ(ಸು. ೧೯೫ ಸನ್ನಿಧಿಯಲ್ಲಿ ಸಿದ್ಧಗಂಗಾ ಮಠದ ಶಿವಕುಮಾರ ಸ್ವಾಮಿಗಳ ಅಧ್ಯಕ್ಷತೆಯಲ್ಲಿ "ಶಿವ ದ್ವೈತಸಿದ್ಧಾಂತ ರತ್ನ" ಎಂಬ ಪ್ರಶಸ್ತಿ ಪತ್ರದೊಡನೆ ಬಂಗಾರ ಪದಕ, ಶಾ ಮೊದಲಾದವನ್ನು ಅರ್ಪಿಸಿದರು. ಅವನ್ನೆಲ್ಲ ನಾನು ಕೃತಜ್ಞತಾ ಪೂರ್ವಕವಾ ಸ್ವೀಕರಿಸಿ ಒಂದು ಸ್ವತಂತ್ರ ಕಾಯಕ ಮಾಡುವ ಉದ್ದೇಶದಿಂದ ಗದುಗಿನಲ್ಲಿ 'ಸಿದ್ಧ ಲಿಂಗ ಮುದ್ರಣಾಲಯವನ್ನು ಸ್ಥಾಪಿಸಿದೆನು, ಈ ಮುದ್ರಣಾಲಯದಲ್ಲಿಯ ಸಾವಧಾನ ಪತ್ರಿಕೆಯ ಮುದ್ರಣವನ್ನು ಪ್ರಾರಂಭಿಸಿದೆನು; ಮುಂದೆ ಧಾರವಾಡಕ್ಕೆ ಬಂದ ನಂತರ ಮೃತ್ಯುಂಜಯಪ್ಪಗಳ ಅಪ್ಪಣೆಯ ಪ್ರಕಾರ ಆ ಪ್ರೆಸ್ಸನ್ನು 'ಶಿವಾನು ಭವ ಸಂಸ್ಥೆ'ಗೆ ನೀಡಿದೆನು.

೧೯೬೦ನೇ ಇಸ್ವಿಯಲ್ಲಿ ಡಾ. ಆರ್. ಸಿ. ಹಿರೇಮಠರವರು (ಕರ್ನಾಟಕ ವಿಶ್ವ ವಿದ್ಯಾಲಯದ ಅಧ್ಯಯನ ಪೀಠದ ಮುಖ್ಯಸ್ಥರು) ತಮ್ಮ ಒಂದು ಓಲೆಯಲ್ಲಿ "ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ 'ವಚನ ವಾಙ್ಮಯ ಸಂಸೋಧನ ವಿಭಾಗ'ವನ್ನು ಸ್ಥಾಪಿಸಲು ಸರಕಾರಕ್ಕೆ ಕೇಳಿಕೊಂಡಿದ್ದೇವೆ, ಅವರೂ ಒಪ್ಪುವ ಸಂಭವ ಇದೆ, ನೀವು ಇದರಲ್ಲಿ ಭಾಗವಹಿಸಲು ಅವಶ್ಯವಾಗಿ ಬರಬೇಕು." ಎಂದು ಬರೆದು ತಿಳಿಸಿದರು. ನಾನು ಆ ಓಲೆಗೆ ಉತ್ತರ ಬರೆಯುತ್ತ ಇಲ್ಲಿ ವಿದ್ಯಾಪೀಠ, ಸಾವಧಾನ

ಪತ್ರಿಕೆ, ಪ್ರವಚನ ಮೊದಲಾದ ಕಾರ್ಯಗಳಲ್ಲಿ ತೊಡಗಿದ್ದರಿಂದ ಅಲ್ಲಿಗೆ ಬಂದು ಸೇವೆ ಸಲ್ಲಿಸುವ ಬಗೆ ಹೇಗೆ ? ಎಂದು ಅವರಿಗೇ ಕೇಳಿದೆ, ಅದಕ್ಕೆ ಪುನಃ ಅವರು ಓಲೆ ಬರೆದು"ನೀವು ಯಾವುದೇ ರೀತಿಯಿಂದ ವಿಚಾರ ಮಾಡದೇ ಇಲ್ಲಿಗೆ ಬರಲೇಬೇಕು. ನಿಮ್ಮ ಹೆಸರನ್ನು ನಾವು ಸರಕಾರಕ್ಕೆ ತಿಳಿಸಿದ್ದೇವೆ" ಎಂದು ತಿಳಿಸಿದರು, ಆಗ ಅನಿ-ವಾರ್ಯವಾಗಿ, ನಾನು ಬರುವದು ನಿಮಗೆ ಇಷ್ಟವಿದ್ದರೆ, ನನ್ನಿಂದ ಅಲ್ಲಿ ಕೆಲಸ ವಾಗುವಂತಿದ್ದರೆ ಬರುವೆನೆಂದು" ತಿಳಿಸಿದೆನು. ಆಗ ಅವರು ನೀವು ಬರುವ ದಕ್ಕೆ ಒಪ್ಪಿಕೊಂಡದನ್ನು ತಿಳಿದು "ನಾನು ಆನಂದಾಶ್ರುಗಳನ್ನು ಸುರಿಸುತ್ತ ಪತ್ರಬರೆ ಯುತ್ತಿರುವೆ" ಎದು ಪ್ರಾರಂಭಿಸಿ, "ನೀವು ಬರುವುದು ನಮಗೆ ಉಸಿರು ಬಂದಂತಾ ಯಿತು. ಕಣ್ಣು ಬಂದಂತಾಯಿತು." ಎಂದು ಮುಗಿಸಿದ್ದರು. ಡಾ. ಆರ್. ಸಿ. ಹಿರೇಮಠ ರವರ ವಾತ್ಸಲ್ಯಪೂರ್ಣ ಪತ್ರ ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿತು. ಮುಂದೆ ನವಲಗುಂದ ಸರ್ವಧರ್ಮ ಪರಿಷತ್ತಿನಿಂದ "ಶಿವಸಿದ್ಧಾಂತ ರತ್ನ" ಮತ್ತು ಹುಬ್ಬಳ್ಳಿಯ ಮೂರುಸಾವಿರ ಮಠದಿಂದ "ಶಿವತತ್ತ್ವ ರತ್ನಾಕರ" ಇಳಕಲ್ಲ ಮಠದಿಂದ "ಶಿವಸಿದ್ಧಾಂತ ಶಿರೋಮಣಿ" ಧಾರವಾಡದ ಮುರುಘಾಮಠದಲ್ಲಿ ನಡೆದ ಸಂಸ್ಕೃತದ ವಿದ್ವತ್ ಪರಿಷತ್ತಿನಿಂದ "ದರ್ಶನ ವಿಶಾರದ" ಎಂಬ ಹಲವಾರು ಪ್ರಶಸ್ತಿಗಳು ವಿವಿಧ ಸಂದರ್ಭಗಳಲ್ಲಿ ಬಂದಿವೆ.

ಅಂದು ಗದುಗಿನ ತೋಂಟದಾರ್ಯರ ಮಠದಲ್ಲಿ ಶ್ರೀ ಬಸವನಗೌಡ ಮಾಸ್ತರರು ವೇದಾಂತದಲ್ಲಿ ಪ್ರಸಿದ್ಧವಾದ 'ಅನುಭವಸಾರ' ಗ್ರಂಥದ ಪ್ರವಚನವನ್ನು ಪ್ರಾರಂಭಿಸಿದ್ದರು, ವಯೋಮಾನ ದೃಷ್ಟಿಯಿಂದ ಹಣ್ಣಾದ ಅವರು ೩-೪ ದಿವಸ ಪ್ರವಚನ ಹೇಳುವಲ್ಲಿ ಅವರಿಗೆ ಶಾರೀರಿಕ ದೌರ್ಬಲ್ಯ ಹೆಚ್ಚಾದುದರಿಂದ ಅವರನ್ನು ಬಿಡಿಸಿ, ಅದನ್ನು ಮುಂದುವರಿಸಲು ಯಾರಿಗಾದರೂ ಹೇಳಬೇಕೆಂಬ ವಿಚಾರದಲ್ಲಿ ತೊಡಗಿದಾಗ ಆ ಮಠದಲ್ಲಿಯೇ ಇದ್ದ ಪಂಡಿತ ಶಂಕರಶಾಸ್ತ್ರಿಗಳು ನನ್ನ ಹೆಸರನ್ನು ಸೂಚಿಸಿ, ನನ್ನೆಡೆಗೆ ಬಂದು 'ಅನುಭವಸಾರ' ಪ್ರವಚನವನ್ನು ಮುಂದುವರಿಸಲು ತಿಳಿಸಿದರು. ನಾನು ಒಪ್ಪಿಗೊಂಡು ಆ ಪ್ರಕಾರ ಮುಂದುವರಿಸಿದೆ. ಈ ತತ್ತ್ವದಲ್ಲಿ ಅಭಿ-ರುಚಿಯುಳ್ಳ ಎಷ್ಟೋ ಜನರು ಪ್ರವಚನ ಕೇಳಲು ಬರತೊಡಗಿದರು, ಅವರಲ್ಲಿ ಕೋಟಿ ವಕೀಲರು, ಶಂಕರ ಶಾಸ್ತ್ರಿಗಳು ಸಹ ಇದ್ದರು, ಈ ಗ್ರಂಥದ ಪ್ರವಚನ ಮುಗಿದ ನಂತರ "ಪರಮಾನುಭವ ಬೋಧೆ" ಮತ್ತು ಶಕ್ತಿ ವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವ 'ಕ್ರಿಯಾಸಾರ'. ಗ್ರಂಥಗಳ ಪ್ರವಚನವನ್ನು ಪ್ರಾರಂಭಿಸಿದೆನು. 'ಕ್ರಿಯಾಸಾರ'ವನ್ನು ಹೇಳುತ್ತಿರುವಾಗ ಶಂಕರಾಚಾರ್ಯರ ಶಿಷ್ಯರಾದ ಅಲ್ಲಿಯೆ ಒಬ್ಬ

ಬ್ರಾಹ್ಮಣ ಡಾಕ್ಟರರು ಶಂಕರಾಚಾರ್ಯರ "ಬ್ರಹ್ಮಸೂತ್ರಭಾಷ್ಯ"ವನ್ನು ತೆಗೆದು ಕೊಂಡು, ಶಕ್ತಿವಿಶಿಷ್ಟಾದ್ವೈತವನ್ನು ಪ್ರತಿಪಾದಿಸುವಾಗ ನೀಲಕಂಠಶಿವಾಚಾರ್ಯರ ಕ್ರಿಯಾಸಾರ ಗ್ರಂಥಕ್ಕೂ ಶಂಕರಾಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೂ ಇರುವ ವಿಷಯದಂತರವನ್ನು ನಿರೀಕ್ಷಿಸುತ್ತಿದ್ದರು. ಪ್ರಸಂಗಾನುಸಾರ ಒಂದೊಂದು ವಿಷಯ ದಲ್ಲಿ ನೀಲಕಂಠ ಶಿವಾಚಾರ್ಯರು ಸರಿಯಾಗಿ ವಿಚಾರಿಸಿರುವುದಾಗಿ ಅವರು ಒಪ್ಪುತ್ತಿ ದ್ದರು. ಪ್ರವಚನ ಮುಗಿದ ನಂತರ ಶಂಕರ ಶಾಸ್ತ್ರಿಗಳು ಇನ್ನು ಪಂಡಿತ ನಾಗಭೂಷಣ ಶಾಸ್ತ್ರಿಗಳು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸೇವೆ ಸಲ್ಲಿಸಲು ಹೋಗುವ ರೆಂದು ಸಭೆಗೆ ತಿಳಿಸಿದರು. ಆಗ ಶ್ರೋತೃಗಳಲ್ಲಿ ಬಹು ಜನರು ವ್ಯಸನ ಪಟ್ಟರು. ಎಲ್ಲ ರಿಗೂ ಸಮಾಧಾನ ಹೇಳಿ ಧಾರವಾಡಕ್ಕೆ ಬಂದೆನು.

ಈ ಮಧ್ಯದಲ್ಲಿ ನನ್ನ ಸಂಸಾರಿಕ ರಥ ದೇವರ ಕೃಪೆಯಿಂದ ಸರಿಯಾಗಿ ನಡೆದು ನನಗೆ ಬಸವರಾಜ ಮತ್ತು ಚೆನ್ನಬಸವಯ್ಯ ಎಂಬ ಗಂಡು ಮಕ್ಕಳು ಹಾಗೂ ೪ ಹೆಣ್ಣು ಮಕ್ಕಳಾಗಿದ್ದರು. ಧಾರವಾಡಕ್ಕೆ ಬಂದ ಕೆಲವು ದಿವಸಗಳಲ್ಲಿಯೇ 'ಚೆನ್ನಬಸವಣ್ಣ ನವರ ವಚನಗಳ ಪ್ರಕಟನೆಯ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಈ ಕಾಲಕ್ಕೆ ಚೆನ್ನಬಸವಣ್ಣನವರ ಸ್ಥಾನವಾದ ಉಳವಿಗೆ ಹೋಗಿಬರಬೇಕೆಂಬ ಹಂಬಲವಾಯಿತು. ಆ ವಿಚಾರವನ್ನು ಮೃತ್ಯುಂಜಯಪ್ಪಗಳಿಗೆ ತಿಳಿಸಿದಾಗ ಅವರು ಒಪ್ಪಿದರಲ್ಲದೆ ಅಲ್ಲಿ ಶಿವಾನುಭವ ನಡೆಸಬೇಕೆಂದು ತಿಳಿಸಿದರು. ಅದು ಅಲ್ಲಿಯ ಭಕ್ತರ ಅಪೇಕ್ಷೆಯಾಗಿತ್ತು. ಆಗ ನಾನು "ಜಾತ್ರೆಯ ಗದ್ದಲದಲ್ಲಿ ನಾನೊಬ್ಬ ಹೇಳಿದರೆ ಕೇಳುವವರಾರು ? ಎಲ್ಲ ಜನರ ಮೇಲೆ ಪರಿಣಾಮವಾಗಬೇಕಿದ್ದರೆ, ತಾವು ಹಾಗೂ ಚಿತ್ರದುರ್ಗದ ಶ್ರೀ ಮ. ನಿ. ಪ್ರ. ಜಗದ್ಗುರು ಜಯವಿಭವ ಸ್ವಾಮಿಗಳು ದಯಮಾಡಿಸಿದರೆ ಒಳಿತು ಎಂದೆ. ಅದೇ ವೇಳೆಗೆ ಕರ್ನಾಟಕ ವಿಶ್ವವಿದ್ಯಾಲಯದ ಅಧ್ಯಯನ ತಂಡವು ಡಾ. ಆರ್. ಸಿ. ಹಿರೇಮಠ ಹಾಗೂ ಡಾ. ಎಂ. ಎಸ್. ಸುಂಕಾಪುರವರ ಮುಖಂಡತ್ವದಲ್ಲಿ ಹೊರಡುವ ನಿರ್ಣಯಮಾಡಿತು. ಹೀಗೆ ನಾವೆಲ್ಲರೂ ಹೋಗುವುದರಿಂದ ಜನರ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವಾಗುವುದು. ಎಂದು ತಿಳಿಸಿದಾಗ ಅವರು ಒಪ್ಪಿಕೊಂಡರಲ್ಲದೆ, ಮುಂದೆ ಕೆಲವು ದಿವಸಗಳಲ್ಲಿಯೇ ಅಲ್ಲಿಗೆ ಹೋದೆವು. ಅಲ್ಲಿ ಜನರಲ್ಲಿ ಜಾಗ್ರತೆಯ ನ್ನುಂಟುಮಾಡಿ ಅಲ್ಲಿ 'ಅನುಭವ ಮಂಟಪ' ಮತ್ತು 'ಶಿವಯೋಗಿಗಳ ಮಠ' ಸ್ಥಾಪಿ ಸಲು ನಿರ್ಣಯಿಸಿ. ಆ ಪ್ರಕಾರ ಮಾಡಲಾಯಿತು, ಈಗ ಅಲ್ಲಿ ಪ್ರತಿ ವರ್ಷ ಶಿವಾನು ಭವ ನಡೆಯುವಂತೆಯೂ ಆಯಿತು.

'ಚೆನ್ನಬಸವಣ್ಣನವರ ವಚನ'ಗಳ ಕೃತಿಯನ್ನು ಹೊರತರಲಾಯಿತು. ಡಾ. ಎಂ. ಎಸ್. ಸುಂಕಾಪೂರವರ ಜೊತೆ "ಸಪ್ತಕಾವ್ಯದ ಗುರುಬಸವ ಕೃತಿಯನ್ನು ಸಂಪಾ

ದಿಸಲಾಯಿತು. "ಭಾರತೀಯ ದರ್ಶನ ಸಮೀಕ್ಷೆ" "ಸೊಗಸಿನ ಬಾಳು" ಕೃತಿಗಳು ಹೊರಬಂದವು.

ಡಾ. ಆರ್. ಸಿ. ಹಿರೇಮಠರವರು ಕುಲಪತಿಗಳಾದ ಅವಧಿಯಲ್ಲಿ ಕಲಬುರ್ಗಿಯ ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ನನ್ನ ಮೂರು ಉಪನ್ಯಾಸಗಳನ್ನೇರ್ಪಡಿಸಿದ್ದರು. ಆಗ ವೀರಶೈವಧರ್ಮದ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ. ಗಳನ್ನೊಳಗೊಂಡ "ವೀರಶೈವ ಧರ್ಮವಿವೇಚನೆ" ಎಂಬ ಕೃತಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. ಏತನ್ಮಧ್ಯೆ ಕರ್ನಾಟಕ ಸರಕಾರದವರು ಮಾಶಾಸನ ಕೊಡುವ ವ್ಯವಸ್ಥೆ ಮಾಡಿದರು. ಅವರನ್ನು ಕೃತಜ್ಞತಾಪೂರ್ವಕ ಅಭಿನಂದಿಸುತ್ತೇನೆ. ಕನ್ನಡ ಅಧ್ಯಯನಪೀಠಕ್ಕೆ ಸಂಬಂಧಿಸಿದ ಬಸವೇಶ್ವರ ಪೀಠದ ಮುಖಾಂತರ ಚನ್ನಸದಾಶಿವಯೋಗಿಗಳು ರಚಿಸಿದ ಸಂಸ್ಕೃತ"ಶಿವಯೋಗ ಪ್ರದೀಪಿಕೆ"ಯನ್ನು ಸಂಪಾದಿಸಲಾಯಿತು. ಇವೆಲ್ಲವುಗಳ ಜೊತೆಗೆ ನನ್ನ ಶಕ್ತ್ಯನುಸಾರ ಪ್ರವಚನ, ನಿರ್ವಹಿಸುತ್ತ ಬಂದಿರುವೆನು.



# ಒಂದು ಸಂದರ್ಶನ… … …

—ಶ್ರೀ ಮತ್ತು ಶ್ರೀಮತಿ ಸಣ್ಣೆಲ್ಲಪ್ಪನವರ

ಅಂದು ಶನಿವಾರ ಮುಂಚಿತವಾಗಿ ನಾವು ಸಾಯಂಕಾಲದ ಆರು ಗಂಟೆಯೆಂದು ತಿಳಿಸಿದಂತೆ ಮುರುಘಾಮಠದ ಹಿಂದಿನಬದಿಯ ಕಂಪೌಡ ಗೋಡೆಯ ಸಮೀಪವಿರುವ ಪಂಡಿತ ನಾಗಭೂಷಣ ಶಾಸ್ತ್ರಿಗಳವರ ನಿವಾಸಕ್ಕೆ ವೇಳೆಗೆ ಸರಿಯಾಗಿ ಹೋದೆವು. ಅವರು ಸಹ ನಮ್ಮ ಬರವನ್ನೇ ಕಾಯುತ್ತಿದ್ದರು. ನಮ್ಮನ್ನು ಕಂಡು ಮುಂದೆ ಬಂದು ಆತ್ಮೀಯತೆಯಿಂದ "ಬನ್ನಿ" ಎಂದು ಮುಗುಳ್ನಗೆ ಬೀರಿ ತಮ್ಮ ಮನೆಯ ಮುಂಬಾಗಿಲಿಗೆ ಕರೆದೊಯ್ದು ಬಾಗಿಲಲ್ಲಿ ಒಂದು ಗಳಿಗೆ ನಿಂತು "ನೋಡಿ, ಇದೇ ನಮ್ಮ ಕುಟೀರ" ಎಂದರು. ಆಗ ನಾವು ತಲೆಬಾಗಿಲದ ತಲೆಯನ್ನು ವೀಕ್ಷಿಸಿದೆವು. ಅಲ್ಲಿ

'ಸಿದ್ಧಲಿಂಗ ಕೃಪಾ'

'ಮೃತ್ಯುಂಜಯ ನಿಲಯ'

ಎಂಬ ಪೂಜ್ಯಮಯವಾದ ನಾಮವನ್ನು ಸುಂದರವಾಗಿ ಬರೆದದ್ದು ಗೋಚರವಾಯಿತು. ನಂತರ ಶಾಸ್ತ್ರಿಗಳವರು "ಒಳಗೆ ಬನ್ನಿ" ಎಂದಾಗ ಒಳಗೆಹೋದೆವು. ಅಲ್ಲಿ ಮೊದಲನೆಯ ಕೋಣೆಯಲ್ಲಿ ನಮಗೆ ಕಂಡದ್ದು ಅವರ ಪಾಕ್ಷಿಕ ಪತ್ರಿಕೆಯಾದ 'ಸಾವಧಾನ'ದ ಮುದ್ರಣಾಲಯ. ಈ ಮುದ್ರಣಾಲಯದ ಹೆಸರು 'ಮಹಾಂತ ಮುದ್ರಣಾಲಯ' ಇದನ್ನೆಲ್ಲ ಅವರು ನಮಗೆ ವಿವರವಾಗಿ ತೋರಿಸಿದರು- ನಂತರ ಹಿಂಬಾಗಿಲಿಗೆ ಹೋದಾಗ ಅವರು ಬಾಗಿಲಲ್ಲಿ ನಿಂತು "ಬನ್ನಿ ಇದೇ ನಾನು ವಾಸಿಸುವ ಮನೆ" ಎಂದರು. ಅಲ್ಲಿ ಸಹ ಬಾಗಿಲದ ಮೇಲ್ಗಡೆ 'ಓಂ' ಎಂಬ ಮಂಗಲಕರವಾದ ಅಕ್ಷರವು ನಮ್ಮನ್ನು ಸ್ವಾಗತಿಸಿತು. ನಂತರ ನಾವು ಒಳಗೆ ಹೋದೆವು, ಅವರು "ಮನೆ ಸಣ್ಣದಿದೆ" ಎಂದರು"ಮನೆ ಸಣ್ಣದಿದ್ದರೂ ತಮ್ಮ ಮನ ಬಹು ದೊಡ್ಡದು" ಎಂದರು ನಮ್ಮ ಯಜಮಾನರು. ಮನೆ ಚಿಕ್ಕದಾಗಿದ್ದರೂ ಚೊಕ್ಕವಾಗಿದ್ದು ವಾತಾವರಣ ಓಂಕಾರಮಯ

ವಾಗಿದ್ದಿತು. ಅದು ಆಶ್ರಮವೆನಿಸುತ್ತಿತ್ತು. ಅಲ್ಲಿಂದ ಶಾಸ್ತ್ರಿಗಳವರು ತಮ್ಮ ಕೋಣೆಗೆ ಕರೆದುಕೊಂಡು ಹೋಗಿ ನಮಗೆ ತಮ್ಮ ಮಂಚದ ಮೇಲೆ ಕೂಡ್ರಲು ಹೇಳಿದರು. ಆಗ ನಮ್ಮ ಮನೆಯವರು "ಬೇಡಿ. ಅದು ನಿಮ್ಮ ಸ್ಥಾನ. ನಮಗೆ ಇಲ್ಲಿ ಆರಾಮವಿದೆ. ಇಲ್ಲಿಯೇ ಕೂಡ್ರುತ್ತೇವೆ" ಎಂದು ನೆಲದ ಮೇಲೆ ಹಾಸಿದ ಚಾಪೆಯಮೇಲೆ ಕುಳಿತೆವು. ನಂತರ ಅವರು ಒಳಗೆಹೋಗಿ ಕೈ-ಕಾಲು ಮುಖ ತೊಳೆದು ನೊಸಲಲಿ ಭಸ್ಮವನ್ನು ಧರಿಸಿ ಗಂಭೀರ ನಡಿಗೆಯಲಿ ಹರ್ಷಚಿತ್ತದಿಂದ ನಮ್ಮೆಡೆಗೆ ಆಗಮಿಸಿದರು. ಆಗ ಅವರನ್ನು ಕಂಡ ನನಗೆ ಸಾಕ್ಷಾತ್ ಪರಮ ಪ್ರಭುವೆ ದಯಮಾಡಿಸುತ್ತಿರುವನೇನೋ ಎಂದು ಭಾಸವಾಯಿತು. ಅವರ ಹಿಂದೆ ಅವರ ಧರ್ಮಪತ್ನಿಯೂ ಬಂದರು. ಈ ತಾಯಿಯದು ಶಾಸ್ತ್ರಿಗಳವರಿಗೆ ತಕ್ಕ ಮಾಟವಾದ ವ್ಯಕ್ತಿತ್ವ ಮುಖದಲ್ಲಿ ದೈವೀಕಳೆ ಸೂಸುತ್ತಿತ್ತು. ತಲೆತುಂಬ ಹೊದ್ದ ಸೆರಗು ದೊಡ್ಡದಾಗಿ ಹಚ್ಚಿದ ಕುಂಕುಮ ನಿಚ್ಚ ಮುತ್ತೈದಿತನವನ್ನು ಸೂಚಿಸುತ್ತಿ-ದ್ದವು. ಅವರ ಕಾಲ್ಬೆರಳು ಇಟ್ಟಂಗಿ ಬಿದ್ದು ತುಂಬಾ ನೋವಾಗಿತ್ತು. ಆ ನೋವಿನಲ್ಲಿಯೂ ಅತಿಥಿಯ ಆದರ ಅವರಲ್ಲಿ ಅತಿಯಾಗಿತ್ತು. ಅವರ ಕಂಗಳು ನಮ್ಮನ್ನೆ ಪ್ರೀತಿಯಿಂದ ಆಸಕ್ತಿಯಿಂದ ವೀಕ್ಷಿಸುತ್ತಿದ್ದವು. ಶಾಸ್ತ್ರಿಗಳವರು ನಮ್ಮನ್ನು ಅವರಿಗೆ ಪರಿಚಯಿಸಿದರು. ಆಗ ಅವರು ನೀವು ನಮ್ಮ ಮನೆಗೆ ಬಂದದ್ದು ಬಹಳ ಸಂತೋಷ. ನಿಮ್ಮ ಮಕ್ಕಳು ಮರಿ ಎಲ್ಲವೂ ಕ್ಷೇಮವೆ ? ಎಂದು ವಿಚಾರಿಸಿದರು. ನಾವು ಸಹ ಸಂತೋಷದಿಂದ ಉತ್ತರಿಸಿ "ಕಾಲಿಗೆ ಏನಾಗಿದೇರಿ"? ಎಂದು ಕೇಳಿದೆವು. "ತಂಗಿ, ಇಟ್ಟಂಗಿ ಬಿದ್ದಿತ್ತವ್ವ ! ನಿನ್ನೆ ಮೊನ್ನೆ ಬಹಳ ತ್ರಾಸಾತು, ಇವತ್ತ ತುಸು ನೋವು ಕಡಿಮೆ ಆಗಿದ" ಎಂದು ಶಾಂತವಾಗಿ ಹೇಳಿದರು. ನಂತರ ಸ್ವಲ್ಪ ಹೊತ್ತು ನಿಂತು ಒಳಗೆ ಹೋದರು.

ಆಮೇಲೆ ನಮ್ಮ ಮನೆಯವರು ನೇರವಾಗಿ ವಿಷಯಕ್ಕೆ ಬರುವದಕ್ಕಾಗಿ "ಸರ್, ತಮ್ಮ ಪೂರ್ಣ ಹೆಸರೇನು"? ಎಂದರು. "ನನ್ನ ಹೆಸರನ್ನು ಅಷ್ಟೇ ಏಕೆ ? ಇಲ್ಲಿಯವರೆಗ ನಡೆದ ನನ್ನ ಕಥೆಯನ್ನೆಲ್ಲ ಹೇಳುವೆ. ಆದರೆ ಮೊದಲು ನಿಮ್ಮ ಅಲ್ಪೋಪಹಾರವಾಗಲಿ" ಎಂದರು ಶಾಸ್ತ್ರಿಗಳು. ಅಷ್ಟರಲ್ಲಿ ಅವರ ಚಿಕ್ಕ ಮಗ ಚನ್ನಬಸವರು ಚಿಕ್ಕುಹಣ್ಣು, ಫೇಡೆ ಜೋಡಿ ತಂದು ನಮಗೆ ಕೊಟ್ಟರು. ನಾವು "ತಾವೂ ನಮ್ಮ ಜೊತೆಗೆ ತೆಗೆದುಕೊಳ್ಳಿ" ಎಂದಾಗ "ಬೇಡ, ಇನ್ನೂ ನಾನು ಸ್ನಾನ ಮಾಡಬೇಕು. ನಂತರ ತೆಗೆದುಕೊಳ್ಳುವೆ, ನಿಮ್ಮೆದುರಿಗೆ ಸಾಕ್ಷಿಯಾಗಿ ಕುಳಿತ ನಾನು ನಿಮ್ಮ ಜೊತೆಗೆ ತಗೆದುಕೊಂಡಂತೆಯೇ" ಎಂದರು. ಆಮೇಲೆ ನಮ್ಮದು ಚಹವೂ ಮುಗಿಯಿತು.

" ಈಗಲಾದರೂ ತಮ್ಮ ಪೂರ್ಣ ಪರಿಚಯ ಮಾಡಿ ಕೊಡುವಿರಾ "?

" ಅವಶ್ಯವಾಗಿ" ಎಂದರು.

ಇಲ್ಲಿಂದ ಆರಂಭವಾಯಿತು ಶಾಸ್ತ್ರಿಗಳವರ ಜೀವನದ ಸಂಕ್ಷಿಪ್ತ ಪರಿಚಯ.

"ನೋಡ್ರೆಪಾ, ನನ್ನ ಹೆಸರಿಗಿಂತ ಮೊದಲು ಹೇಳುವದೊಂದಿದೆ. ಅದೇನಂದ್ರ ನಾನು ಯಾವಾಗಲೂ ಯಾರಿಂದಲೂ ಏನನ್ನೂ ಅಪೇಕ್ಷಿಸುವದಿಲ್ಲ. ತಾನಾಗಿಯ ಬಂದ ಕೆಡಕು ಒಳಿತು ಎಲ್ಲವನ್ನೂ ಶಿವಪ್ರಸಾದವೆಂದು ಸ್ವೀಕರಿಸುವೆ."

" ಇನ್ನು, ನನ್ನ ಪೂರ್ಣ ಹೆಸರು ನಾಗಭೂಷಣ ಪರ್ವತರಾಜ ಶಾಸ್ತ್ರಿಮಠ,

" ತಮ್ಮ ತಾಯಿಯ ಹೆಸರು "?

" ತಾಯಿ ಲಿಂಗಮ್ಮ, ತಂದೆ ಪರ್ವತರಾಜ".

" ಸರ್. ತಮ್ಮ ಊರು ಯಾವುದು" ?

" ಸಂಗನಾಳ. ನಾನು ಹುಟ್ಟಿದ್ದೂ ಅಲ್ಲಿಯೇ ".

" ಅದು ಯಾವ ತಾಲೂಕ ಮತ್ತು ಯಾವ ಜಿಲ್ಲೆಯಲ್ಲಿ ಬರುತ್ತದೆ."

" ಅದು ಮೊದಲು ಮೊಗಲಾಯಿ, ಹಾಲಕೆರೆಯಿಂದ ಒಂಭತ್ತು ಮೈಲ ಅಂತ ದಲ್ಲಿದೆ. ಈಗ ರಾಯಚೂರ ಜಿಲ್ಲೆಯ ಯಲಬುರ್ಗಿ ತಾಲೂಕಿನಲ್ಲಿ ಬರುತ್ತದೆ.

" ತಾವು ಜನಿಸಿದ ತಾರೀಖು "?

" ೧೯೦೬ನೇ ಇಸ್ವಿಯ ಎಪ್ರಿಲ ತಿಂಗಳ ೮ ನೇ ತಾರೀಖು".

" ವಾರ ಯಾವುದು ?"

" ರವಿವಾರ".

" ಒಡಹುಟ್ಟಿದವರೆಷ್ಟು ಜನ ?"

" ನಾನು, ನಮ್ಮ ಅಕ್ಕ ಇಬ್ಬರೆ".

" ಈಗ ಅಕ್ಕ ಎಲ್ಲಿರುವರು ?"

- ಅಕ್ಕ ಚಿಕ್ಕ ವಯಸ್ಸಿನಲ್ಲಿ ಅಂದರೆ ೧೨–೧೩ನೆಯ ವರ್ಷದಲ್ಲಿ ಶಿವಾಧೀನಳಾ ದಳು. ತಂದೆ. ಸಹ ನಾನು ಅಂಬೆಗಾಲಿಟ್ಟು ಆಡುವ ಅಬೋಧಸ್ಥಿತಿಯಲ್ಲಿದ್ದಾಗ ಶಿವೈಕ್ಯರಾದರು. ತಾಯಿಯೂ ಕೂಡ ನಾನು ನಾಲ್ಕು ವರ್ಷದವನಿದ್ದಾಗ ನಮ್ಮನ್ನ ಗಲಿದಳು. ತಾಯಿಯ ನೆನಪು ಮಾತ್ರ ಮಸುಕು ಮಸುಕಾಗಿದೆ. ನಾನು ಜೋಪಾ ನವಾದದ್ದು ಅಜ್ಜಿಯಿಂದ.

" ತಂದೆಯವರ ಕಾಯಕ ಯಾವುದಾಗಿತ್ತು ?"

" ಊರಲ್ಲಿ ಗಾವಟಿ ಶಾಲೆಯ ಶಿಕ್ಷಕರಾಗಿದ್ದರು."

" ತಾಯಿಯ ತವರೂರಾವುದು ?"

" ಅವರ ಜನ್ಮಸ್ಥಳ ಗದಗ ತಾಲೂಕಿನ ನಾಗಸಮುದ್ರ. ಅಲ್ಲಿಯ ಹಿರೇಮಠರವರ ಮನೆಯ ಮಗಳು.

" ತಮ್ಮ ತಂದೆಯವರಿಗೆ ಸಹೋದರ-ಸಹೋದರಿಯರೆಷ್ಟು ಮಂದಿ"?

"ತಂದೆಯವರಿಗೆ ಗಂಗವ್ವ-ಸಂಗವ್ವ ಅನ್ನದಾನವ್ವ ಮೂರು ಮಂದಿ ಸಹೋದರಿಯರು. ಇಬ್ಬರು ಸಹೋದರು, ಒಬ್ಬರು ಹಿರಿಯರು ಅನ್ನದಾನಯ್ಯ ಎಂಬವರು. ಕಿರಿಯರು ಮಲ್ಲಿಕಾರ್ಜುನಯ್ಯ ಎಂಬವರು. ಒಬ್ಬ ಸೋದರತ್ತೆಯನ್ನು ನಿಡಗುಂದಿಗೆ, ಇನ್ನೊಬ್ಬರನ್ನು ಶಾಂತಗೇರಿ ಇಟಗಿಗೆ, ಇನ್ನೊಬ್ಬರನ್ನು ನಾಯಕನೂರಿಗೆ ಕೊಟ್ಟಿತ್ತು".

" ತಮ್ಮ ಮದುವೆ ಆದದ್ದು ಯಾವಾಗ "?

" ನನಗೆ ೮-೯ ವರ್ಷವಿರಬಹುದು. ನನ್ನ ಹೆಂಡತಿಗೆ ಆರು ತಿಂಗಳು ಮಾತ್ರ, ನಮ್ಮ ಅಕ್ಕನ ಲಗ್ನದ ಸಮಯದಲ್ಲಿ ನಿಡಗುಂದಿಯ ಅತ್ತೆಯ ಮಗಳನ್ನು ನನಗೆ ಕೊಟ್ಟು, ಇಟಗಿಯ ಅತ್ತೆಯ ಮಗನಿಗೆ ಅಕ್ಕನನ್ನು ಕೊಟ್ಟು ಮದುವೆ ಮಾಡಿದರು.

" ಮಕ್ಕಳೆಷ್ಟು ಜನ "?

" ಬಸವೇಶ್ವರ, ಚನ್ನಬಸವೇಶ್ವರರೆಂಬ ಇಬ್ಬರು ಗಂಡು ಮಕ್ಕಳು. ನಾಲ್ಕು ಜನ ಹೆಣ್ಣುಮಕ್ಕಳು.—ವೀರಾಂಬೆ, ಮಹಾದೇವಿ, ಅನ್ನಪೂರ್ಣಾ, ಮಹಾಲಿಂಗವ್ವ ಹಿರಿಯಮಗಳು ವೀರಾಂಬೆಯನ್ನು ಸೂನಗದ ಹಿರೇಮಠದ ಚನಮಲ್ಲಯ್ಯ ಬಿ.ಎಸ್‌ಸಿ. ಅಗ್ರಿ. ಅವರಿಗೆ. ಆಕೆಯ ತಂಗಿ ಮಹಾದೇವಿಯನ್ನು ಅವರ ತಮ್ಮ ಶಿವಲಿಂಗಯ್ಯ ಎಮ್. ಬಿ. ಬಿಎಸ್. ಆರೋಗ್ಯಾಧಿಕಾರಿಗಳು ಅವರಿಗೆ, ಅನ್ನಪೂರ್ಣೆಯ-ನ್ನು, ಯಾವಗಲ್ಲ ವಿಶ್ವನಾಥ, ಭೂಸನೂರಮಠ ವೈದ್ಯರಿಗೆ, ಮಹಾಲಿಂಗವ್ವನನ್ನು ಹಳ್ಳಿಹಾಳದ ಸಂಗಯ್ಯನವರು ಯಲ್ಲಾಪುರಮಠ ವೈದ್ಯರಿಗೆ, ಹಿರಿಯ ಮಗಳು ತೀರಿಕೊಂಡಿರುವಳು. ಎರಡನೆಯ ಅಳಿಯ ಆರೋಗ್ಯಾಧಿಕಾರಿಯಾಗಿರುವರು. ಮೂರು ಮತ್ತು ನಾಲ್ಕನೆಯ ಅಳಿಯಂದಿರು ವೈದ್ಯರಾಗಿರುವರು. ಅಂತೂ ಎಲ್ಲರೂ ಒಳ್ಳೆಯ ಉದ್ಯೋಗದಲ್ಲಿರುವರು. ಮೊಮ್ಮಕ್ಕಳು ಮರಿಮೊಮ್ಮಕ್ಕಳೂ, ಸಾಕಷ್ಟಿರುವರು. ದೇವರು ಬಳಗಕ್ಕೇನು ಕೊರತೆ ಮಾಡಿಲ್ಲ.

"ತಾವು ಪ್ರಾಥಮಿಕ ಶಿಕ್ಷಣವನ್ನು ಪಡೆದುದೆಲ್ಲಿ ?
"ಸೂಗನಾಳದಲ್ಲಿ, ನನ್ನ ಆದ್ಯ ಶಿಕ್ಷಕ ದ್ಯಾಂಪೂರದ ಪುರಾಣಿಕ ಕಲ್ಲಯ್ಯನವ...

"ಆ ಮೇಲೆ ಎಲ್ಲಿಗೆ ಹೋದಿರಿ ?

"ಅಲ್ಲಿಂದ ನಿಡಗುಂದಿಗೆ ಹೋಗಿ; ಅಲ್ಲಿ ೫ ನೇ ವರ್ಗದ ವರೆಗೆ ಕಲಿತೆ. ನ... ೧೯೧೮ರಲ್ಲಿ ಹಾಲಕೆರೆಯ ಅನ್ನದಾನ ಸ್ವಾಮಿಗಳವರ ಸಂಸ್ಕೃತ ಪಾಠಶಾಲೆಯ... ಸೇರಿದೆ. ೧೯೨೫ ರಲ್ಲಿ ಸಂಸ್ಕೃತದ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಹಾಲಕೆರೆಯಿಂದ ಕಾ... ಹೊರಟೆ." ಆಗ ನಮ್ಮೂರಿನ ಪೋಲೀಸಗೌಡರ ಮನೆತನದ ಲಿಂಗನಗೌಡ... ಶಿವನಗೌಡರು ಮೊದಲಾದವರು ಬಹಳ ಸಹಾಯ ಮಾಡಿದರು.

"ಅಲ್ಲಿ ತಾವು ಅಭ್ಯಸಿಸಿದುದೇನು" ?

"ಕಲಕತ್ತಾದಲ್ಲಿ ನಡೆಯುವ ಸಂಸ್ಕೃತ ಸಾಹಿತ್ಯ, ನ್ಯಾಯ, ವೇದಾಂತ ಪ... ಗಳನ್ನು ಮುಗಿಸಿದೆನು. ಕಾಶಿಯಲ್ಲಿ ಒಟ್ಟು ಆರು ವರ್ಷವಿದ್ದೆ, ಅದರಲ್ಲಿ ೧ವ... ಜಂಗಮವಾಡಿ ಮಠದಲ್ಲಿದ್ದೆ. ಮೊದಲನೆಯ ವರ್ಷ ಸಾಹಿತ್ಯ ಆದ್ಯ ಮ... ಮಧ್ಯಮ ಪರೀಕ್ಷೆಗೆ ಕಟ್ಟಿದೆ. ಆದರೆ ಪರೀಕ್ಷಕರು ಕೇವಲ ಸಾಹಿತ್ಯ ಆದ್ಯದ ಪರೀಕ್ಷ... ಫಾರ್ಮನ್ನು ಸ್ವೀಕರಿಸಿ ಮಧ್ಯಮ ಪರೀಕ್ಷೆಯ ಫಾರ್ಮನ್ನು ತಿರುಗಿ ಕಳಿಸಿದ್ದ... ಕಾರಣ ನನ್ನ ಮನಸ್ಸಿಗೆ ಬೇಜಾರಾಗಿ ಪರೀಕ್ಷೆಯದಿನ ನಾನು ಹೋಗದೆ ನಿ... ಗೊಂಡು ನನ್ನ ಕೋಣೆಯಲ್ಲಿ ಕುಳಿತೆ. ಉಳಿದ ಎಂಟು ಜನ ನನ್ನ ಸಹಪಾಠಿಗ... ಪರೀಕ್ಷೆಗಾಗಿ ವರ್ಧಮಾನಕ್ಕೆ ಹೋಗಲು ರೇಲ್ವೆ ನಿಲ್ದಾಣಕ್ಕೆ ಹೋದರು. ನ... ಕಡೆನಂದಿಹಳ್ಳಿಯ ಗುರುಮೂರ್ತಿದೇವರು ನನ್ನ ಕೊಠಡಿಗೆ ಬಂದು ನಾನು ಪರೀಕ್ಷೆ... ಹೋಗದೆ ಇರುದ ಕಾರಣವನ್ನು ವಿಚಾರಿಸಿದರು. ಆಗ ನಾನು ಪರೀಕ್ಷಕರು ... ಒಂದು ಫಾರ್ಮನ್ನು ತಿರುಗಿ ಕಳಿಸಿರುವದಾಗಿ ಹೇಳಿದೆ. ಆದರೆ ಅವರು ನನ್ನ... ಒಂದೇ ಪರೀಕ್ಷೆಯನ್ನಾದರೂ ಕೊಟ್ಟು ಬಾ" ಎಂದು ಒತ್ತಾಯ ಮಾಡಿ ಗಡಿಬಿಡಿಯ... ಸ್ಟೇಶನಕ್ಕೆ ಕಳಿಸಿದರು. ನಾನು ಅವರ ಆಗ್ರಹಕ್ಕೆ ಹೋದೆ. ರೇಲ್ವೆ ನಿಲ್ದಾಣದ... ನನ್ನ ಸ್ನೇಹಿತರು ಇನ್ನೂ ಇದ್ದರು. ಅಂತೂ ಎಲ್ಲರೂ ಪರೀಕ್ಷೆ ಮುಗಿಸಿ ಬಂದ... ಆಮೇಲೆ ಆಶ್ಚರ್ಯವೆಂದರೆ ಪರೀಕ್ಷೆಯ ಫಲಿತಾಂಶ ಬಂದ ದಿನ ಒಂಭತ್ತು ಅಭ್ಯ... ಗಳಲ್ಲಿ ಉತ್ತೀರ್ಣನಾದವ ನಾನೊಬ್ಬನೇ ಆಗಿದ್ದೆ. ಉಳಿದವರು ಮೂರು ವ... ಸತತಾಭ್ಯಾಸ ಮಾಡಿದವರಾಗಿದ್ದರು. ಮುಂದೆ ಎರಡನೆಯ ವರ್ಷದಲ್ಲಿ ಸಾಹಿ... ಮಧ್ಯಮ ಮತ್ತು ನ್ಯಾಯ, ಆದ್ಯ ಪರೀಕ್ಷೆಗಳನ್ನು ಮುಗಿಸಿದೆ. ಮೂರನೆಯ ವ...

ದಲ್ಲಿ ಕಾವ್ಯತೀರ್ಥ ನ್ಯಾಯ ಮಧ್ಯಮ, ನಾಲ್ಕನೆಯ ವರ್ಷದಲ್ಲಿ ವೇದಾಂತ ಆದ್ಯ, ಐದನೆಯ ವರ್ಷದಲ್ಲಿ ವೇದಾಂತ ಮಧ್ಯಮ ಆರನೆಯ ವರ್ಷದಲ್ಲಿ ಅಂದರೆ ೧೯೩೧ರಲ್ಲಿ ವೇದಾಂತ ತೀರ್ಥ ಪರೀಕ್ಷೆಗಳ ವರೆಗೆ ಕಾಶಿಯಲ್ಲಿ ಚಿತ್ರದುರ್ಗದ ಜಗದ್ಗುರುಗಳು ೧೯೨೯ರಲ್ಲಿ ಮುರುಘಾಮಠದ ಶಾಖೆಯನ್ನು ಸ್ಥಾಪಿಸಿದರು. ಆಗ ಚಿತ್ರ-ದುರ್ಗದ ಹಿಂದಿನ ಜಯವಿಭವ ಸ್ವಾಮಿಗಳು. ನಿಡಸೋಸಿಯ ಗುರುಲಿಂಗದೇವರು ಅಥಣಿಯ ಮೋಟಗಿ ಮಠದ ಗುರುಬಸವ ಸ್ವಾಮಿಗಳು, ಗದುಗಿನ ತೋಂಟದಾರ್ಯ ಮಠದ ಶಿವಕುಮಾರ ಸ್ವಾಮಿಗಳು, ಕೊಲ್ಲಾಪುರದ ಗುರುಶಾಂತ ಸ್ವಾಮಿಗಳು· ಅಂಕಲಗಿ ಅಡವಿಮಠದ ವಿರೂಪಾಕ್ಷ ಸ್ವಾಮಿಗಳು, ಕಾಶೀನಾಥ ಸ್ವಾಮಿಗಳು (ಯಮಕನಮರಡಿ), ಗುರುಸಿದ್ಧಶಾಸ್ತ್ರಿಗಳು ಪುರಾಣಿಕಮಠ, ಬಸವರಾಜಶಾಸ್ತ್ರಿಗಳು, ಇಟಗಿ, ಶಂಕರಶಾಸ್ತ್ರಿಗಳು ಶಾಂತಗಿರಿ, ಶಿವಕುಮಾರ ಶಾಸ್ತ್ರಿಗಳು (ಆಮ್ಮಿಣಗಿ). ಇವರೆಲ್ಲ ಪಂಡಿತರು ನನ್ನಿಂದ ಒಂದೂವರಿ ತಿಂಗಳು 'ಸಿದ್ಧಾಂತ-ಶಿಖಾಮಣಿ'ಯ ಪ್ರವಚನ ಮಾಡಿಸಿದರು. ಇದೆಲ್ಲವನ್ನು ಮುಗಿಸಿ ಕಿ. ಶ. ೧೯೩೧ರಲ್ಲಿ ಕರ್ನಾಟಕಕ್ಕೆ ಮರಳಿದೆ. "ಇಲ್ಲಿಗೆ ಆಗಮಿಸಿದ ಮೇಲೆ ಯಾವ ಕಾರ್ಯವನ್ನು ಕೈಕೊಂಡಿರಿ ? "ನಾನು ಇಲ್ಲಿಗೆ ಬಂದ ನಂತರ ಹುಬ್ಬಳ್ಳಿಯ ಮೂರುಸಾವಿರ ಮಠದ ಜ. ಶ್ರೀ ಗುರುಸಿದ್ಧೇಶ್ವರ ಸ್ವಾಮಿಗಳು ನನ್ನನ್ನು ಕರೆಯಿಸಿ ತಮ್ಮಲ್ಲಿ ಸಂಸ್ಕೃತ ಪಂಡಿತನಾಗಿರಲು ಅಪ್ಪಣೆ ಕೊಡಿಸಿದರು. ಆ ಪ್ರಕಾರ ಒಂದು ತಿಂಗಳು ನಾನು ಅಲ್ಲಿದ್ದು ನಂತರ ಬೆಳಗಾವ ಜಿಲ್ಲೆಯ ನಾಗನೂರಿನ ರುದ್ರಾಕ್ಷಿಮಠದಲ್ಲಿ 'ಬ್ರಹ್ಮೋತ್ತರ ಕಾಂಡ' ('ವ್ಯಾಸೋಕ್ತ ಪುರಾಣ')ದ ಬಗೆಗೆ ಪ್ರವಚನ ಮಾಡಿದೆ. ಅಲ್ಲಿಂದ ೧೯೩೨ರಲ್ಲಿ ಗದುಗಿಗೆ ಬಂದು ಶ್ರೀ ಹಾಲಕೆರೆ ಅನ್ನದಾನ ಸ್ವಾಮಿಗಳವರ ಹಡಗಲಿ ಮಠದಲ್ಲಿ ಪ್ರವಚನ ಹಾಗೂ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕನೆಂದು ಸೇವೆಯನ್ನೂ ಆರಂಭಿಸಿದೆ. ಆಗ ಕಲಕತ್ತೆಯಲ್ಲಿ ನಡೆಯುವ ಸಂಸ್ಕೃತ ಪರೀಕ್ಷೆಗಳಿಗೆ ಕೂಡ್ರುವ ವಿದ್ಯಾರ್ಥಿಗಳಿಗೆ ಬೆಳಿಗ್ಗೆ ತರಬೇತಿ ಕೊಡುತ್ತಿದ್ದೆ. ಸಾಯಂಕಾಲ ಸಾರ್ವಜನಿಕರ ಸೇವೆಗಾಗಿ ಪ್ರವಚನ ಮಾಡುತ್ತಿದ್ದೆ. ಅಲ್ಲಿಯ ಇನ್ನೊಂದು ವಿಶೇಷವೆಂದರೆ ೧೯೩೮ರಲ್ಲಿ 'ಅಕ್ಕನ ಬಳಗ'ವನ್ನು ಬೆಂಗಳೂರಿನ ಶ್ರೀ ಮಹಾದೇವ ಸ್ವಾಮಿಗಳಿಂದ ಸ್ಥಾಪಿಸಿದೆವು, ಇದು ಕರ್ನಾಟಕದಲ್ಲಿಯೇ ಪ್ರಪ್ರಥಮವಾಗಿತ್ತು, ಇದಕ್ಕೂ ಮೊದಲು ಬೆಂಗಳೂರಲ್ಲಿ ಸಹ 'ಅಕ್ಕನ ಬಳಗ' ಇರಲಿಲ್ಲ.

ಗದುಗಿನಲ್ಲಿಯ ತಮ್ಮ ಇನ್ನಿತರ ಚಟುವಟಿಕೆಗಳ ಬಗೆಗೆ ವಿವರಿಸುವಿರಾ ? "ಆ ಊರಿನ ಹೊರಗೆ ಲಕ್ಕುಂಡಿಯ ದಾರಿಯಲ್ಲಿ ೧೯೩೪ರಲ್ಲಿ ಹಾಲಕೆರೆಯ ಸ್ವಾಮಿಗಳಿಂದ 'ಆನಂದಾಶ್ರಮ' ಸ್ಥಾಪಿತವಾಯಿತು, ಈ ಸ್ಥಳದಲ್ಲಿ ಇಳಕಲ್ಲಿನ ಹಿಂದಿನ

ಕೊಪ್ಪದ ಮಹಾಂತಸ್ವಾಮಿಗಳವರು ಇಳಕಲ್ಲಿಗೆ ಹೋಗುವದಕ್ಕಿಂತ ಮೊದಲು ಇಲ್ಲಿ ಅನುಷ್ಠಾನಕ್ಕೆ ಕುಳಿತುಕೊಂಡಿದ್ದರು. ಆಗ ಆನಂದಾಶ್ರಮದಲ್ಲಿ ಪ್ರತಿ ಪ್ರವಚನ ನಡೆಸುತ್ತಿದ್ದೆ. ಮುಂದೆ ೧೯೩೭ ರಲ್ಲಿ ಪ್ರತಿ ರವಿವಾರ ಧಾರವಾಡ ಮುರಘಾಮಠದ ಪ್ರಸಾದ ನಿಲಯದ ವಿದ್ಯಾರ್ಥಿಗಳಿಗೆ 'ಶಿವಾನುಭವ'ವನ್ನು ಬೋಧಿಸುವ ಅಪ್ಪಣೆ ನನಗೆ ಬಂದಿತು ಪೂಜ್ಯ ಮೃತ್ಯುಂಜಯಪ್ಪನವರಿಂದ. ಆದರೆ ಮೊದಲು ನನಗೆ ಧಾರವಾಡಕ್ಕೆ ಬರುವ ಕಲ್ಪನೆ ಸಹ ಇರಲಿಲ್ಲ. ನಂತರ ಆನಂದಾಶ್ರಮದಲ್ಲಿ ೧೯೪೦ ರಿಂದ ವೀರಶೈವ ಸಂಸ್ಕೃತಿ ಪ್ರಕಾಶಕ ಸಮಿತಿಯು ಸ್ಥಾಪಿಸಲ್ಪಟ್ಟು ಅಖಿಲ ಭಾರತ ವೀರಶೈವ ವಿದ್ಯಾಪೀಠದ ಅಂಗವಾಗಿ ಪ್ರವೇಶ, ಮಧ್ಯ, ಭೂಷಣ, ರತ್ನ, ಶಿರೋಮಣಿ ಮುಂತಾದ ಪರೀಕ್ಷೆಗಳು ೧೯೬೧ ರ ವರೆಗೆ ನಡೆದವು. ೧೯೪೭ ಅಗಸ್ಟ ೧೫. ಭಾರತ ಸ್ವತಂತ್ರವಾದ ದಿನ ಗದಗಿನಲ್ಲಿ 'ಸಾಧನಾ' ಪಾಕ್ಷಿಕ ಪತ್ರಿಕೆಯು ಜನ್ಮ ತಾಳಿತು. ಅಂದಿನಿಂದ ಪತ್ರಿಕೆ ನಡೆಸುವದು, ಆನಂದಾಶ್ರಮದಲ್ಲಿ ಸಂಸ್ಕೃತ ಪಾಠ ಮತ್ತು ಪ್ರವಚನ ಹೇಳುವದು, ಧಾರವಾಡ ಮುರಘಾಮಠದ ಪ್ರಸಾದ ನಿಲಯದ ವಿದ್ಯಾರ್ಥಿಗಳಿಗೆ ಶಿವಾನುಭವ ಬೋಧನೆ ಮತ್ತು ವಿದ್ಯಾಪೀಠದ ಪರೀಕ್ಷೆಗಳನ್ನು ತೆಗದುಕೊಳ್ಳುವದು ಇವೆಲ್ಲ ಏಕಕಾಲದ ನನ್ನ ಕಾಯಕವಾದವು,

"ತಮ್ಮ ಐವತ್ತನೆ ವರ್ಷದ ಹಬ್ಬವನ್ನು ಆಚರಿಸಿದುದೆಲ್ಲಿ" ?

"ಅದನ್ನು ೧೯೬೧ ರಲ್ಲಿ ಗದುಗಿನಲ್ಲಿ ಆಚರಿಸಲಾಯಿತು. ಆ ಪ್ರಸಂಗದಲ್ಲಿ ಸಾರ್ವಜನಿಕರಿಂದ ನನಗೆ ಐದು ಸಾವಿರ ರೂಪಾಯಿ ದೇಣಿಗೆ ಬಂದಿತು. ನಾನು ಆ ಹಣದಿಂದಲೇ ಗದುಗಿನ ಹಡಗಲಿ ಮಠದಲ್ಲಿ ಸಿದ್ಧಲಿಂಗ ವಿಜಯ ಪ್ರಿಂಟಿಂಗ್ ಪ್ರೆಸ್ ಎಂಬ ಮುದ್ರಣಾಲಯವೊಂದನ್ನು ಪ್ರಾರಂಭಿಸಿದೆ.

" ಈ ನಿಮಿತ್ತ ಯಾವ ಯಾವ ಮಠಗಳಲ್ಲಿ ತಮ್ಮನ್ನು ಸತ್ಕರಿಸಲಾಯಿತು" ?

"ನಿಡಸೋಸಿಯ ಮಠ ಕೊಪ್ಪಳದ ಗವಿಮಠ ಇಳಕಲ್ಲ, ಮಠ, ಹುಬ್ಬಳ್ಳಿಯ ಮೂರುಸಾವಿರ ಮಠ, ನವಿಲ್ಗುಂದ, ಮೂಡಿಮಠ, ಚಿಕ್ಕ ಸೂಗರುಮಠ, ರಾಯಚೂರು ಪ್ರಸಾದ ನಿಲಯ ಮುಂತಾದ ಕೆಲವು ಸ್ಥಳಗಳಲ್ಲಿ ಸತ್ಕಾರ ನಡೆಯಿತು.

"ಗದಗಿನಿಂದ ಧಾರವಾಡಕ್ಕೆ ಪೂರ್ಣ ಸ್ಥಳಾಂತರವಾದದ್ದು ಯಾವಾಗ" ?

"೧೯೬೩ರಲ್ಲಿ ಪ್ರೆಸ್ ಸಹಿತ ಮನೆಯವರೆಲ್ಲ ಇಲ್ಲಿಗೆ ಬಂದೆವು. ಆಗ ಇನ್ನೂ ಈ ಮನೆ ಇರಲಿಲ್ಲ. ಬಾಡಿಗೆ ಮನೆಯಲ್ಲಿಯೇ ಇದ್ದುಕೊಂಡು

ನನ್ನ ಕೆಲಸಗಳನ್ನು ನಡೆಸುತ್ತಿದ್ದೆ. "ತಮ್ಮ ಷಷ್ಟ್ಯಬ್ದ ಸಮಾರಂಭವಾದುದು ಯಾವಾಗ "?

ಪೂಜ್ಯ ಮಹಾಂತಪ್ಪಗಳ ಆಜ್ಞಾಪ್ರಕಾರ ೧೯೬೮ ರಲ್ಲಿ ಧಾರವಾಡದಲ್ಲಿಯೇ ಡಾ. ಆರ್. ಸಿ. ಹಿರೇಮಠ, (ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಚಾರ್ಯರು ಆನಂತರ ಉಪಕುಲಪತಿಗಳು ಆಗಿದ್ದವರು) ಅವರ ಅಧ್ಯಕ್ಷತೆಯಲ್ಲಿ ಆಯಿತು. ಅದೇ ಸಂದರ್ಭದಲ್ಲಿ ನನಗೆ ಕಾಣಿಕೆಯೊಂದು ನಿಧಿ ಸಂಗ್ರಹಿಸಲು ಗುರು-ಪುತ್ರಪ್ಪ ದೊಡ್ಡವಾಡ, ಗಂಗಪ್ಪ ನಡಕಟ್ಟಿ ಮುಂತಾದ ಪ್ರಮುಖರು ನಡಕಟ್ಟಿ ನಿಂತು ಆ ನಿಧಿಯಿಂದ ಈ ಗೃಹವನ್ನು ಕಟ್ಟಿಸಿ ಕೊಟ್ಟರು. ದಿ. ಡಾ. ಡಿ. ಸಿ. ಪಾವಟೆ ಯವರು ಸಹ ವಿಶ್ವವಿದ್ಯಾಲಯದಿಂದ ಈ ಪ್ರಸಂಗದಲ್ಲಿ ನನ್ನ ನಿಧಿಗಾಗಿ ಹಣ ಕೊಟ್ಟಿದ್ದನ್ನು ಮರೆಯಲಾರೆ. ಅಲ್ಲದೆ ಮುರುಘಾಮಠ, ಮೂರುಸಾವಿರಮಠ, ಕೊಪ್ಪಳ, ಲಿಂಗಸೂರ ಮಠಗಳಲ್ಲಿ ಸಹ ನನ್ನನ್ನು ಈ ನಿಮಿತ್ತವಾಗಿ ಸತ್ಕರಿಸಿದರು. ನಂತರ ಇದೇ ವರ್ಷ ರಾಜ್ಯ ಸರಕಾರದಿಂದ ನನಗೆ 'ಸಂಸ್ಕೃತ ಸಾಹಿತಿ' ಎಂದು ಆಜೀವ ಮಾಶಾಸನದ ಗೌರವ ಧನವೂ ದೊರೆಯಿತು. ಮತ್ತು ಧಾರವಾಡದಲ್ಲಿ ನಡೆದ ಸಂಸ್ಕೃತ ಪರಿಷತ್ತಿನ ಪಂಡಿತರಿಂದ 'ದರ್ಶನ ವಿಶಾರದ' ಎಂದು ಬಿರುದು ಬಂದಿತು. ಇದೆಲ್ಲವು ನಾನು ನಿಮಗೆ ಈ ಮೊದಲೇ ತಿಳಿಸಿದಂತೆ ಅಪೇಕ್ಷೆ ಪಡದೆ ತಾನಾಗಿಯೇ ಬಂದ ಭಾಗ್ಯ. ಮತ್ತೆ ಈ ವರ್ಷ ಪೂಜ್ಯ ಮಹಾಂತಪ್ಪಗಳು ನನ್ನ ೭೫ ನೇ ವರ್ಷದ ಅಮೃತೋತ್ಸವದಾಚರಣೆ ಯನ್ನು ಇಟ್ಟುಕೊಂಡಿರುವರು.

"ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ತಾವು ಸೇರಿ-ದುದು ಯಾವಾಗ"?

"೧೯೬೨ರಲ್ಲಿ ಡಾ. ಆರ್. ಸಿ. ಹಿರೇಮಠರವರಿಂದ 'ತಮ್ಮ ಸೇವೆ ನಮ್ಮ ಕನ್ನಡ ವಿಭಾಗಕ್ಕೆ ಅವಶ್ಯವಾಗಿದೆ. ಕಾರಣ ತಾವು ನಮ್ಮಲ್ಲಿಗೆ ಬಂದರೆ ಒಳ್ಳೆಯದು' ಎಂದು ಪತ್ರ ಬಂದಿತು. ಆಗ ನಾನು "ತಮ್ಮಲ್ಲಿ ನನ್ನಿಂದಾಕೆಲಸ ಆಗುವದೋ ಇಲ್ಲವೋ ಎಂಬ ಸಂದೇಹ ನನಗಿದೆ. ಅಲ್ಲದೆ ನವೀನ ಜನರ ಜೊತೆಗೆ ನನಗೆ ಅಷ್ಟು ಒಗ್ಗುವದೂ ಇಲ್ಲ. ಆದರೂ ಸಹ ಕೇವಲ ತಮ್ಮ ಅಪೇಕ್ಷೆಗೆ ಮಾತ್ರ ನಾನು ಬರುವದಾಗಿ ನಿರ್ಧಾರಿಸಿರುವೆ. ಎಂದು ಪ್ರತ್ಯುತ್ತರ ಬರೆದೆ. ಅದಕ್ಕೆ ಅವರು ಮತ್ತೊಂದು ಮರು ಓಲೆ ಯನ್ನು ಬರೆದು "ತಾವು ಬರುವ ವಿಷಯುವನ್ನೋದಿ ನನಗೆ ಉಸಿರು ಬಂದಂತೆ, ಕಣ್ಣು ಬಂದಂತೆ ಆಗಿದೆ" ಎಂದು ತಿಳಿಸಿದರಲ್ಲದೆ 'ನಾನು ಸಂತೋಷದಿಂದ ಆನಂದಾಶ್ರುಗಳನ್ನು ಸುರಿಸುತ್ತ ಈ ಪತ್ರವನ್ನು ಬರೆಯುತ್ತಿದ್ದೇನೆ' ಎಂದೂ ಸಹ ತಿಳಿಸಿದ್ದರು.

ನಂತರ ಯುಗಾದಿ ಪ್ರತಿಪದೆಯ ದಿನ ನಾನು ಕನ್ನಡ ಅಧ್ಯಯನ ಪೀಠದ ಕಾಯಕಕ್ಕೆ ಹಾಜರಾದೆ. ಅಲ್ಲಿ ಚೆನ್ನಬಸವಣ್ಣನ ವಚನಗಳ ಸಂಪಾದನಾ ಕಾರ್ಯವನ್ನು ಪ್ರಥಮ ವಾಗಿ ಕೈಕೊಂಡಿದ್ದೆ. ನಾನು ಸಂಶೋಧನ, ಪರಿಷ್ಕರಣ, ಸಂಪಾದನೆ, ಸಂಸ್ಕೃತ ಭಾಷೆಯ ಸಲಹೆ-ಸೂಚನೆಗಳನ್ನು ಕೊಡುವದು ಮುಂತಾದ ವಿವಿಧ ಕೆಲಸ ಗಳನ್ನು ಅಂದಿನಿಂದ ಮಾಡುತ್ತಲಿದ್ದೆ, ೧೯೭೫-೭೬ ರಲ್ಲಿ ಒಂದು ವರ್ಷ ಸರ್ಟಿ-ಫಿಕೇಟ ಕೋರ್ಸಿನ ಯೋಗ್ಯಶಿಕ್ಷಣದ ವಿದ್ಯಾರ್ಥಿಗಳಿಗೆ ಭಗವದ್ಗೀತೆ, ಪಾತಂಜಲಿ ಯೋಗಸೂತ್ರ ಪಾಠಗಳನ್ನು ಸಹ ಕಲಿಸಿರುವೆ.

"ನೋಡ್ರೆಪಾ, ಇಲ್ಲಿಗೆ ಬಂದ ಹತ್ತ್ಯೃತಿ ನನ್ನ ಜೀವನ. ಇಲ್ಲೀವರೆಗೆ ಇಷ್ಟೆಲ್ಲಾ ಆಗೇತಿ ನಾ ನಿವೃತ್ತ ಆದಮ್ಯಾಲೂ ಪ್ರವೃತ್ತನಾಗುವದಾಯಿತು.

"ತಮ್ಮ ಜೀವನದ ಉದ್ದೇಶವೇನು" ?

"ನನ್ನ ಉಸಿರು ಇರುವವರೆಗೆ ತ್ರಿಕರಣ ಪೂರ್ವಕವಾಗಿ ಸಾಧ್ಯವಾದಷ್ಟು ಸಮಾಜದ ಮತ್ತು ಸಾಹಿತ್ಯದ ಸೇವೆಯನ್ನು ಮಾಡಬೇಕೆಂದಿರುವೆ. ನಾನು ಏನನ್ನೂ ಗಳಿಸಬೇಕಾಗಿಲ್ಲ, ಈಗಾಗಲೇ ಸಾರ್ವಜನಿಕರೇ ಪ್ರೀತಿಯಿಂದ ಉತ್ಸಾಹದಿಂದ ಮಾಡಿಕೊಟ್ಟಿವರು.

"ಇಲ್ಲಿಯವರೆಗೆ ತಮ್ಮಿಂದ ರಚಿತವಾದ ಪುಸ್ತಕಗಳಾವವು" ?

"ಗದಗಿನಲ್ಲಿದ್ದಾಗ 'ಬಸವಣ್ಣನ ಆದರ್ಶ ಜೀವನ', 'ಅಕ್ಕಮಹಾದೇವಿಯ ಆದರ್ಶ ಜೀವನ', 'ವೀರಶೈವ ತತ್ತ್ವ ಪ್ರವೇಶ', 'ವಚನ ಮಧು ಭಾಗ-೧, ಭಾಗ-೨' 'ಗದ್ಯ ಸಂಗ್ರಹ', 'ಸರ್ವಜ್ಞ ವಚನ ಸಂಗ್ರಹ', 'ಅಷ್ಟಾವರಣ', 'ಪಂಚಾಚಾರ', 'ಧರ್ಮಾಚಾರ'. ಧಾರವಾಡಕ್ಕೆ ಬಂದಮೇಲೆ ಸಂಗ್ರಹ ಗ್ರಂಥಗಳು 'ಅನುಭವ, ಮುದ್ರೆ', 'ಚೋರ ಬಸವ ಪುರಾಣ', 'ಚನ್ನಬಸವಣ್ಣನ ೧೦೮ ವಚನ ಸಂಗ್ರಹ' 'ಗುರುಬಸವನ ಸಪ್ತ ಕಾವ್ಯ', ಮತ್ತು ಭಾರತೀಯ ದರ್ಶನ ಸಮೀಕ್ಷೆ'. 'ಸೊಗಸಿನ ಬಾಳು' 'ಜೀವನ ಯಾತ್ರೆ' ಮುಂತಾದ ಒಟ್ಟು ಮೂವತ್ತಕ್ಕೂ ಮಿಕ್ಕ ಪುಸ್ತಕಗಳಿವೆ. ಹಾಗೂ ವೀರಶೈವ ಧರ್ಮದ ವಿವಿಧ ವಿಷಯ ಕುರಿತು ವಿವಿಧ ಪತ್ರಿಕೆಗಳಲ್ಲಿ ಅನೇಕ ಲೇಖನಗಳು ಪ್ರಕಟವಾಗಿವೆ.

"ತಮಗಿರುವ ಆಸ್ತಿ ಏನು" ?

"ಜನರ ವಿಶ್ವಾಸವೇ ನನ್ನ ಇಂದಿನ ಆಸ್ತಿ. ಆದರ ಫಲವೇ ಈ ಮನೆ, ಈ ಮುದ್ರಣಾಲಯ. ಸಂಗನಾಳದಲ್ಲಿದ್ದ ೨೦ ಎಕರೆ ಹೊಲವನ್ನು ವಿಕ್ರಿ ಮಾಡಿರುವೆವು. ಈಗ ಅಲ್ಲಿ ಕೇವಲ ಒಂದು ಮನೆ ಮತ್ತು ಒಂದು ಮಠ ಮಾತ್ರ ಇದೆ, ಇಲ್ಲಿ ಈ ಮನೆ ಮುದ್ರಣಯಂತ್ರವೊಂದಿದೆ.

"ನಿತ್ಯದ ದಿನಚರಿಯೊಂದಿಷ್ಟನ್ನು ಹೇಳುವಿರಾ" ?

"ನೋಡ್ರೆಪಾ ನಾನು ಮೊದಲಿನಿಂದ ತ್ರಿಕಾಲ ಸ್ನಾನ ಮತ್ತು ಪೂಜೆಯನ್ನು ರೂಢಿಸಿಕೊಂಡು ಬಂದಿರುವೆ. ಬೆಳಗಿನ ೫ ಗಂಟೆಗೆ ಏಳುವೆ. ೬ ಗಂಟೆಯುವರೆಗೆ ಇಷ್ಟವಾದ ವಿವಿಧ ವಿಷಯಗಳ ಅಧ್ಯಯನ ಮಾಡುವೆ. ನಂತರ ೭ ಗಂಟೆಯ ವರೆಗೆ ಸ್ನಾನ, ಪೂಜೆ ಇನ್ನುಳಿದ ಮುಂಜಾನೆಯ ಕೆಲಸಗಳನ್ನು ಮುಗಿಸುವೆ. ಆಮೇಲೆ ಮುರುಘಾಮಠಕ್ಕೆ ಹೋಗಿ ೯ ರ ವರೆಗೆ ಅಲ್ಲಿಯ ವಿದ್ಯಾರ್ಥಿಗಳಿಗೆ ಸಂಸ್ಕೃತ ಪಾಠ ಹೇಳುವೆ. ೧೦ ಗಂಟೆಗೆ ಮನೆಗೆ ಬಂದು ಪುನಃ ಸ್ನಾನ, ಪೂಜೆ, ಊಟ ಮುಗಿಸಿ ೧೧ ಗಂಟೆಗೆ ವಿಶ್ವವಿದ್ಯಾಲಯದ ನನ್ನ ನಿತ್ಯದ ಕಾರ್ಯಕ್ಕೆ ತೆರಳುವೆ. ಅಲ್ಲಿಂದ ಪುನ: ಸಂಜೆಯ ೬ರ ಸುಮಾರಿಗೆ ಮನೆಗೆ ಮರಳುವೆ. ಅನಂತರ ವಿಶ್ರಾಂತಿ. ಸಾಯಂಕಾಲದ ಸ್ನಾನ, ಪೂಜೆ, ಪ್ರಸಾದ ಮುಗಿಸಿ ಸ್ವಲ್ಪ ಹೊತ್ತು ಬೇಕಾದ ಅಭ್ಯಾಸವನ್ನು ಮಾಡುವಷ್ಟರಲ್ಲಿ ವೇಳೆ ರಾತ್ರಿ ೧೦ ಘಂಟೆ ಆಗುವದು. ಇಷ್ಟು ಮಾಡಿದ ಮೇಲೆ ನನಗೆ ಮಲಗಲು ಅಪ್ಪಣೆ ದೊರೆತಂತಾಗುವದು.

"ತಮ್ಮನ್ನು ಯಾವುದೋ ಮಠದ ಸ್ವಾಮಿಯನ್ನಾಗಿ ಮಾಡಬೇಕೆಂದಿದ್ದರೆಂಬ ಸುದ್ದಿಯನ್ನು ನಾನು ಕೇಳಿರುವೆ. ಅದು ನಿಜವೆ ?"

"ಹೌದು, ಗಜೇಂದ್ರಗಡದಲ್ಲಿರುವ ಮೈಸೂರ ಮಠದ ಶಾಖೆಗೆ ನನ್ನನ್ನು ಸ್ವಾಮಿಯಾಗಲು ಕೇಳಿದ್ದರು. ಆದರೆ ಅವರಿಗೆ ನಾನು "ಮಹಾರಾಯರೇ ಸಣ್ಣ ವಯಸ್ಸಿನವನಿರುವಾಗ ನನ್ನ ಮದುವೆ ಮಾಡಿ ಉಪಕಾರ ಮಾಡಿದರು" ಎಂದು ಹೇಳಿದೆ. ಆಮೇಲೆ ಅಲ್ಲಿಯ ಹಿರಿಯರು ಆ ಆಶೆಯನ್ನು ತೊರೆದರು.

ಇಲ್ಲಿಗೆ ಶಾಸ್ತ್ರಿಗಳವರ ಸಂದರ್ಶನ ಸಮಾಪ್ತಿಯಾಯಿತು. ಇಷ್ಟು ಮುಗಿಯುವ ವೇಳೆಗೆ ರಾತ್ರಿ ೯ ಘಂಟೆಯಾಗಿತ್ತು. "ನಾವಿನ್ನು ಬರುತ್ತೇವೆ" ಎಂದು ಅವರಿಗೆ ನಮಸ್ಕರಿಸಿ ಎದ್ದೆವು. ಆಗ ಶಾಸ್ತ್ರಿಗಳವರ ಧರ್ಮಪತ್ನಿ ಶ್ರೀಮತಿ ಶಿವಗಂಗಮ್ಮನವರು "ತಾವು ಊಟ ಮಾಡಿಕೊಂಡೇ ಹೋಗಿರಿ" ಎಂದು ತುಂಬಾ ಒತ್ತಾಯಿಸಿದರು. ನಾವು ಮತ್ತೊಮ್ಮೆ ಬರುವದಾಗಿ ಹೇಳಿ ಹೊರಬಂದೆವು. ಆಗ ಅವರು ನಮ್ಮನ್ನು ತಮ್ಮ ಅಂಗಳ ದಾಟುವವರೆಗೆ ಕಳಿಸಲು ಬಂದರು. "ಇನ್ನು ತಾವು ನಿಲ್ಲಿರಿ, ನಾವು ಹೋಗುತ್ತೇವೆ" ಎಂದು ನಾವು ಅವರಿಗೆ ಕೈ ಜೋಡಿಸಿದಾಗ ಶಾಸ್ತ್ರಿಗಳವರು ಪ್ರಶಾಂತಚಿತ್ತದಿಂದ ಹಸನ್ಮುಖಿಗಳಾಗಿ ಆಶೀರ್ವಾದ ಸೂಚಕವಾಗಿ ಬಲ ಹಸ್ತವನ್ನು ಸ್ವಲ್ಪ ಮೇಲೆತ್ತಿ ಅಂಗೈಯನ್ನು ಸ್ವಲ್ಪ ಮುಂಬಾಗಿಸಿ "ಒಳ್ಳೆಯದು ಹೋಗಿ ಬನ್ನಿರಿ' ದೇವರು ನಿಮಗೆ ಕಲ್ಯಾಣ ಮಾಡಲಿ" ಎಂದು ಹೃತ್ಪೂರ್ವಕವಾಗಿ ಹರಸಿದರು.

ಅವರ ಈ ನಿಲುವಿನ ದೃಶ್ಯ ನನಗೆ ತಕ್ಷಣವೇ ಇಳಕಲ್ಲಿನ ಮಹಾಂತೇಶ ಅಜ್ಜನ ಹಾಗೂ ಧಾರವಾಡದ ಮಹಾಂತಪ್ಪಜ್ಜನವರ ಚಿತ್ರವನ್ನು ನೆನಪಿಗೆ ತಂದಿತ್ತು ಮನಸ್ಸಿನಲ್ಲಿ ಎಂದೂ ಅಳಿಯದ ಶುಭಚಿತ್ರವಾಗಿ ಮೂಡಿ ನಿಂತಿದೆ.

ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಪ್ರಗಲ್ಭಪಾಂಡಿತ್ಯವನ್ನು ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ ಇಲಕಲ್ಲದವರು 'ಶಿವತತ್ತ್ವ ರತ್ನಾ ಹಾಗೂ ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರ ಮಠ, ಹುಬ್ಬಳ್ಳಿ, ಇವರು ಸಿದ್ಧಾಂತ ಶಿರೋಮಣಿ' ಮತ್ತು ಗದುಗಿನ ಶಿವಾನುಭವಸಂಘದ ಸತ್ಕಾರ ಯವರು 'ಶಿವಾದ್ವೈತ ಸಿದ್ಧಾಂತ ರತ್ನ' ಬಿರುದುಗಳನ್ನು ಅರ್ಪಿಸಿರುವರು, ಇನ್ನೂ ಅನೇಕ ವಿವಿಧ ಸಂಸ್ಥೆಗಳಿಂದ, ಮಠಗಳಿಂದ, ಮಾನ್ಯರಿಂದ 'ಶಿವಸಿದ್ಧಾ ರತ್ನ'. 'ದರ್ಶನ ವಿಶಾರದ,' 'ಶರಣ ಧರ್ಮ ಭಾಸ್ಕರ'• ಮುಂತಾದ ಬಿರುದುಗಳ ಶಾಸ್ತ್ರಿಗಳವರು ಪಡೆದಿರುವರು. ಇವರ ಸಮಾಜ ಸೇವೆಯು ಬಹುಮುಖವಾದು ಸುಮಾರು ೫೦ ವರ್ಷಗಳಿಂದ ಪ್ರವಚನ, ಪುರಾಣ, ಉಪನ್ಯಾಸ, ಬೋಧನ ಮುಖಾಂತರ ಜನಜಾಗೃತಿಯನ್ನುಂಟು ಮಾಡುತ್ತ, ಶ್ರೋತೃಗಳನ್ನು ಸದ್ಗತಿ ಒಲಿಸುತ್ತಿರುವರು. ಇವರಿಗೆ ಸಮಾಜಸೇವೆಯ ಕರೆ ಬೇಕಾದಾಗ ಬರಲಿ ಆಗ ತಮ್ಮ ವೈಯಕ್ತಿಕ ಕೆಲಸಗಳನ್ನೆಲ್ಲ ಬದಿಗೊತ್ತಿ, ಯಾವ ಫಲಾಪೇಕ್ಷೆ ಇಲ್ಲದೆ ಸಿದ್ಧ ಸಾಗುವರು. ಜನಸೇವೆಯೇ ಜಗದೀಶನ ಸೇವೆಯೆಂದು ನಂಬಿರುವರು. ಕಾಯಕ ಎಂಥದೇ ಆಗಿರಲಿ ಮನಃಪೂರ್ವಕವಾಗಿ ಮಾಡುವರು. ಈ ೭೫ ರ ವಯಸ್ಸಿನಲ್ಲಿಯೂ ಪ್ರತಿವರ್ಷವೂ ಶ್ರಾವಣ ಮಾಸದಲ್ಲಿ ಇಳಕಲ್ಲ ಮಠದಲ್ಲಿ ಅಮೋ ಮಾದ ಪ್ರವಚನವನ್ನಿತ್ತು ಜನರನ್ನು ಪುನೀತರನ್ನಾಗಿ ಮಾಡುವರು. ಪಾರಮಾರ್ಥಿ ತತ್ತ್ವಗಳನ್ನು ಸಾಮಾನ್ಯರಿಗೆ ಮನದಟ್ಟು ಮಾಡುವ ಸಲುವಾಗಿ ಇವರು ತ ಪ್ರವಚನದಲ್ಲಿ ಆಗಾಗ ಗಹನವಾದ ವಿಷಯ ಬಂದಾಗ ಅದನ್ನು ಹಾಸ್ಯದಲ್ಲಿ ಉದಾಹರಣೆ— ಉಪಮಾನಗಳ ಮೂಲಕ ಸುಲಭಗೊಳಿಸಿ ಹೇಳುವ ಇವರ ಅದ್ವಿತೀಯವಾದುದು.

ಮರುಗದೆಲೆಯು ಹುಟ್ಟುತ್ತಲೇ ಮಕರಂದ ಸೂಚಿಸುವಂತೆ ಇವರು ಚಿಕ್ಕಂದಿನಲ್ಲಿಯೇ ತಮ್ಮ ವಿದ್ಯಾ-ಬುದ್ಧಿಯಿಂದ ಗುರುಗಳನ್ನು ಆಕರ್ಷಿಸಿ ಶ್ರೀ ಗು ವಿನ ಅಪಾರವಾದ ಕರುಣೆಗೆ ಪಾತ್ರರಾಗಿ ಶ್ರದ್ಧೆಯಿಂದ ಅಧ್ಯಯನ- ಅಧ್ಯಾಪನಗಳ ಪ್ರಾರಂಭಿಸಿದರು. ಶಾಸ್ತ್ರಿಗಳವರು ಜ್ಞಾನದಾನಿಗಳಿದ್ದಂತೆ ಜ್ಞಾನದಾಹಿಗಳೂ ರುವರು. ಕೇವಲ ಕನ್ನಡ ಅಭ್ಯಾಸದಿಂದ ತೃಪ್ತರಾಗದೇ ಇವರು ಕಾಶೀ ವಿಶ್ವೇಶ್ವ

ಸಾನ್ನಿಧ್ಯದಲ್ಲಿ ಪ್ರಕಾಂಡ ಪಂಡಿತರ ಘನ ವಿದ್ವಾಂಸರ ನೇತೃತ್ವದಲ್ಲಿ ಸಂಸ್ಕೃತವನ್ನು ಹಾಗು ಭಾರತೀಯ ಷಡ್ದರ್ಶನಗಳ ಆಳವಾದ ಅಭ್ಯಾಸವನ್ನು ಮಾಡಿದರು. ತತ್ತ್ವಜ್ಞಾನದ, ಕನ್ನಡ-ಸಂಸ್ಕೃತ ಸಾಹಿತ್ಯದ ಹಾಗು ಭಾರತದ ಪ್ರಾಚೀನ-ಅರ್ವಾಚೀನ ಸಂಸ್ಕೃತಿಗಳನ್ನು ಸತತ ಅಧ್ಯಯನದಿಂದ ಅಳವಡಿಸಿಕೊಂಡು ಮತ್ತೊಬ್ಬರಿಗೆ ಅಧಿಕಾರವಾಣಿಯಿಂದ ಬೋಧಿಸುವಂತಹ ಕೇಲವೇ ವಿಖ್ಯಾತಿಭಾನ್ವಿತರಲ್ಲಿ ಇವರೊಬ್ಬರಾಗಿರುವರು. ಸದಾಚಾರ ನಿಷ್ಠರು, ಸತ್ವಶಾಲಿಗಳು, ಸತತ ಕಾಯಕ ನಿರತರು ಆಗಿರುವ ಇವರ ಬಾಳು ನಮ್ಮಂತಹವರಿಗೆ ಆದರ್ಶವಾಗಿದೆ. ಇಂದಿಗೂ ಸಹ ಅನೇಕ ಮಠಗಳ ಸ್ವಾಮಿಗಳಿಗೆ ಸಮಸ್ಯೆಗಳು ಎದುರಾದಾಗ ಅಥವಾ ಯಾವುದೇ ಕಾರ್ಯವನ್ನು ಕೈಕೊಳ್ಳುವಾಗ ಅವರು ಇವರ ಸಲಹೆಗಳನ್ನು, ಸಮಯೋಚಿತ ಉಪಾಯ ಸಲಹೆಗಳನ್ನು, ಪಡೆದೇ ಮುನ್ನಡೆಯುವರು.

೧೯೭೫–೭೬ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಯೋಗ ಶಿಕ್ಷಣದ ಸರ್ಟಿಫಿಕೇಟ ಕೋರ್ಸಿನ ವಿದ್ಯಾರ್ಥಿನಿಯಾಗಿ ಪಂಡಿತನಾಗಭೂಷಣಶಾಸ್ತ್ರಿಗಳವರ ಕೈಯಲ್ಲಿ ಅಭ್ಯಸಿಸುವ ಸುಯೋಗ ನನಗೊದಗಿ ಬಂದಿತ್ತು. ಆಗ ಇವರು ನಮಗೆ 'ಭಗವದ್ಗೀತೆ' ಹಾಗು 'ಪಾತಂಜಲಿ ಯೋಗಸೂತ್ರ' ಕುರಿತು ಉಪನ್ಯಾಸ ಕೊಡುತ್ತಿದ್ದರು. ಶಾಸ್ತ್ರಿಗಳವರು ಹೇಳುತ್ತಿದ್ದ ವಿಷಯದ ವಾಗ್ವೈಖರಿಯು ಧೀಮಂತವಾಗಿದ್ದು ನಿರರ್ಗಳವಾಗಿತ್ತು. ಅವರ ವಾಣಿಯಲ್ಲಿಯ ಪ್ರತಿಯೊಂದು ವಾಕ್ಯವು ಒಂದೊಂದು ರಹಸ್ಯವನ್ನು ಹೊರಗೆಡವುವಂತಿರುತ್ತಿದ್ದಿತು. ಉದಾತ್ತವಾದ ಬೋಧನೆಯು ವಿದ್ಯಾರ್ಥಿಗಳನ್ನು ಜ್ಞಾನದ ಹೊಳೆಯಲ್ಲಿ ಈಜಲು ಬಿಟ್ಟಂತಾಗುತ್ತಿತ್ತು. ಪಾಠದ ವಿವರಣೆಯನ್ನು ಕೇಳುತ್ತಿದ್ದಾಗ ಸಮಯ ಸರಿದುದೇ ನಮಗೆ ಗೊತ್ತಾಗುತ್ತಿರಲಿಲ್ಲ. ಪಾಠದ ಉಪನ್ಯಾಸ, ಸೂಚಿಸುತ್ತಿದ್ದ ಸಹಾಯಕ ಗ್ರಂಥಗಳು ಶಾಸ್ತ್ರಿಗಳವರ ಆಳವಾದ ಅಭ್ಯಾಸಕ್ಕೆ, ಸಾಹಿತ್ಯದ ಪ್ರಭುತ್ವಕ್ಕೆ ಸಾಕ್ಷಿಯಾಗಿದ್ದವು. ವಿದ್ಯಾರ್ಥಿಗಳಿಗೆ ಯೋಗ ತತ್ತ್ವಗಳು ಬೇಸರ ತರದೇ ಮನನವಾಗಲೆಂದು ವಿವಿಧ ದೃಷ್ಟಾಂತಗಳ ಮೂಲಕ ಕಥಾರೂಪದಲ್ಲಿ ಹೇಳುತ್ತಿದ್ದರು. ಒಮ್ಮೊಮ್ಮೆ ಕ್ಲಾಸ ರೂಮಿನ ಅನಾನುಕೂಲತೆಗಳ ಕಾರಣದಿಂದಾಗಿ ಶಾಸ್ತ್ರಿಗಳವರು ವಿಶ್ವವಿದ್ಯಾಲಯದ ಆವರಣದಲ್ಲಿಯ ವೃಕ್ಷದ ಕೆಳಗೆ ಕುಳಿತು ನಮ್ಮೆಲ್ಲರಿಗೆ (೨೮ ಜನ ವಿದ್ಯಾರ್ಥಿಗಳಿಗೆ) ಪಾಠವನ್ನು ಹೇಳುತ್ತಿದ್ದರು. ಅವರ ವ್ಯಕ್ತಿತ್ವ, ಹೇಳುವ ವಿಷಯ, ಕುಳಿತು ಕೇಳುವ ಸ್ಥಳ, ಇವೆಲ್ಲ ನನಗೆ ರವೀಂದ್ರನಾಥ ಟಾಗೋರರ 'ಶಾಂತಿನಿಕೇತನ'ವನ್ನು ಸ್ಮರಣೆಗೆ ತರುತ್ತಿತ್ತಿದ್ದವು. ಹೀಗಾಗಿ ನನ್ನೀ ಅಧ್ಯಯನವನ್ನು ನಾನೆಂದೂ ಮರೆಯುವಂತಿಲ್ಲ.

ಬೆಂಗಳೂರಿನ ಚಾಮರಾಜ ಸಂಸ್ಕೃತ ಕಾಲೇಜಿನ, ಮೈಸೂರಿನ ಮಹಾರಾಜ

ಸಂಸ್ಕೃತ ಕಾಲೇಜಿನ 'ಶಕ್ತಿವಿಶಿಷ್ಟಾದ್ವೈತಸಿದ್ಧಾಂತ' ವಿಷಯದಪರೀಕ್ಷಕರೆಂದು ಶಾಸ್ತ್ರಿಗಳವರು ೬-೭ ವರ್ಷ ಕೆಲಸ ಮಾಡಿರುವರು. ಅಲ್ಲದೆ, ಸುಮಾರು ಮೂರು ವರ್ಷಗಳಿಂದ 'ಸಾವಧಾನ' (೧೯೪೭) ಪತ್ರಿಕೆಯು ಮೂಲಕ ವೀರಶೈವ ಧರ್ಮದ ಆಚಾರ-ವಿಚಾರ, ಸಾಹಿತ್ಯ, ಸಂಸ್ಕೃತಿಯನ್ನು ಮನೋಜ್ಞವಾಗಿ ಸುತ್ತಿರುವ ಇವರ ಸಂಪಾದಕತ್ವದಲ್ಲಿ ಅದು ಜ್ಞಾನಾಭಿಮಾನಿಗಳ ಅಚ್ಚುಮೆಚ್ಚಿನ ಪತ್ರಿಕೆಯಾಗಿ ಮುನ್ನಡೆದಿದೆ, ಶಾಸ್ತ್ರಿಗಳವರು ಅಖಿಲ ಭಾರತ ವೀರಶೈವ ಮಹಾ ಸಭೆಯು ಸ್ಥಾಯಿ ಸಮಿತಿ, ಅಖಿಲಭಾರತ ಶಿವಾನುಭವ ಸಂಸ್ಥೆಯು ಕಾರ್ಯಕಾರಿ ಮಂಡಳ, ಪರೀಕ್ಷಾ ಮಂಡಳ ಮುಂತಾದ ಅನೇಕ ಸಂಸ್ಥೆಗಳಲ್ಲಿ ಸದಸ್ಯರಾಗಿ ಸೇವೆ ಸಿರುವರು, ಇವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಮೃತ್ಯುಂಜಯ ಸ್ವಾಮಿಗಳು ಸ್ಥಾಪಿಸಿದ 'ಅಖಿಲ ಭಾರತ ಶಿವಾನುಭವ ಸಂಸ್ಥೆ'ಯ ಅನೇಕ ಶಾಖೆ ಕರ್ನಾಟಕ, ಆಂಧ್ರ, ಮಹಾರಾಷ್ಟ್ರದ ತುಂಬ ಹರಡಿವೆ. ಅಲ್ಲದೇ, ಸ್ವತಃ ಕರ್ನಾಟ ತುಂಬ ಪ್ರವಾಸ ಮಾಡಿ ವೀರಶೈವತತ್ತ್ವಗಳನ್ನು ಬಿತ್ತರಿಸಿರುವರು ಹಾ ಈಗಲೂ ಬಿತ್ತರಿಸುತ್ತಿರು ವರು. ಶಾಸ್ತ್ರಿಗಳವರ ವೀರಶೈವಾಭಿಮಾನಕ್ಕೆ ಮತ್ತು ಪ್ರವೃತ್ತಿಗೆ ಒಂದು ಸಹಜವಾದ ಉದಾಹರಣೆಯೆಂದರೆ ಒಮ್ಮೆ ಶ್ರೀ ಹಾಲಭಾ ವರು ಶಾಸ್ತ್ರಿಗಳಿಗೆ"ಪಂಡಿತರೇ, ನೀವೊಮ್ಮೆ 'ಅರವಿಂದಾಶ್ರಮಕ್ಕೆ ಹೋಗಿ ಅಲ್ಲಿ ತತ್ತ್ವಜ್ಞಾನವನ್ನು ಅಭ್ಯಸಿಸಿ ಬನ್ನಿರಿ" ಎಂದಾಗ ಇವರು "ಮಾರಾಯರೆ, ನಾ ಅಲ್ಲಿ ಹೋಗಬೇಕಾಗಿದೆ! ಬೇಕಾದ್ರ ಅವರಿಗೆನಮ್ಮ ಶರಣರ ತತ್ತ್ವಗಳನ್ನು ಅಂಗ್ಲ ಭಾಷಾಂತರಿಸಿ ಕಳಿಸಿರಿ" ಎಂದರಂತೆ.

ಹೀಗೆ ಶಾಸ್ತ್ರಿಗಳವರು ಹುಟ್ಟಿದ ವಂಶಕ್ಕೆ ಕೀರ್ತಿಯನ್ನು ತಂದರಲ್ಲದೆ ಸಮಾಜದ ಪ್ರೀತಿಯನ್ನೂ ಪಡೆದರು. ವಿದ್ಯೆ ಮತ್ತು ವಿನಯದಿಂದ ಶೋಭಿ ತ್ತಿರುವ ಇವರು ತಮ್ಮೆಡೆಗೆ ಬಂದವರನ್ನು ವಾತ್ಸಲ್ಯದಿಂದ ಕರೆದು ಅವರೊಡನೆ ಭಾವದಿಂದ ಬೆರೆಯುವರು. ಬಂದವರೆನ್ನ ಬಂಧುಗಳು ಎಂದು ತಿಳಿದು ಅವ ನಾದರೂ ತೊಂದರೆಗಳಿದ್ದರೆ ಶಕ್ತಿಮೀರಿ ಸಹಾಯ ಮಾಡಿ ನಿಷ್ಕಾಮ ಸೇವೆಯ ಸಲ್ಲಿಸಿ ಅವರ ಕಷ್ಟ-ಸುಖಗಳಲ್ಲಿ ತಾವೂ ಭಾಗಿಯಾಗುವರು. ಅಲ್ಲದೆ ಸಮಾ ಮಂಗಲ ಕಾರ್ಯಗಳಿಗೆ ಪ್ರೋತ್ಸಾಹಕರು, ಬೆಂಬಲಿಗರು ಆಗಿರುವರು, ಅಪರೂಪದ ಪುಣ್ಯ ಜೀವಿಗೆ ರಾಜ್ಯ ಸರಕಾರವು ಮೊನ್ನೆ 'ಸಂಸ್ಕೃತ ಪಂಡಿತ' ಪ್ರಶಸ್ತಿಯನ್ನಿತ್ತು, ಗೌರವಿಸಿದೆ.

ಇವರ ದರ್ಶನ ಪಡೆದ ಎಂತಹವರೂ ತಲೆ ಬಾಗುವಂತಿದೆ. ದೈವೀಕಳೆ ತುಂ ವದನ, ಆತ್ಮೀಯತೆಯನ್ನು ಸೂಸುವ ಕಣ್ಣು. ಮಗುವಿನಂತೆ ಮುಗ್ಧವಾಗಿ ಹೃ ರ್ಷಕವಾಗಿ ಬೀರುವ ನಗೆ, ವಾತ್ಸಲ್ಯಮಯವಾದ ನುಡಿಗಳು, ಗಂಭೀರವಾದ ನ

ಸರ್ವರಿಗೆ ಸದಾ ಮಂಗಲಾಶೀರ್ವಾದವನ್ನು ಸೂಚಿಸುವ ಹಸ್ತ, ಇವೆಲ್ಲಕ್ಕೂ ಕಳಸ ವಿಟ್ಟಂತೆ ಅವರ ಶಾಂತವಾದ ಪ್ರಾಂಜಲ ಮನಸ್ಸು. ಇನ್ನು ಅವರು ಧರಿಸುವ ಬಟ್ಟೆ ಯೆಂದರೆ ಬಿಳಿಯ ಧೋತರ, ಬಿಳಿಯ ಅಂಗಿ, ಹೆಗಲ ಮೇಲೊಂದು ಬಿಳಿಯ ವಸ್ತ್ರ ಇವು ಅವರ ಅಲಂಕಾರಗಳು. ಈ ಅಲಂಕಾರವುಳ್ಳ ಈ ವ್ಯಕ್ತಿಯನ್ನು ಕಂಡಾಗ ಆಶ್ರಮದ ಋಷಿಯ ಹಾಗು ಗಂಭೀರವಾಗಿ ಸಾಗುವ ಕಡಲಿನ ಚಿತ್ರ ನೆನಪಿಗೆ ಬಾರದೆ ಇರವು,

ಒಟ್ಟಿನಲ್ಲಿ ಶಾಸ್ತ್ರಿಗಳವರ ಜೀವನವು ಪಟ್‌ಸ್ಥಲ ದರ್ಶನಕ್ಕೆ ಹಿಡಿದ್ದದರ್ಶನವಾಗಿ 'ತುಂಬಿದುದು ತುಳುಕದು' ಎಂಬುದಕ್ಕೆ ಉತ್ತಮನಿದರ್ಶನವಾಗಿದೆ. ರವಿವಾರ ಜನಿಸಿದ ಇವರ ಬದುಕು ರವಿಯಂತೆ ಪ್ರಖರವಾಗಿ ಪ್ರಜ್ವಲಿಸಿ ಸರ್ವರಿಗೂ ಸಿಹಿ ಜೇನಾಗಿದೆ, ಈಗ ಆಚರಿಸುತ್ತಿರುವದು ಅವರ ೭೫ ನೆಯ ವರ್ಷದ ಹುಟ್ಟುಹಬ್ಬ ವಾಗಿದೆ. ಇಂತಹ ಹಬ್ಬಗಳು ಇನ್ನೂ ಅನೇಕ ಬಂದು ನಮ್ಮೆಲ್ಲರಿಗೆ ಮನಾನಂದಗೊಳಿ ಸಲಿ. ಸಮಾಜಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಬೇಕೆಂಬ ಅವರ ಬಯಕೆ ಫಲಿಸಲಿ ದೇವರು ಶಾಸ್ತ್ರಿಗಳವರಿಗೆ ಒಳ್ಳೆಯ ಆಯುರಾರೋಗ್ಯ ಭಾಗ್ಯವನ್ನು ದಯಪಾಲಿಸ ಲೆಂದು ಪ್ರಾರ್ಥಿಸಿ ಈ ಲೇಖನಕ್ಕೆ ಮಂಗಳ ಹಾಡುವೆ.

೦ ೦

# ಶಬ್ದ ಸಾಯುವದಿಲ್ಲಿ.........!

—ಪ್ರಿ. ಜಿ. ಎಚ್. ಹನ್ನೆರಡು

ಶಬ್ದ ಸಾಯುವದಿಲ್ಲಿ ಭಾವ ಸೋಲುವದಿಲ್ಲಿ
ಈ ಮಾಹದ ಮನುಜನನು ಹೊಗಳುವಲ್ಲಿ.
ಕುಂಚ ಮುಟ್ಟದು ನಿನ್ನ ಕಾವ್ಯ ತಲುಪದು ನಿನ್ನ
ನಿನ್ನ ನಿಲುವಿನ ಮಜಲು ನಿಲುಕುವಲ್ಲಿ.

ಓ ನಿಜದ ಚೇತಸನೆ ! ಓಶುದ್ಧ ಸಾತ್ವಿಕನೆ !
ನೀನೊಂದು ಅನುಭವದ ಭಸ್ಮಗಟ್ಟಿ.
ನೀ ನುಡಿದ ನುಡಿಯಲ್ಲಿ ನೋಡು ನಕ್ಕನು ದೇವ
ನೀನೊಂದು ಸಾಕಾರ ಲಿಂಗಗಟ್ಟಿ.

ನಿನ್ನ ನಗೆ ಅಭಿಷೇಕ, ನಿನ್ನ ಮೊಗ ಮಾಲಿಂಗ,
ನೀನೊಂದು ಜೀವಂತ ಪೂಜೆಯಯ್ಯ.
ಪೂಜೆ ಮತ್ತೊಂದಿಲ್ಲ ಮುಕ್ತಿ ಇನ್ನೊಂದಿಲ್ಲ
ನೀನೊಬ್ಬ ಸತ್ಯಕ್ಕೆ ಒಡೆಯಯ್ಯ.

ಓ ನಾಗಭೂಷಣನೆ ! ಸಂಸ್ಕೃತದ ಭಾಸ್ಕರನೆ,
ಶರಣ ನಾಡಿಗೆ ಅರ್ಥ ನೀಡಬಂದೆ.
ಸಾವಧಾನದ ರೀತಿ ಆತ್ಮ ಸಂದಾದೀವ್
ವಿಶ್ವವಿದ್ಯಾಲಯಕೆ ಚಲುವು ತಂದೆ.

ನಿನ್ನ ಜೀವನವೊಂದು ಸಾಧನೆಯ ಸುಕ್ಷೇತ್ರ,
ನೀನೊಂದು ಷಟ್‌ಸ್ಥಲದ ಸಂಪಾದನೆ,
ನೀನೆ ಲಿಂಗಾಚಾರ, ನೀನೆ ಭೃತ್ಯಾಚಾರ,
ನೀನಯ್ಯ ಆತ್ಮಕ್ಕೆ ಶುದ್ಧಭಾಷ್ಯೆ.

ಮಗುತನದ ಮಾತುಂಟು ತಾಯ್ತನದ ಒಲವುಂಟು
ಆದರೂ ಆತೇರು ಎಳೆಯುತ್ತಿದೆ.
ಉಡುಪು ಸಾದಾಉಂಟು ಇರುಹು ಅಚ್ಚಿಪ್ಪುಂಟು
ಆದರೂ ಆ ಅರುಹು ಮಿನುಗುತ್ತಿದೆ.

ನೀನೊಂದು ಪರಿಪೂರ್ಣ ಅರಳಿರುವ ಹೂವಯ್ಯ
ಶಾಂತಿ ಶೀತಲ ಚಲುವು ಬೀಗಿರುವದು.
ಒಡಲೊಳಗೆ ಓಂಕಾರ ಕಣ್ಣೊಳಗೆ ಸಾಕಾರ
ಶೂನ್ಯ ಸಿಂಹಾಸನವೆ ನಕ್ಕಿರುವದು.

○ ○

# ಗುರುವರ್ಯ !

—ಶ್ರೀ ಬಸವೇಶ್ವರ ಶಿವಪ್ಪ ತುಪ್ಪದ

"ಹಿಡಿದು ಸಂಸಾರಿಯಲ್ಲ ಬಿಟ್ಟು ನಿಃಸಂಸಾರಿಯಲ್ಲ." ಈ ನುಡಿಯ ಪ್ರತ್ಯಕ್ಷ ನಿದರ್ಶನಕ್ಕೆ ನಮ್ಮ ಪಂಡಿತ ನಾಗಭೂಷಣ ಶಾಸ್ತ್ರಿಗಳವರಿರುವರು. ನಾಲ್ಕು ಜನ ಹೆಣ್ಣುಮಕ್ಕಳನ್ನೂ, ಇಬ್ಬರು ಗಂಡುಮಕ್ಕಳನ್ನೂ ಹಾಗೂ ಅನೇಕ ಮೊಮ್ಮಕ್ಕಳನ್ನೂ ಪಡೆದಿರುವ ಅವರಿಗೆ ಇವತ್ತಿಗೂ ತಮ್ಮ ಮನೆಗೆ ತಮ್ಮ ಸ್ವಂತಕ್ಕೆ ಯಾವ ಪದಾರ್ಥವನ್ನೂ ಪೇಟೆಯಿಂದ ತಂದದ್ದು ಗೊತ್ತಿಲ್ಲ. ಸಮಾಜ ಸೇವೆಗೇ ಕಂಕಣಬದ್ಧರಾಗಿರುವ ಅನೇಕ ಸ್ವಾಮಿಗಳಿಗೂ ಇರದೇ ಇರುವ ಚಿಂತೆ ನಮ್ಮ ಪಂಡಿತ ನಾಗಭೂಷಣ ಶಾಸ್ತ್ರಿಗಳವರಿಗೆ ಕುಂತಲ್ಲಿ ನಿಂತಲ್ಲಿ ಕಟೆಯುತ್ತಿರುವದನ್ನು ಅವರಲ್ಲಿ ನಾನು ಸುಮಾರು ನಾಲ್ವತ್ತೈದು ವರ್ಷಗಳಿಂದ ಕಾಣುತ್ತಿದ್ದೇನೆ. ಅವರನ್ನು ನಾನು ಮೊದಲು ಕಂಡದ್ದು ಕಾಶಿಯ ಶ್ರೀ ಜಯದೇವವಾಡಿಯಲ್ಲಿ. ಅವರು ಓದುತ್ತಿರುವ ಸಮಯದಲ್ಲಿಯೇ. ಅಂದರೆ ೧೯೨೫ನೇ ಇಸ್ವಿಯಲ್ಲಿ. ನಂತರ ತಮ್ಮ ಶಾಸ್ತ್ರೀ ಪರೀಕ್ಷೆ ಕೊಟ್ಟು ಗದುಗಿಗೆ ಬಂದ ಮೇಲೆ ಅವರಲ್ಲಿ ರಘುವಂಶ ಮತ್ತು ಬಾಣಕಾದುಂಬರಿಯನ್ನು ಹೇಳಿಸಿಕೊಳ್ಳಲು ಹೋಗುತ್ತಿದ್ದೆ, ಆಗ್ಗೆ ನಾನು ಮ್ಯಾಟ್ರಿಕ್ ವಿದ್ಯಾರ್ಥಿ. ಆವೊಂದಿನದ ಪರಿಚಯವು ಶಿಶುರೂಪದಿಂದ ಬೆಳೆದು ಅವರ ಶಿಷ್ಯನಾಗುವ ಮಟ್ಟಿಗೆ ಬೆಳೆದು ಬಂದಿದೆ. ಆದರೆ ನಾನು ಅವರಿಗೆ ತಕ್ಕ ಶಿಷ್ಯನು ಅಹುದೋ ಅಲ್ಲವೋ ಆ ಮಾತು ಬೇರೆ. ನಾನಂತೂ ಅವರನ್ನು ನನ್ನ ಆರಾಧ್ಯ ಗುರುಗಳೆಂದು ತಿಳಿದಿದ್ದೇನೆ. ನನ್ನ ಜೀವನವನ್ನು ಬಹುವಾಗಿ ಶೋಧಿಸಿ ಇಂದಿಗೂ ನನಗೆ ದಾರಿದೀಪವಾಗಿದ್ದಾರೆ- ಕೇವಲ ಮಾತಿನಿಂದಲ್ಲ ತಮ್ಮ ನಡೆಯಿಂದ. ಅವರ ಸತ್ವಯುತ ತಾತ್ವಿಕ ಪ್ರವಚನಗಳು ನಮ್ಮನ್ನು ಮಂತ್ರಮುಗ್ಧರನ್ನಾಗಿ ಮಾಡಿವೆ. ಸಾತ್ವಿಕ ಮೂರ್ತಿಯಾಗಿದ್ದ ನಮ್ಮ ಅಜ್ಜ ಅಡಿವೆಪ್ಪನವರು ಶ್ರೀ ಶಾಸ್ತ್ರಿಗಳವರ ಪಾಂಡಿತ್ಯಕ್ಕಿಂತಲೂ ಜೊತೆಗೆ ಅವರ ಸರಳತೆಗೂ, ಗಂಭೀರವಾಣಿಗೂ, ಸನ್ಮಂಗಲದ ಮುಖದ ವರ್ಚಸ್ಸಿಗೂ, ಆರೋಗ್ಯಯುಕ್ತ ದೇಹಸೌಷ್ಠವಕ್ಕೂ, ಹೆಚ್ಚಾಗಿ ನಿರಾಡಂಬರತ್ವಕ್ಕೂ ಬಹುವಾಗಿ

ಮೆಚ್ಚಿಕೊಂಡಿದ್ದರು. ನಮ್ಮ ಅಜ್ಜನವರು ಸ್ವತಃ ಕನ್ನಡ ಪಂಡಿತರಿದ್ದು ತಮಗಿಂತ ತೀರ ಚಿಕ್ಕವರಾಗಿದ್ದ ಈ ಶಾಸ್ತ್ರಿಗಳವರ ಸುಸ್ವಭಾವಕ್ಕೆ ಮಾರುಹೋಗಿದ್ದರೆಂದಮೇಲೆ ಉಳಿದವರಾದ ನಾವೆಲ್ಲರೂ ಸುಮ್ಮನೇ ತಲೆಬಾಗಿ ನಮ್ಮ ಭಕ್ತಿ ಪ್ರದರ್ಶನವನ್ನು ಮಾಡುತ್ತಿದ್ದೆವು. ನಮ್ಮ ತಂದೆಯವರಂತೂ ವೇದವ್ಯಾಸರೆಂದೇ ತಿಳಿದು ಪರಸ್ಪರ ಆಪ್ತ ಬಂಧುಗಳಂತೆ ನಡೆದುಕೊಂಡರು. ಇದರಂತೆಯೇ ಇಲ್ಲಿ ಅನೇಕ ಗಣ್ಯವ್ಯಕ್ತಿಗಳಾದ ಬಳ್ಳಾರಿ ಗುರುಸಿದ್ಧಪ್ಪನವರು, ವಿಣೇಕರ ಮಡಿವಾಳಪ್ಪನವರು, ಮಾನ್ವಿ ಶಿವಲಿಂಗಪ್ಪನವರು, ಬುಳ್ಳಾ ಮನೆತನದವರು, ಲಿಂಗಧಾಳ ಗುರುಲಿಂಗಯ್ಯನವರು, ಬೆಂಡೀಗೇರಿ ಭೂಸ್ತ ಈಶ್ವರಪ್ಪನವರು, ನಿಲೂಗಲ್ಲ ಸಂಗಪ್ಪನವರು ಮತ್ತು ಶಹಪೂರಪೇಟೆಯ ಸುಮಾರು ಎಲ್ಲ ಜನರಿಗೂ ಮನೆ ಬಳಗದವರೇ ಆಗಿ ಇವತ್ತಿಗೂ ಸ್ಮರಣೆಯಲ್ಲಿರುತ್ತಾರೆ.

ಗದುಗಿನ ಹಾಲಕೆರೆ ಶ್ರೀ ಅನ್ನದಾನಸ್ವಾಮಿಗಳವರ ಮಠದಲ್ಲಿ ಸಂಸ್ಕೃತ ಪಾಠಶಾಲೆಯೊಂದು ಆರಂಭವಾಗಿದ್ದ ಕಾಲದಲ್ಲಿ ಬೆಂಗಳೂರಿನ ಸರ್ಪಭೂಷಣಮಠದ ಈಗಿನ ಅಧಿಕಾರಿಗಳಾಗಿರುವ ಶ್ರೀ ಮ. ನಿ. ಪ್ರ. ಶಿವಕುಮಾರಸ್ವಾಮಿಗಳೂ ಒಬ್ಬರು. ಶಾಸ್ತ್ರಿಗಳವರ ಅಧ್ಯಾಪಕ ವೃತ್ತಿಗಿಂತ ಸಮಾಜಕ್ಕೆ ಆದ ಪರಿಣಾಮವು ಅವರ ಪ್ರವಚನದ ಶೈಲಿಯಿಂದ. ಈ ಪ್ರವಚನ ವಿದ್ಯೆಯು ಅವರು ವಿದ್ಯಾರ್ಥಿದೆಶೆಯಲ್ಲಿರುವಾಗಲೇ ಮೈಗೂಡಿ ಬಂದದ್ದು. ಅದರಲ್ಲಿ ಅವರ ಶೀಲ, ಪಾವಿತ್ರ್ಯವೇ ಇವತ್ತಿಗೂ ತೋರುತ್ತಿವೆ. ತಮ್ಮ ನೈರ್ಮಲ್ಯ ಪ್ರಭಾವದಿಂದ ತಮ್ಮ ಸುತ್ತಲಿನ ಪರಿಸರವನ್ನೇ ಅಂದರೆ ಇಡೀ ವೀರಶೈವ ಸಮಾಜವೇ ತಮ್ಮ ಪರಿಸರವೆಂದು ತಿಳಿದು ಅದನ್ನು ತಮ್ಮಂತೆ ಮಾಡುವ ಪ್ರಯತ್ನದಲ್ಲಿ ಜಯಶೀಲರಾಗಿದ್ದಾರೆ. ಇವರಿಂದಲೇ ಸ್ಥಾಪಿತವಾದ ವೀರಶೈವ ವಿದ್ಯಾಪೀಠವು ಮತ್ತು ಶಿವಾನುಭವ ಪರೀಕ್ಷೆಯು ವಿಚಾರವು ಬಿಡದಂತೆ ನಡೆದುಕೊಂಡು ಬಂದಿವೆ. ಇದಕ್ಕೆ ಅನುಕೂಲವಾಗಿ ಧಾರವಾಡದ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರು ಕೈಹಿಡಿದು ನಡೆದುಕೊಂಡುಬಂದ ಪರಿಣಾಮವೇ ಈಗ ಅಸಂಖ್ಯವಾಗಿ ನಾನಾ ಮುಖವಾಗಿ ವೀರಶೈವ ತತ್ತ್ವ ಪ್ರಕಾಶವು ಬೆಳೆದದ್ದನ್ನು ಕಾಣುತ್ತೇವೆ. ಇದಕ್ಕೆ ಪ್ರತಿಫಲವಾಗಿ ತಮ್ಮ ಸ್ವಂತ ಜೀವನಕ್ಕೆ ಸಂಭಾವನೆಯನ್ನಾಗಲೀ, ಪ್ರತಿಷ್ಠೆಯನ್ನಾಗಲೀ ಅಪೇಕ್ಷಿಸದೇ ನಿಸ್ಪೃಹರಾಗಿ ಕಾರ್ಯನಿರತ್ತರಾಗಿದ್ದು ಸಮಾಜವು ಇವರಿಗೆ ಬಹಳ ರೀತಿಯಿಂದ ಋಣಿಯಾಗಿದೆ. ನಾನಂತೂ ಇವರನ್ನು "ಪ್ರತಿ ಬಸವ"ನೆಂದೇ ನಂಬಿದ್ದೇನೆ,

'ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ' ಇದನ್ನು ಇವರಲ್ಲಿ ಪ್ರತಿ ಹೆಜ್ಜೆಯಲ್ಲಿ ಕಾಣುತ್ತೇವೆ. ಆ ಸಾಮರ್ಥ್ಯದಿಂದಲೇ ಪೂಜ್ಯತೆಯನ್ನು ಪಡೆದು ಪೂಜ್ಯರಿಗೂ ಪೂಜ್ಯರಾಗಿ ನಿರ್ಭಯರಾಗಿ ಅಧಿಕಾರವಾಣಿಯಿಂದ ಸಿದ್ಧಾಂತವನ್ನು ಅನುಭವ

ಪೂರ್ಣವಾಗಿ ವಿಂಗಡಿಸಿ ವಿರಳ ವಿರಳವಾಗಿ ಪ್ರತಿಪಾದಿಸುತ್ತಾರೆ. ಆ ಕೇಳುಗರೇ ಧನ್ಯರು. ವೀರಶೈವಾಚಾರ ಗಂಧವಿಲ್ಲದೇ ನಿಜಗುಣರ ಶಾಸ್ತ್ರವನ್ನು ವರ್ಷಾನುಗಟ್ಟಲೇ ಹೇಳುವವರಿದ್ದು ಅದು ಲಿಂಗತತ್ತ್ವಕ್ಕೆ ದೂರವೆನ್ನುವಷ್ಟು ಬೇರ್ಪಡಿಸಿರುವದನ್ನು ಕಾಣುತ್ತೇವೆ. ಆದರೆ ಪಂ. ನಾಗಭೂಷಣ ಶಾಸ್ತ್ರಿಗಳವರಿಂದ ಕೇಳಿದರೆ ನಿಜಗುಣರು ಲಿಂಗವಲ್ಲಿ ಒಳಹೊಕ್ಕು ನುಡಿದದ್ದು ತಿಳಿಯುತ್ತದೆ. ಇದರಲ್ಲಿ ಶಾಸ್ತ್ರಿಗಳವರ ಆಳವಾದ ಅಭ್ಯಾಸವನ್ನೂ ಅಳೆಯಬಹುದು.

ಶಾಸ್ತ್ರಿಗಳವರನ್ನು ಅರಿತಷ್ಟೂ ತತ್ತ್ವಜಿಜ್ಞಾಸೆಯಾಗುತ್ತದೆ. ಸಂಗನ ಶರಣರು ಮನದೆರೆದು ಮಾತನಾಡಿದರೆ ಮಾತ್ರ ಲಿಂಗವನ್ನು ಕಾಣುವದಾದರೆ ಶಾಸ್ತ್ರಿಗಳೊಡನೆ ಸಹಜ ಮಾತನಾಡಿದರೂ ಕೋಟಿ ಲಿಂಗ ಪ್ರದರ್ಶನವಾಗುತ್ತದೆ. ಮಂತ್ರಕಾಯರೂ, ಸರ್ವಾಂಗಲಿಂಗಿಗಳೂ ಆಗಿರುವವರ ಲಿಂಗ ಮುಖದಿಂದ ಎಷ್ಟು ಲಿಂಗಗಳು ಉದ್ಭವಿಸಿರುವವೊ ! ಆ ವಿರಾಡ್ದರ್ಶನದ ಸುಖವೆಷ್ಟು ಜನಕ್ಕೆ ಆಗಿದೆ ? ಅದಷ್ಟೇ ಕಥಾ, ಪುರಾಣಗಳನ್ನು ಹೇಳುವ ಅವರ ರೀತಿಯೇ ಬೇರೆ. ಶಿವಾನುಭವಸೂತ್ರ, ಕ್ರಿಯಾಸಾರ, ಸಿದ್ಧಾಂತಶಿಖಾಮಣಿ, ವಿಶೇಷಾರ್ಥಪ್ರಕಾಶಿಕೆ ಮುಂತಾದ ಗಹನ ವಿಷಯಗಳನ್ನು ತಿಳಿಸಿ ಹೇಳುವಾಗಿನ ಅವರ ಗಂಭೀರ ಮುಖಚರ್ಯೆಯೇ ಬೇರೆ. ಆ ವೇಳೆಯಲ್ಲಿ ಅವರೊಡನೆ ಸಲುಗೆಯಿಂದ ಏನಾದರೂ ಮಾತಾಡಲಿಕ್ಕೆ ಕೂಡ ಭಯವಾಗುತ್ತದೆ. ಇದು ನನಗೆ ಅನೇಕ ಸಲ ಅನುಭವವಾದದ್ದುಂಟು.

ಶಾಸ್ತ್ರಿಗಳವರ ಈ ಅಪಾರ ವಯಸ್ಸಿನಲ್ಲಿಯೂ ಅವರ ಸದುಪಯೋಗವನ್ನು ಕರ್ನಾಟಕ ವಿಶ್ವವಿದ್ಯಾಲಯವು ಮಾಡಿಕೊಳ್ಳುತ್ತಿರುವದು ನಮ್ಮ ಭಾಗ್ಯವೆಂದೇ ಹೇಳಬೇಕು. ಒಂದು ಹೆಜ್ಜೆಯನ್ನೂ ಕಿತ್ತಿ ಮುಂದಿಡದೇ ಕುಂಬಾರನ ತಿಗರಿಯಂತೆ ಇದ್ದಲ್ಲಿಯೇ ಸುತ್ತುತ್ತಿರುವ ಪುಸ್ತಕಗಳ ಹೊರೆಯಿಂದಾಗುವ ಪ್ರಯೋಜನಕ್ಕಿಂತ ಇವರ ಬಸವಣ್ಣನ ಮತ್ತು ಅಕ್ಕಮಹಾದೇವಿಗಳ ಆದರ್ಶ ಜೀವನ, ಭಾರತೀಯ ದರ್ಶನ ಸಮೀಕ್ಷೆ ಇಂಥ ಕೇವಲ ಚಿಕ್ಕ ಪುಸ್ತಕಗಳು ನಮ್ಮ ಜೀವನದ ಉದ್ಧಾರಕ್ಕೆ ಸಾಕು,

ಶಾಸ್ತ್ರಿಗಳವರದು ತುಂಬು ಜೀವನ. ಮಕ್ಕಳು ಮೊಮ್ಮಕ್ಕಳಿಂದ ಮನೆಯು ಸದಾ ಗಿಜಿಗಿಜಿ ಅನ್ನುತ್ತದೆ. ಆ ಗದ್ದಲದಲ್ಲಿಯೇ, ಸಾವಧಾನಕ್ಕೆ ಲೇಖನ, ಯಾವುದಾದರೂ ಗ್ರಂಥ ಪರಿಶೀಲನೆ, ಸಂಪಾದನೆ, ತಮ್ಮ ಸ್ವಂತ ಪ್ರಿಂಟಿಂಗ ಪ್ರೆಸ್ಸಿನ ವಿಷಯ ಮತ್ತೆ ಬಂದವರಕೂಡ ಸಂಭಾಷಣೆ, ಉಪಚಾರ ಇವೆಲ್ಲ ಲೀಲಾಜಾಲವಾಗಿ ನಿತ್ಯ ನಡೆಯುತ್ತಿರುತ್ತವೆ. ಇವರಿಗೆ ತಕ್ಕ ಹೆಂಡತಿ ಮಾತೋಶ್ರೀ ಶಿವಗಂಗವ್ವನವರು.

ಕನ್ಯೆಯಲ್ಲಿ ಕೈವಿಡಿದು ಪತಿಯಲ್ಲಿ ನೆರೆದು ಮುತ್ತಿನಂಥ ಮಕ್ಕಳನ್ನು ಹಡೆದು, ಪತಿಗೆ ಅನುಕೂಲವಾಗಿ ಮನೆತನವನ್ನು ಸಾಗಿಸಿಕೊಂಡು ಹೋಗುತ್ತಿದ್ದಾರೆ. ಇವರ ಬಾಳಿನಲ್ಲಿ ಕೊರತೆಯೆಂದರೆ ಒಬ್ಬ ಹಿರಿಯ ಮಗಳು ವೀರಮ್ಮ, ಒಬ್ಬ ಹಿರಿಯ ಮಗ ಬಸವರಾಜ ಇವರನ್ನು ಅಕಾಲದಲ್ಲಿ ಅಗಲಿದ್ದು. ಆದರೂ ಸ್ಥಿತಪ್ರಜ್ಞರಾಗಿ ತಮ್ಮ ಕಾಯಕ ಕ್ರಮವನ್ನು ನಡೆಸುತ್ತಾ ಆದರ್ಶ ಜೀವಿಗಳಾಗಿದ್ದಾರೆ. ಅವಿಶ್ರಾಂತವಾಗಿ ದುಡಿಯುತ್ತಿರುವ ಇವರ ಜೀವನಕ್ಕೆ ವರ್ಷದಲ್ಲಿ ಒಂದು ತಿಂಗಳು ಇಲಕಲ್ಲಿನಲ್ಲಿ ಶ್ರೀ ಮ. ನಿ. ಪ್ರ. ವಿಜಯಮಹಾಂತಸ್ವಾಮಿಗಳವರಲ್ಲಿ ಮಾತ್ರ ಬಿಡುವು. ಇವರ ಚಿತ್ತ ಮಾನಸಿಕ ಶ್ರಮವು ದೇಹದ ಮೇಲೆ ಪರಿಣಾಮವಾಗಬಾರದೆಂದೇನೊ ಶ್ರೀಗಳು ಶ್ರಾವಣ ಮಾಸದಲ್ಲಿ ಒಂದು ತಿಂಗಳು, ಬೆಳಿಗ್ಗೆ ಒಂದು ತಾಸು ಮಾತ್ರ ಇವರಿಂದ ಪ್ರವಚನಮಾಡಿಸಿ ನಂತರ ಇಡೀ ದಿವಸ ವಿಶ್ರಾಂತಿಗೆ ಅವಕಾಶಮಾಡಿಕೊಡುವ ಪದ್ಧತಿಯನ್ನು ಈಗ ೧೦-೧೨ ವರ್ಷಗಳಿಂದ ಇಟ್ಟುಕೊಂಡಿರುತ್ತಾರೆ.

ಧಾರವಾಡದ ಶ್ರೀ ಮಹಾಂತ ಅಪ್ಪಗಳು ಈಗ ಇವರ ಅಮೃತೋತ್ಸವ ವನ್ನು ನೆರವೇರಿಸುತ್ತಿರುವದು ಶ್ಲಾಘ್ಯವು. ರತ್ನಪಡಿಪ್ಯಾಪಾರಸ್ಥನು ರತ್ನವನ್ನು ಪರೀಕ್ಷಿಸುವಂತೆ ಶ್ರೀ ಅಪ್ಪಗಳು ಇಂಥ ರತ್ನಗಳನ್ನು ಆಯ್ದು ಸಮಾಜಕ್ಕೆ ತಿಳು ವಳಿಕೆಗಾಗಿ ತೋರಿಸುತ್ತಾ ಕೌಸ್ತುಭಮಣಿಯಂತೆ ತಾವೂ ಧರಿಸಿಕೊಂಡಿರುತ್ತಾರೆ. ಸದಾ ಉಲ್ಲಾಸಚಿತ್ತರಾಗಿ ಶಾಸ್ತ್ರಿಗಳವರಿಂದ ಸಮಾಜವು ಬಹಳ ಲಾಭ ಪಡೆಯ ಬೇಕಾಗಿದೆ. ದೇವರು ಅವರಿಗೆ ಆಯುರಾರೋಗ್ಯವನ್ನೂ, ನಮಗೆ ಸದ್‌ಬುದ್ಧಿ ಯನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ,

೦ ೦

ಸತ್ಯದಲ್ಲಿ ನಡೆವುದು ಶೀಲ
ಸತ್ಯದಲ್ಲಿ ನುಡಿವುದು ಶೀಲ
ಸಜ್ಜನ ಸದಾಚಾರದಲ್ಲಿ ವರ್ತಿಸಿ
ನಿತ್ಯವನರಿವುದೇ ಶೀಲ ಕಾಣಭೋ !
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವಿನಲ್ಲಿ !

—ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿ.

# ಸದುವಿನಯದ ಶಿವಾನುಭಾವಿ

—ಪ್ರೊ. ದೇವೇಂದ್ರಕುಮಾರ ಹಕಾರಿ

೧೯೪೪-೪೫ರ ಸುಮಾರು ನಾನು ಕೊಪ್ಪಳದಲ್ಲಿ ೭ನೆಯ ಇಯತ್ತೆಯ ವಿದ್ಯಾರ್ಥಿ. ಒಂದು ದಿನ ನನ್ನ ಗುರುಗಳಾಗಿದ್ದ ಕಲ್ಲೂರ ಹಿರೇಮಠದ ಶ್ರೀ ಗುರು ಶಾಂತಸ್ವಾಮಿಗಳು "ದೇವೇಂದ್ರ ನಾಳೆ ಧಾರವಾಡದ ಮೃತ್ಯುಂಜಯ ಅಪ್ಪಗಳು ಇಲ್ಲಿಗೆ ದಯಮಾಡಿಸುತ್ತಾರೆ. ಆಗ ನೀನು ಒಂದು ಪ್ರಾರ್ಥನೆ ಹೇಳಬೇಕು"ಎಂದು "ಅವರವ ಭಾವಕ್ಕೆ ಅವರವರ ಭಕ್ತಿಗಂ" ಎನ್ನುವ ರಚನೆಯನ್ನು ಸರಾಗವಾಗಿ ಹೇಳಲು ಕಲಿಸಿದರು.

ಮಾರನೆಯದಿನ ವಿದ್ಯಾರ್ಥಿಗಳಾಗಿದ್ದ ನಮಗೆ ಹಬ್ಬವೇ ಹಬ್ಬ. ಅಂದು ಸಾಯಂಕಾಲ ಮೃತ್ಯುಂಜಯ ಅಪ್ಪಗಳು ನಮ್ಮ ನಿಲಯಕ್ಕೆ ಬಂದು ಹೇಳಿದ ಕೆಲವು ಮಾತುಗಳಿವು:

"ನಮ್ಮ ಧರ್ಮ ಲಿಂಗವಂತ ಧರ್ಮ. ನಾವೆಲ್ಲ ಲಿಂಗವಂತರು. ಲಿಂಗವಂತರು ಅಂದ್ರೆ? ಲಿಂಗಧರಿಸಬೇಕು. ನಿತ್ಯ ಲಿಂಗಾರ್ಚನೆ ಮಾಡಬೇಕು. ಒಂದು ನಿಮಿಷವಾಗಲಿ ಲಿಂಗಯ್ಯನಿಗೆ ಉದಕಪರೆದು ಪತ್ರಿ, ಪುಷ್ಪ ನೀಡಿ ಆಮ್ಯಾಲೆ ಪ್ರಸಾದ ತೊಗೋಬೇಕು, ಆಚರಣೆ ಶುದ್ಧ ಇರಬೇಕು. ಲಿಂಗವಂತರಿರಲಿ ಇತರ ಯಾರೇ ಇರಲಿ ಎಲ್ಲರೂ ತಮ್ಮ ತಮ್ಮ ಧರ್ಮದ ಆಚಾರಣೆ ಮಾಡಬೇಕು. ಲಿಂಗಾಯತರು ಶರಣರು ಹೇಳಿದ ನುಡಿ ಕಲಿತು ಅದರಂತೆ ನಡೀಬೇಕು. ಅದಕ್ಕೆ ನಮ್ಮ ಶರಣರ ವಚನಗಳನ್ನು ಎಲ್ಲರೂ ಮಕ್ಕಳು, ದೊಡ್ಡವರು. ತಾಯಂದಿರು ಎಲ್ಲಾರೂ ಕಲೀಬೇಕು. ನಮ್ಮ ಅಖಿಲ ಭಾರತ ಶಿವಾನುಭವ ಸಂಸ್ಥೆ ಈ ಕಾಯಕ ಕೈಕೊಂಡಿದೆ. ನಮ್ಮ ಶರಣರ ವಚನ ಸಣ್ಣ ಮಕ್ಕಳಿಗೂ ತಿಳಿಯೂ ಹಾಂಗ ಬರೆದು ಅದರ ಆಚರಣೆ, ಪದ್ಧತಿ ಎಲ್ಲವನ್ನೂ ತಿಳಿಸಿ ಹುಡುಗರ ಕೈಯಾಗ ಬೆಂಡು ಬೆತ್ತಾಸ ಕೊಡೋಹಾಂಗ ಸಣ್ಣ ಸಣ್ಣ ಪುಸ್ತಕ ಮಾಡಿ ಅವರಿಗೆ ಕೊಡಬೇಕು: ಶಿವಾನುಭವ ಪರೀಕ್ಷಾಕ್ಕೆ ಓದಬೇಕು, ಪರೀಕ್ಷಾ ಕೊಡಬೇಕು. ಮನಿಯೊಳಗಿನ ನಮ್ಮ ತಾಯಂದಿರು ಮಕ್ಕಳಿಗೆ ಮೊಲೆಹಾಲಿ ಕುಡಸ್ತಾ ಕುಡಸ್ತಾ ಅಪ್ಪನವರ ವಚನಗಳನ್ನು, ಮಹಾ ಮಹಾ ಅನುಭಾವಿಗಳ ಹಾಡುಗಳನ್ನು ಹಾಡ್ತಾ

ಇರಬೇಕು. ಮಕ್ಕಳಿಗೆ ಕಿವಿಯಲ್ಲಿ ಹೇಳಬೇಕು. ಈಗ ಹಾಂಗ ಹೆಂಡೂ ಒತ್ತಾಸ ಕೊಡೋ ಕಾಯಕಾ ಮಾಡಿದವರು ನಮ್ಮ ಪಂಡಿತ ನಾಗಭೂಷಣ ಶಾಸ್ತ್ರಿಗಳು" ಎಂದು ಹೇಳಿ ವಚನ ಮಧು [ಭಾಗ-೧] ಪುಸ್ತಕವನ್ನು ಎಲ್ಲರಿಗೂ ಆಶೀರ್ವದಿಸಿ ಹೋದರು.

ನನಗೆ ನಾಗಭೂಷಣ ಶಾಸ್ತ್ರಿಗಳ ಪರಿಚಯವಾದದ್ದು ಹೀಗೆ :

ನಮ್ಮ ನೆರೆಯಗ್ರಾಮ ಸಂಗನಾಳದವರೇ ಆದ ಅವರು ಕಾಶಿ ಮುಂತಾದ ಪ್ರದೇಶಗಳಲ್ಲಿ ಅದ್ವಿತೀಯ ಸಂಸ್ಕೃತ ಪಾಂಡಿತ್ಯ ಪಡೆದು ಬಂದವರೆಂದೂ ಮತ್ತು ಧರ್ಮಶಾಸ್ತ್ರದಲ್ಲಿ ನಿಷ್ಣಾತರೆಂದೂ ಆಗೆ ನಮ್ಮ ಭಾಗದಲ್ಲಿ ತುಂಬ ಕೀರ್ತಿಶಾಲಿಗಳಾಗಿದ್ದ ನಾಗಭೂಷಣ ಶಾಸ್ತ್ರಿಗಳನ್ನು ಪ್ರತ್ಯಕ್ಷವಾಗಿ ಕಂಡದ್ದು ೧೯೪೭-೪೮ರ ಅವಧಿಯಲ್ಲಿ. ಶ್ರೀ ಅನ್ನದಾನಯ್ಯ ಪುರಾಣಿಕರು ಗದುಗಿನ ಅನ್ನದಾನಿ ಸ್ವಾಮಿಗಳ ಮಠಕ್ಕೆ ಕರೆದುಕೊಂಡು ಹೋದಾಗ ಅಲ್ಲಿಯೇ ವಾಸವಾಗಿದ್ದ ಶ್ರೀ ಶಾಸ್ತ್ರಿಗಳನ್ನು ಪರಿಚಯಿಸಿದರು. 'ವಚನ ಮಧು' ಭಾಗ-೧, ಭಾಗ-೨, ಹೀಗೆ ಶಿವಾನುಭವ ಪರೀಕ್ಷೆಗಳಿಗೆ ಅಗತ್ಯವಾದ ಚಿಕ್ಕ ಚಿಕ್ಕ ಪುಸ್ತಿಕೆಗಳನ್ನು ಬರೆದು ಪ್ರಕಟಿಸಿ ಎಲ್ಲ ಭಾಗದಲ್ಲೂ ಹೆಸರುವಾಸಿಗಳಾಗಿದ್ದ ಶಾಸ್ತ್ರಿಗಳ ಇರವು ಶರಣರ ಬದುಕಿನ ಒಂದು ಸ್ಥೂಲ ರೂಪವನ್ನು ಕಣ್ಣೆದುರು ತೆರೆದು ತೋರಿಸಿತ್ತು. ನಿರಾಡಂಬರ, ಸರಳ, ಅಚ್ಚ ಬಿಳೀ ಪಂಜೆ. ಅಂಗಿ, ಮತ್ತೊಂದು ಹೆಗಲ ಪಂಜೆ, ಭಸ್ಮ ಸ್ನಾತ ಸಸ್ಮಿತ ಮುಖ, ಮೃದುವಚನ.

ಸಂಸ್ಕೃತ ಪಂಡಿತರು ಹೇಗಿರುತ್ತಾರೋ ಏನೋ ! ಅಂದು ಸಂಕೋಚದಿಂದ ಅವರಲ್ಲಿಗೆ ಹೋದ ನನಗೆ ಮೊದಲ ಭೇಟಿಯಲ್ಲಿಯೇ ಅವರ ಬಗೆಗೆ ಗೌರವ ಭಕ್ತಿಗಳು ಒಡಮೂಡಿದವು. ಅಂದು ಅವರು ಆರಂಭಿಸಿದ ಶರಣ ಸಾಹಿತ್ಯ ಸೇವೆ ಶ್ರೀ. ಮ. ನಿ. ಪ್ರ. ಮೃತ್ಯುಂಜಯ ಅಪ್ಪಗಳ ದಿಟ್ಟ ಮಾರ್ಗದರ್ಶನದಲ್ಲಿ ಮುನ್ನಡೆದು ಅ. ಭಾ. ಶಿವಾನುಭವ ಸಂಸ್ಥೆ, ಸಾವಧಾನ ಪತ್ರಿಕೆ ಮುಂತಾದವುಗಳ ಅಂಗವಾಗಿ ಮುಂದುವರೆದು ವೀರಶೈವ ಸಮಾಜಕ್ಕೆ, ಧಾರ್ಮಿಕ ಜ್ಞಾನಪ್ರಸಾರಕ್ಕೆ ಮೀಸಲಾಯಿತು.

ಅ. ಭಾ. ಶಿ. ಸಂಸ್ಥೆಯ ಎರಡು ಕಣ್ಣುಗಳಂತಿದ್ದ ವೈ. ನಾಗೇಶ ಶಾಸ್ತ್ರಿಗಳು ಮತ್ತು ನಾಗಭೂಷಣ ಶಾಸ್ತ್ರಿಗಳು ವೀರಶೈವ ತತ್ತ್ವಜ್ಞಾನವನ್ನು, ವೀರಶೈವ ಸಾಹಿತ್ಯವನ್ನು ಗಾಢವಾದ ನಿಷ್ಠೆ ಮತ್ತು ಪ್ರತಿ ಫಲಾಪೇಕ್ಷೆಯಿಲ್ಲದೆ ಅನನ್ಯ ಭಕ್ತಿಯಿಂದ ಸಮಾಜಸೇವೆ ಮಾಡಿದ ಮಹಾನುಭಾವರು. ಪಂಡಿತ ವೈ. ನಾಗೇಶ ಶಾಸ್ತ್ರಿಗಳು ಲಿಂಗದೊಳಗಾದ ಬಳಿಕ ಅ. ಭಾ. ಶಿ. ಸಂಸ್ಥೆಯ ಸಾವಧಾನ ಪತ್ರಿಕೆಯ ಮತ್ತು ಮುರುಘಾ ಮಠದ ಎಲ್ಲ ಬಗೆಯ ಸಾಂಸ್ಕೃತಿಕ ಚಟುವಟಿಕೆಗಳ ಕರ್ಣಧಾರತ್ವವನ್ನು ವಹಿಸಿಕೊಂಡ ನಾಗಭೂಷಣ ಶಾಸ್ತ್ರಿಗಳು ಎಲೆಮರೆಯ ಹೂವಿನಂತೆ ತಮ್ಮ ಜ್ಞಾನ ಮತ್ತು ಸದುವಿನಯದ ಸುಗಂಧ ಬೀರುತ್ತಿದ್ದಾರೆ. ಸಂಸ್ಕೃತ ಭಾಷೆ, ದರ್ಶನ

ಶಾಸ್ತ್ರಗಳ ಅಪೂರ್ವ ಪಾಂಡಿತ್ಯ ಸಂಪಾದಿಸಿದ ವ್ಯಕ್ತಿಗಳು ಸಾಮಾನ್ಯವಾಗಿ ಕನ್ನಡದ ಬಗೆಗೆ ಅಷ್ಟೊಂದು ಶ್ರದ್ಧೆ, ನಿಷ್ಠೆಗಳನ್ನು ತೋರುವುದು ವಿರಳ. ಆದರೆ ನಾಗಭೂಷಣ ಶಾಸ್ತ್ರಿಗಳು ಈ ಮಾತನ್ನು ಹುಸಿಗೊಳಿಸಿ ಯಾವ ಭಾಷಾಸಾಹಿತ್ಯ ಪಂಡಿತನೇ ಆಗಿರಲಿ, ಸ್ವಭಾಷೆ ಮತ್ತು ಸ್ವಧರ್ಮಗಳ ಅಧ್ಯಯನ ಅನುಷ್ಠಾನ ಗಳನ್ನು ಅಗತ್ಯವಾಗಿ ಮಾಡಬೇಕು ಎನ್ನುವುದನ್ನು ತಮ್ಮ ಕ್ರಿಯಾಚರಣೆಗಳಿಂದ ಸಾಬೀತುಗೊಳಿಸಿದ್ದಾರೆ.

ವಚನಸಾಹಿತ್ಯವನ್ನು ಕುರಿತು ಇವರು ರಚಿಸಿದ ಅನೇಕ ಚಿಕ್ಕ ಚಿಕ್ಕ ಪುಸ್ತಿಕೆಗಳು ಅಖಿಲ ಭಾರತ ಶಿವಾನುಭವ ಸಂಸ್ಥೆಯು ನಡೆಸುವ ಶಿವಾನುಭವ ಪರೀಕ್ಷೆಗಳಿಗೆ ಪಠ್ಯ ಪುಸ್ತಕಗಳಾಗಿ ವೀರಶೈವ ಧರ್ಮ, ಶರಣ ಸಂದೇಶ, ವಚನ ಸಾಹಿತ್ಯದ ಹಿರಿಮೆ ಗಳನ್ನು ಕನ್ನಡ ನಾಡಿನ ಧರ್ಮಜಿಜ್ಞಾಸುಗಳಿಗೆ ಎತ್ತಿ ತೋರಿಸುವಲ್ಲಿ ಸಫಲವಾಗಿವೆ.

ಪಂಡಿತ ನಾಗಭೂಷಣ ಶಾಸ್ತ್ರಿಗಳ ಇನ್ನೊಂದು ಮಹತ್ವದ್ದು—ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ವಚನ ವಾಙ್ಮಯ ವಿಭಾ ಗಕ್ಕೆ ಸಲ್ಲಿಸಿದ ಅಪೂರ್ವಸೇವೆ. ಡಾ. ಆರ್. ಸಿ. ಹಿರೇಮಠರ ದೂರ ದರ್ಶಿತ್ವ ವಚನ ವಾಙ್ಮಯದ ಮೇಲಿನ ಅಪೂರ್ವ ನಿಷ್ಠೆ ಮತ್ತು ವೀರಶೈವ ದರ್ಶನದ ಆಳವಾದ ಜ್ಞಾನಗಳ ಫಲವಾಗಿ ನಿಯೋಜಿತರಾಗಿ ಕಾರ್ಯಸಾಧನೆಗೈದ ಈ ಶಾಖೆ ಯಲ್ಲಿ ನಾಗಭೂಷಣ ಶಾಸ್ತ್ರಿಗಳು ಸಲ್ಲಿಸಿದ ಮತ್ತು ಸಲ್ಲಿಸುತ್ತಿರುವ ಮಾರ್ಗದರ್ಶನ ಮೌಲಿಕ ಸ್ವರೂಪದ್ದಾಗಿದೆ.

ಗದುಗಿನ ಹಾಲಕೆರೆ ಅನ್ನದಾನಸ್ವಾಮಿಗಳ ಮಠದಿಂದ ಪಂ. ನಾಗಭೂಷಣ ಶಾಸ್ತ್ರಿಗಳು ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗೇಶ್ವರ ಗ್ರಂಥಮಾಲೆಯನ್ನು ಆರಂಭಿಸಿದ ಕಾಲದಲ್ಲಿ ವಚನಸಾಹಿತ್ಯವನ್ನು ಕುರಿತು ಅವರು ಬರೆದ ಮಾತು ಹೀಗಿವೆ:

"ಮಹಾಪುರುಷರ ಮಾಲೆಯಲ್ಲಿ ಕರ್ನಾಟಕದಲ್ಲಿ ಹನ್ನೆರಡನೇ ಶತಮಾನದ ಒಳ ಹೊರಗೂ ಆಗಿಹೋದ ಶಿವಶರಣರಿಗೆ ವಿಶಿಷ್ಟ ಸ್ಥಾನವಿದೆ. ಅವರ ನಿರ್ಮಲಾಂತಃ ಕರಣದಿಂದ ಹೊರಹೊಮ್ಮಿಬಂದ ವಚನಗಳು ಮಾನವರ ಬಾಳಿನ ಎಲ್ಲ ತರಹದ ತಾಪಗಳನ್ನು ಬಡಿದೋಡಿಸಿ ಜೀವನವನ್ನು ದೇವನನ್ನಾಗಿ ಮಾಡುವ ಅಮೃತ ಬಿಂದುಗಳು . . . . . . . . ಪುರುಷ ಪ್ರಯತ್ನವಿಲ್ಲದೆ ಲಿಂಗಾನಂದದ ನಿಬ್ಬೆರಗಿನಲ್ಲಿ ಹೊರಗೆ ಚಿಮ್ಮಿಬಂದ ಅವರ ನುಡಿಗಳು ಅಪೌರುಷೇಯವೆಂದು ಹೇಳಲ್ಪಡುವ ವೇದ ಗಳಿಗಿಂತಲೂ ಎಲ್ಲರ ಹಿತದೃಷ್ಟಿಯಿಂದ ಮನನಾರ್ಹಗಳಾದ ಮಹಾಮಂತ್ರ ಸ್ವರೂಪ ಗಳಾಗಿವೆ. ಇವು ಜಾತಿ, ಮತ, ಪಂಥಗಳ ದುರಭಿಮಾನದ ಮುಸುಗನ್ನು ಹಾರಿಸಿ ಎಲ್ಲರಿಗೂ ನಿಜ ಸ್ವರೂಪದ ಅರಿವನ್ನುಂಟುಮಾಡಿಕೊಡುವ ರನ್ನಗನ್ನಡಿಗಳು."

ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಸಮಷ್ಟಿಕಲ್ಯಾಣದ ಗುರಿಯನ್ನು ಹೊಂದಿದ ಶಿವಶರಣರ ಸಮಗ್ರ ಕ್ರಾಂತಿಯ ಫಲಸ್ವರೂಪವಾಗಿ ಮೂಡಿ ಬಂದ ವಚನ ಸಾಹಿತ್ಯದ ಬಗೆಗೆ ಹೇಳಬೇಕಾದುದನ್ನೆಲ್ಲ—ವಿಶೇಷತಃ, ಅವರ ಆಧ್ಯಾತ್ಮಿಕ ಹಿರಿಮೆ, ಅನುಭಾವದ ಸಾಧನೆ ಮತ್ತು ವಿಶ್ವಮಾನ್ಯ ಲಕ್ಷಣ ವಿಷಯಗಳನ್ನೆಲ್ಲ ಪಂ. ನಾಗಭೂಷಣ ಶಾಸ್ತ್ರಿಗಳವರ ಈ ಮೇಲಿನ ಮಾತುಗಳಲ್ಲಿ ಕಾಣಬಹುದಾಗಿದೆ.

ಜೀವನ ಒಂದು ಸಫಲ ಸಾಧನೆಯಾಗಬೇಕು ಎಂದು ಹೇಳಲಾಗುತ್ತಿದೆ.

ಪಂ. ನಾಗಭೂಷಣ ಶಾಸ್ತ್ರಿಗಳು ನಿರಂತರ ಅವಧಾನ, ಚಿರಂತನ ಶ್ರದ್ಧೆ, ಪಾಂಡಿತ್ಯ ಮತ್ತು ಅಷ್ಟೇ ಶೋಭಾಯಮಾನವಾದ ವಿನಯಶೀಲ ಸಂಪನ್ನ ಗುಣಗಳಿಂದ, ಕ್ರಿಯಾಶೀಲತೆಯಿಂದ ಬದುಕನ್ನು ಸಾರ್ಥಕಗೊಳಿಸಿದ ಸಹಜ ಶಿವಾನುಭವಿಯಾಗಿದ್ದಾರೆ. ಅವರ ಉನ್ನತ ವ್ಯಕ್ತಿತ್ವದಿಂದ ಪ್ರೇರಣೆ ಪಡೆದು ಅವರ ಆದರ್ಶದ ಹಾದಿಯಲ್ಲಿ ಹತ್ತು ಹೆಜ್ಜೆಗಳನ್ನಾದರೂ ನಡೆಯುವದಕ್ಕಿಂತ ಅವರಿಗೆ ಸಲ್ಲಿಸಬಹುದಾದ ಹೆಚ್ಚಿನ ಕಾಣಿಕೆ ಇನ್ನೇನು ?

'ಆಚಾರ: ಪ್ರಥಮೋ ಧರ್ಮ:' ಎನ್ನುವ ವಾಕ್ಯವನ್ನು ತಮ್ಮ ಜೀವನಸೂತ್ರವನ್ನಾಗಿ ರೂಪಿಸಿಕೊಂಡ ಪಂ. ನಾಗಭೂಷಣ ಶಾಸ್ತ್ರಿಗಳಿಗೆ ಇಂದು ಧರ್ಮಜ್ಞಾನ, ಧರ್ಮ ದರ್ಶನಗಳೇ ಪ್ರಾಣವಾಗಿವೆ. ಅಂತರರಾಷ್ಟ್ರೀಯ ಮಕ್ಕಳ ವರ್ಷದ ಆಚರಣೆಯ ಸಂದರ್ಭದಲ್ಲಿ ಅವರು ಮಕ್ಕಳ ವ್ಯಕ್ತಿತ್ವರೂಪಿಸಲು ಹೇಳಿದ ಮಾತುಗಳು ಅತ್ಯಂತ ಗಮನಾರ್ಹವಾಗಿವೆ. "ಬಾಲಕರ ಕೋಮಲ ಹೃದಯಗಳಲ್ಲಿ ನೀತಿ ಸಂಸ್ಕಾರ ಬೀಜ-ಗಳನ್ನು ಬಿತ್ತುವದು ಅತ್ಯಂತ ಮಹತ್ವದ್ದಾಗಿದೆ. ಅವೇ ಮುಂದೆ ಬೆಳೆದು ಹೆಮ್ಮರವಾಗಿ ಸುಖಫಲಗಳನ್ನು ಕೊಡುವವು", ಈ ಮಾತು ಯಾವ ದೇಶದ ಮಕ್ಕಳಿಗೆ ಅನ್ವಯ ವಾಗುವುದಿಲ್ಲ ?

○ ○

# ಪ್ರಾತಃ ಸ್ಮರಣೀಯ ವ್ಯಕ್ತಿ

—ಪ್ರೊ. ಬಸವಯ್ಯಾ ಶಿರೋಳ

ನಾಮ ರೂಪ ಕ್ರಿಯಾತ್ಮಕಗಳಲ್ಲಿ ಏಕರೂಪ ಕಂಡುಬರುವದು ಕಠಿಣ. ಹೆಸರಿನಂತೆ ವ್ಯಕ್ತಿತ್ವವನ್ನು ರೂಪಿಸಿಕೊಂಡವರಂತೂ ಅತಿ ವಿರಳರು. ಅಂತಹರಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳವರೊಬ್ಬರು. ಪಂಡಿತರಲ್ಲಿರಬೇಕಾದ ಸದ್ಗುಣಗಳ ಸಮೂಹವಿವರಲ್ಲಿದೆ. ಸಾಹಿತ್ಯ, ನ್ಯಾಯ, ವೇದಾಂತಗಳಲ್ಲಿ ಪಾಂಡಿತ್ಯ ಪಡೆದ ಅವರು 'ತುಂಬಿದ ಕೊಡ ತುಳುಕುವದಿಲ್ಲ' ಎಂಬುದಕ್ಕೆ ಉದಾಹರಣೆಯಾಗಿದ್ದಾರೆ. 'ವಿದ್ಯಾ ವಿನಯೇನ ಶೋಭತೇ' ಎಂಬುವದರಲ್ಲಿ ಫಲವನ್ನಿತ್ತಿದೆ. ನಾಗಭೂಷಣ ಇನ್ನೊಂದು ಹೆಸರು ನೀಲಕಂತ. ಶಿವನು ಕಾಲಕೂಟ ವಿಷವನ್ನು ಜಗತ್ತಿನ ಕಲ್ಯಾಣಕ್ಕಾಗಿ ಸ್ವೀಕರಿಸಿ, ತಾನು ಸಹ ಸೇವಿಸದೆ ಕಂತದಲ್ಲಿರಿಸಿಕೊಂಡನೆಂಬುದು ದೃಷ್ಟಾಂತ. ಅದರ ಪರಿಪೂರ್ಣತೆಯು ಹಂತ ನಮ್ಮ ಪಂ. ನಾಗಭೂಷಣರವರಲ್ಲಿದೆ. ಅವರು ತಮ್ಮ ಕೌಟುಂಬಿಕ ಜೀವನದಲ್ಲಿಯ ದುಃಖದುಮ್ಮಾನಗಳನ್ನು ಬಂದೊದಗಿದ ಸಂಕಷ್ಟಗಳನ್ನು ನುಂಗಿ ನೀಲಕಂತರಾಗಿದ್ದಾರೆ. ವಿದ್ಯೆಗಳೆರಡು—ಒಂದು ಶಸ್ತ್ರ ಇನ್ನೊಂದು ಶಾಸ್ತ್ರ. ಶಾಸ್ತ್ರಿಗಳವರಾದ ಇವರು ಸಮಾಜ ಪುರುಷನ ಆರೋಗ್ಯದಲ್ಲಿಯ ದೋಷಗಳನ್ನು ತಮ್ಮ ಶಿವಾನುಭವ ಎಂಬ ಶಸ್ತ್ರದಿಂದ ಶಸ್ತ್ರಕ್ರಿಯೆ ನಡೆಸಿ, ನಿವಾರಿಸುವಂತಹ ನಿಪುಣ ವೈದ್ಯರಿವರಾಗಿರುವರು.

ಶಾಸ್ತ್ರಿಗಳವರದು ತುಂಬು ಜೀವನ. ಆದರ್ಶ ಅನುಕರಣೀಯ ಗೃಹಸ್ಥರು. ಮನೆಯ ಯಜಮಾನರಾಗಿ, ತಂದೆಯಾಗಿ, ಅಜ್ಜಂದಿರಾಗಿ, ಜಾಗರೂಕತೆಯಿಂದ ಸಾರ್ಥಕ ಬಾಳನ್ನು ನಿರ್ವಹಿಸುತ್ತಲಿದ್ದಾರೆ. ಅವರು ಬೆಳ್ಳಿಯ ಚಮಚೆಯನ್ನು ಬಾಯುಲ್ಲಿಟ್ಟುಕೊಂಡು ಜನ್ಮತಾಳಿದವರಲ್ಲ. ಸಾಮಾನ್ಯ ಮನೆತನದಲ್ಲಿ ಹುಟ್ಟಿದರೂ ಅಸಾಮಾನ್ಯ ವ್ಯಕ್ತಿತ್ವವುಳ್ಳವರಾಗಿ ಬೆಳೆದರು. ಲಿಂ. ಶ್ರೀ ಮ. ನಿ. ಪ್ರ. ಮೃತ್ಯುಂಜಯ

ಮಹಾಸ್ವಾಮಿಗಳವರು, ಶ್ರೀ ಮುರುಘಾಮಠ, ಧಾರವಾಡ, ಹಾಗೂ ಲಿಂ. ಶ್ರೀ ಮ. ನಿ. ಪ್ರ. ಅನ್ನದಾನ ಮಹಾಸ್ವಾಮಿಗಳವರು, ಹಾಲಕೆರೆ, ಶಿವಯೋಗಿದ್ವಯರ ವಿಶೇಷ ಕೃಪಾಶೀರ್ವಾದಗಳಿಂದ ಉದಾತ್ತ ಮತ್ತು ಶಾಶ್ವತ ಜೀವನ ಮೌಲ್ಯಗಳನ್ನು ಜೀವನದುದ್ದಕ್ಕೂ ಅಳವಡಿಸಿಕೊಂಡು ಸಾಗಿಬಂದವರಾಗಿದ್ದಾರೆ. 'ಸತಿ-ಪತಿ ಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬಂತೆ ನಾಗಭೂಷಣ ಶಾಸ್ತ್ರಿಗಳವರ ದಾಂಪತ್ಯಯೋಗ ಅವರ ಶಿವಯೋಗ ಸಿದ್ಧಿಗೆ ಪೂರಕವಾಗಿದೆ. ವ್ಯಕ್ತಿಯ ವಿಕಾಸದ ಹಿನ್ನೆಲೆಯಲ್ಲಿ ಸ್ತ್ರೀಯ ಪ್ರೇರಣೆ, ಸ್ಫೂರ್ತಿಗಳು ಸದಾಕಾಲ ನಿಗೂಢವಾಗಿರುತ್ತವೆ. ಅವರ ಪತ್ನಿಯ ಗುಪ್ತ ಪತಿ ಪರಾಯಣತೆಯೂ ಶಾಸ್ತ್ರಿಗಳವರ ಜೀವನ ಗತಿ, ಮತಿ, ಪ್ರಗತಿಗಳಿಗೆ ಚಾಲನೆಯನ್ನಿತ್ತಿದೆಯೆಂಬುದನ್ನು ಸ್ಮರಿಸಬೇಕಾದುದು ಅನಿವಾರ್ಯ ವಾಗಿದೆ.

ಅಪಾರ ಬಂಧು ಬಳಗ ಪಡೆದ ಶಾಸ್ತ್ರಿಗಳವರು ಸರ್ವರನ್ನು ಏಕದೃಷ್ಟಿಯಿಂದ ನೋಡುತ್ತಾರಲ್ಲದೆ, ಪ್ರೀತಿ-ವಿಶ್ವಾಸಗಳಿಂದ ಹೃದಯ ಸಂಪತ್ತನ್ನು ಹಂಚಿಕೊಡುತ್ತ ಲಿದ್ದಾರೆ. ಕೇವಲ ಬಂಧು ಬಳಗಕ್ಕಷ್ಟೇ ಅಲ್ಲ, ಅವರು ಅಸಂಖ್ಯ ಶಿಷ್ಯರ ಬಳಗದ ಕುಶಲ ಕ್ಷೇಮ ಸಮಾಚಾರಗಳನ್ನು ಅವರ ಬೆನ್ನಮೇಲೆ ಕೈಯಿರಿಸಿ ಒಂದು ಊರಿ ನಲ್ಲಿಯ ಎಲ್ಲ ಶಿಷ್ಯರ ವಂಶಾಗತವನ್ನೆಲ್ಲ ಕೇಳದೇ ಎಂದೂ ಬಿಡುವವರಲ್ಲ. "ಸರ್ವೇ ಜನಾಃ ಸುಖಿನೋ ಭವಂತು" ಎಂಬುದೇ ಅವರ ಜೀವನದ ಸಂಕೇತವಾಗಿದೆ, ಸಕಲ ಜೀವಿಗಳ ಲೇಸನ್ನು ಬಯಸುವ, ಮಾನವತೆಯ ಅಂತಃಕರುಣೆ, ವಿಶಾಲ ಮನೋ ಭಾವನೆಗಳನ್ನು ಹೊತ್ತ ಧೀಮಂತ ವ್ಯಕ್ತಿತ್ವ ಇವರದಾಗಿದೆ.

ಪ್ರಸ್ತುತ ಸಮಯದಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳಂತಹ ಶಿವಾನುಭವಿ ಅಗ್ರೇ ಸರರು ಅಪರೂಪ. ನಡೆ-ನುಡಿಗಳೊಂದಾದ ಅವರು ವೀರಶೈವ ಧರ್ಮದ ತತ್ತ್ವ ಗಳನ್ನು ಸರಳ, ಸುಗಮ, ಸಹಜ ರೀತಿಗಳಿಂದ ಎಳೆ ಎಳೆಯಾಗಿ ಬಿಡಿಸಿ, ಸಮಾಜದ ಮನೆ-ಮನೆಗಳನ್ನು ತಲುಪಿಸುವ ಕಾರ್ಯದಲ್ಲಿ ಅಪ್ರತಿಮ ಸಾಧನೆ ಪಡೆದಿದ್ದಾರೆ. ವೀರಶೈವ ಧರ್ಮದ ಸಂಚಾರಿ ವಿಶ್ವಕೋಶವಾಗಿದ್ದಾರೆ. ಲಿಂ. ವೈ. ನಾಗೇಶ ಶಾಸ್ತ್ರಿಗಳ ವರು, ಬಳ್ಳಾರಿ, ಅವರಷ್ಟೇ ಸಮರ್ಥ ರೀತಿಯಿಂದ ತತ್ತ್ವದರ್ಶನ ಮಾಡಿಸುವವರಲ್ಲಿ ಇವರೊಬ್ಬರೇ ಎಂಬುದು ನನ್ನ ಖಚಿತ ಸಾಧಾರ ರೂಪ ಅಭಿಪ್ರಾಯ. ಲಿಂ. ಮೃತ್ಯುಂಜಯಪ್ಪಗಳವರು ಶಾಸ್ತ್ರಿಗಳವರನ್ನು ಪ್ರತಿಯೊಂದು ತತ್ತ್ವನಿರ್ದೇಶನಕ್ಕೆ ಸಾಕ್ಷಿರೂಪವಾಗಿ ಉದಾಹರಿಸುತ್ತಿದ್ದರು. ಶಾಸ್ತ್ರಿಗಳವರದು ಶುಷ್ಕ, ಪ್ರಯೋಗ ರಹಿತ ಜ್ಞಾನವಲ್ಲ. ಕ್ರಿಯಾಶೀಲ ಜ್ಞಾನಿಗಳಿವರು. ಶ್ರೀ ಮುರುಘಾಮಠದಲ್ಲಿ

ಅಷ್ಟೇ ಅಲ್ಲದೆ, ಸರ್ವ ಸಾಮಾನ್ಯವಾಗಿ ಕರ್ನಾಟಕದ ಯಾವುದೇ ಮಠಗಳಲ್ಲಿ, ಗ್ರಾಮ, ನಗರಗಳಲ್ಲಿ, ಶಿವಾನುಭವ ಸಮ್ಮೇಲನದಲ್ಲಿ, ಪುರಾಣ-ಪ್ರವಚನಗಳಲ್ಲಿ, ಯಾತ್ರಾ ಮಹೋತ್ಸವಗಳಲ್ಲಿ ಶಾಸ್ತ್ರಿಗಳವರ ಶಿವಾನುಭವ ಸೇವೆಯಿಲ್ಲದೆ ಹೋದರೆ ಅವೆಲ್ಲ ಅಪೂರ್ಣ ಎಂಬುದು ಸರ್ವ ವಿದಿತವಾಗಿದೆ. ಕಾರ್ಯಕ್ಷೇತ್ರದ ಹರವು ಹರಡಿದ, ಗುರು-ವಿರಕ್ತರಿಗೆ, ಭಕ್ತ-ಮಹೇಶ್ವರರಿಗೆ ಅಧಿಕಾರಯುತವಾಗಿ ಕಿವಿಮಾತುಗಳನ್ನು ಸಹ ಹೇಳುವ ಮನೋಧಾರ್ಢ್ಯ, ಆತ್ಮವಿಶ್ವಾಸಗಳು ಇವರಲ್ಲಿವೆ.

ಪಂ. ನಾಗಭೂಷಣ ಶಾಸ್ತ್ರಿಗಳವರು ತಮ್ಮ ಕಾರ್ಯ ಪ್ರಾರಂಭಿಸಿದ್ದು ಗದುಗಿನಲ್ಲಿ. ಅಲ್ಲಿಯ ಹಡಗಲಿಮಠದಲ್ಲಿ ವಾಸ್ತವ್ಯ. ಸಂಸ್ಕೃತ ಮಹಾವಿದ್ಯಾಲಯದಲ್ಲಿ ಪ್ರಾಧ್ಯಾಪಕ ವೃತ್ತಿ. ಅಲ್ಲದೆ ಒಂದು ಅಪೂರ್ವ ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ ಕ್ರಾಂತಿಗೆ ನಾಂದಿ. ಸರ್ವಜನ ಪರಿಚಿತರಾದ ಇವರು ಸರ್ವರ ಹೃದಯಸಿಂಹಾಸನದ ಅಧಿಪತ್ಯ ಪಡೆದ ಇವರೆಂದರೆ ಅವರಿಗೆಲ್ಲ ಪಂಚಪ್ರಾಣ. ಅಲ್ಲಿಂದಲೇ ನಾಡಿನ ಸಹಸ್ರಾರು ಬಾಲಕರಿಗೆ ಧರ್ಮ-ಸಾಹಿತ್ಯಗಳ ಸ್ಥೂಲಪರಿಚಯ ಮಾಡಿಸಿದರು. ಲಕ್ಷ್ಮೀಪುತ್ರರಾದವರಿಗೆಲ್ಲಾ ಸರಸ್ವತಿಯ ಪರಿಚಯ ಮಾಡಿಕೊಟ್ಟರಲ್ಲದೆ, ನಡೆ-ನುಡಿಗಳನ್ನು ಕಲಿಸಿದರು. ಸರ್ವ ಪ್ರಥಮವಾಗಿ ಲಿಂ. ಮ. ನಿ. ಪ್ರ. ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರ ಆಣತಿಯಂತೆ ಅಖಿಲ ಭಾರತ ಶಿವಾನುಭವ ಸಂಸ್ಥೆಯ ಮುಖಪತ್ರಿಕೆಯಾದ 'ಸಾವಧಾನ' ಪಾಕ್ಷಿಕ ಪತ್ರಿಕೆಯು ಗದುಗಿನಲ್ಲಿ ಮುದ್ರಿತವಾಗಿ, ಧಾರವಾಡದಲ್ಲಿ ಬಿಡುಗಡೆಯಾಯಿತು. ಅದರ ಸಂಪಾದಕರಾಗಿ ಅಂದಿನಿಂದ ಈಗಲೂ ಶಾಸ್ತ್ರಿಗಳವರೇ ಕಾರ್ಯನಿರ್ವಹಿಸುತ್ತಲಿದ್ದಾರೆ. ೧೩ ನೆಯ ವರುಷದಲ್ಲಿ ಪಾದಾರ್ಪಣ ಮಾಡಿದ 'ಸಾವಧಾನ' ಪತ್ರಿಕೆ ಚಾಚೂ ತಪ್ಪದೆ ನಿಯಮಿತವಾಗಿ ಪ್ರಕಟವಾಗುತ್ತಲಿದೆ.

ಪತ್ರಿಕಾ ಪ್ರಕಟನೆ, ಸಂಪಾದನೆ, ವಿಸ್ತರಣೆಗಳು ದುಸ್ಸಾಧ್ಯ ಕಾರ್ಯಗಳಲ್ಲಿ ಒಂದಾಗಿವೆ. ಅದರಲ್ಲಿ ಧಾರ್ಮಿಕ ವಿಷಯಗಳ ಪತ್ರಿಕೆಗಳನ್ನು ಪ್ರಕಟಿಸುವದಕ್ಕೆ ಎಂಟೆರ್ದೆಯುಳ್ಳವರೇ ಬೇಕು. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ, ಜೀವನ ಮೌಲ್ಯಗಳು ರೂಪಾಂತರಗೊಳ್ಳುತ್ತಿರುವ ಸಂದಿಗ್ಧ ಸಮಯದಲ್ಲಿ, ಶುಷ್ಕಜ್ಞಾನವೆಂಬಂತಿರುವ ಧರ್ಮದ ತತ್ತ್ವಗಳಷ್ಟನ್ನೇ ಮೀಸಲಾಗಿರಿಸಿಕೊಂಡು ಪತ್ರಿಕೆ ನಡೆಯಿಸಿಕೊಂಡು ಬಂದುದು ಅತ್ಯಂತ ಗಮನಾರ್ಹ, ಪ್ರಶಂಸನಾರ್ಹ. ಇವರ ಸಂಪಾದಕೀಯಗಳು ಕಾಲಕರಗನುಸರಿಸಿ ಎಚ್ಚರಿಕೆ, ಸಂತಾಪ, ಆತ್ಮನಿರೀಕ್ಷಣೆ, ಸಂಕಲ್ಪ, ಗುರಿ ಸಾಧನೆ, ನಾಡಿನಾದ್ಯಂತ ಜರಗುವ ಶಿವಾನುಭವ ಕಾರ್ಯಗಳಿಗೆ ಪ್ರೇರಣೆ, ಹಿಂದಿನ, ಇಂದಿನ, ಮುಂದಿನ ಶಿವಯೋಗಿಗಳವರ ಜೀವನ ಪರಿಚಯ ಹೀಗೆ ಚರಿತ್ರಾರ್ಹ, ಐತಿಹಾಸಿಕ, ಪೌರಾಣಿಕ, ವೇದಾಂತಿಕ ಸಿದ್ಧಾಂತಗಳನ್ನು ಪಸರಿಸುತ್ತಲಿವೆ. ಸಾಕಷ್ಟು ವೈವಿಧ್ಯ

ಮಯ ವಿಷಯಗಳ ವೈಶಾಲ್ಯಗಳಿಂದ 'ಏಕಮೇವ ನ ದ್ವಿತೀಯ' ಎಂಬಂತೆ ಸಾಗಿ ಬಂದಿದೆ ಸಾವಧಾನ. ಸಮಾಧಾನ ಚಿತ್ತ ಸಂಪಾದಕರಿಂದ 'ಸಾವಧಾನ' ಶೀವ್ರಗತಿಯಲ್ಲಿ ತನ್ನ ಸಂಕಲ್ಪ ಸಿದ್ಧತೆಯೆಡೆಗೆ ಸಾಗಿದೆಯೆಂಬುದೊಂದು ಸಾಧನೆಯಹಾಗಿದೆ' ಇವರ ಅಮೋಘ ಸೇವೆಯನ್ನು ಗಮನಿಸಿ, ರಾಜ್ಯ ಸರಕಾರ ಇವರಿಗೆ ೫೦೦ರೂ.ಗಳ ಮಾಸಾಸನ ಕೊಡಮಾಡಿ ತನ್ನ ಗೌರವವನ್ನು ಹೆಚ್ಚಿಸಿಕೊಂಡದ್ದನ್ನು ಇಲ್ಲಿ ಸ್ಮರಿಸಬಹುದು.

ಗದುಗಿನಿಂದ ಶಾಸ್ತ್ರಿಗಳವರ ಕಾರ್ಯಕ್ಷೇತ್ರ ಧಾರವಾಡದತ್ತ ಹರಡಿತು. ಅಲ್ಲಿ ಲಿಂ. ಮೃತ್ಯುಂಜಯಪ್ಪಗಳವರ ಕೃಪಾಕಟಾಕ್ಷದಲ್ಲಿ ಸುಪ್ತ ಪ್ರತಿಭೆಯ ಸುಗಂಧ ದಶದಿಕ್ಕುಗಳಿಗೆ ಪಸರಿಸಿತು. ಅಲ್ಲದೆ ಸದಾಕಾಲ ಇಂತಹ ಪಂಡಿತರ ದರ್ಶನ-ಸ್ಪರ್ಶನ-ಸಂಭಾಷಣೆಗಳು ಭಕ್ತಿಕುಲಕ್ಕೆಲ್ಲ ಅವಶ್ಯವೆಂದು ಮನಗಂಡು ದೊಡ್ಡ ಅಪ್ಪಗಳವರು ಶಾಸ್ತ್ರಿಗಳವರನ್ನು ಶ್ರೀ ಮುರುಘಾಮಠದಲ್ಲಿಯೇ ಇರಿಸಿಕೊಂಡರು. ಅವರ ಜೀವನಕ್ಕೆ ಹೊಸದಾರಿಯನ್ನು ಒದಗಿಸಿದರು. ಇದು ಅವರ ಲೌಕಿಕ ಅಲೌಕಿಕ ಜೀವನಗಳೆರಡರ ಸರ್ವಾಂಗೀಣ ಪ್ರಗತಿಗೆ ಸಾಧನವಾಯಿತು. ದಿನಂಪ್ರತಿ ಮುಂಜಾನೆ ಶಿವಾನುಭವ ಪ್ರವಚನ ಮಠದಲ್ಲಿ ವರ್ಷದುದ್ದಕ್ಕೂ ನಡೆಯುತ್ತಬಂದಿದೆ. ತ್ರಿವಿಧ ದಾಸೋಹಮೂರ್ತಿಗಳಾದ ಲಿಂ. ಮೃತ್ಯುಂಜಯಪ್ಪಗಳವರ ಜ್ಞಾನದಾಸೋಹದಲ್ಲಿ ಶಾಸ್ತ್ರಿಗಳವರ ಸೇವೆ ಅಡಗಿಹೋಯ್ತು. ಜತೆಜತೆಗೆ ಕರ್ನಾಟಕ ವಿಶ್ವವಿದ್ಯಾಲಯದ ವಚನ ವಾಙ್ಮಯ ಶಾಖೆ, ನಂತರ 'ಬಸವ ಪೀಠ'ಗಳಲ್ಲಿಯ ಕಾಯಕ ಶಾಸ್ತ್ರಿಗಳವರ ಪಾಲಿಗೆ ಬಂದ ಪಂಚಾಮೃತವಾಯಿತು.

ಪಂ. ನಾಗಭೂಷಣ ಶಾಸ್ತ್ರಿಗಳವರದು ಅಪರೂಪದ ಬಹುಮುಖ ವ್ಯಕ್ತಿತ್ವ. ಈಗ ಅವರು ಸಮಾಜದ ಆಸ್ತಿ. ಶ್ರೀ ಮ. ನಿ. ಪ್ರ. ಮಹಾಂತಪ್ಪಗಳವರು ಸದಾಕಾಲ ಅವರ ಯೋಗಕ್ಷೇಮಗಳನ್ನು ವಿಚಾರಿಸುತ್ತ, ಅವರನ್ನು ತುಂಬಾ ಕಾಳಜಿಯಿಂದ ಜೋಪಾನಮಾಡುತ್ತಲಿದ್ದಾರೆ. ಸರಸ ಸಜ್ಜನಿಕೆಗಳು ಶಾಸ್ತ್ರಿಗಳವರಲಿ ಪಾತಕಲಿಯುತ್ತಲಿವೆ. ೭೫ ವರ್ಷಗಳಾಗಿದ್ದರೂ ಅವರಲ್ಲಿ ೨೭ ವರ್ಷದವರಲ್ಲಿರಬಹುದಾದ ಉತ್ಸಾಹದ ಕಾರಂಜಿ ಪುಟಿಯುತ್ತಲಿದೆ. ಕೋಪ-ತಾಪಗಳ ಸುಳಿವಿಲ್ಲದ, ಪ್ರಸಾದಿಗಳಾದ ಅವರು ಜೀವನದಲ್ಲಿ ಯಾವ ಯೋಗಿಗೂ ಕಡಿಮೆಯಿಲ್ಲದಷ್ಟು ಕಟ್ಟು-ನಿಟ್ಟುಗಳನ್ನು ನಡೆಸುತ್ತಲಿದ್ದಾರೆ. ಈ ತಲೆಮಾರು ಒಂದು ಹೋಯಿತೆಂದರೆ ನಂತರ ಇಂತಹ ಶಾಸ್ತ್ರಿಗಳವರು ನಮ್ಮ ಸಮಾಜಕ್ಕೆ ದೊರಕದೆ ಹೋಗುವರಲ್ಲ ಎಂಬುದೊಂದೇ ನನಗೆ ಚಿಂತೆ. ಈ ಪಾಂಡಿತ್ಯ, ಶಾಸ್ತ್ರತ್ವಗಳು ಪರಂಪರಾಗತವಾಗಿ ಬೆಳೆದು ಬರುವ

ಸದವಕಾಶಗಳ ಕೊರತೆಯೊಂದು ದುಗುಡವನ್ನುಂಟು ಮಾಡುತ್ತಿದೆ. ಆದ
ಇಂತಹ ಅನರ್ಘ್ಯ ರತ್ನದ ಪರಿಚಯವನ್ನು ಜೀವಂತವಿದ್ದಾಗಲೇ ಸಮಾಜಕ್ಕೆ ಮಾಡಿ
ಕೊಡುತ್ತಲಿರುವ ಶ್ರೀ ಮ. ನಿ. ಪ್ರ. ಮಹಾಂತಪ್ಪಗಳವರ ಲಿಂಗನಿಷ್ಠ ಸಮಾಜಸೇವಾ
ಚಾರಿತ್ರ್ಯದಲ್ಲೊಂದು ಅವಿಸ್ಮರಣೀಯವಾಗಿದೆ. ಅಂತಹ ಸಂಕಲ್ಪಕ್ಕೆ ಅನಂತ
ಶರಣು ಶರಣಾರ್ಥಿಗಳು.

೦ ೦

## ಶರಣ

"ಸಾವಧಾನ"ದಿಂದ ಜನರ ಬಾಳನ್ನು ಸಾರ್ಥಕಗೊಳಿಸುತಿಹರು,
ಧರ್ಮ ಸದಾಚಾರದ ಏಳ್ಗೆಗಾಗಿ ಸುರುಸುತಿಹರು ಬೆವರು,
ಶರಣ ಜೀವನವ ಸಾಗಿಸುವ ಇವರ ಬಾಳು ಬಹು ಚೆಂದ
ಎಲೆಯ ಮರೆಯ ಹೂವಾಗಿ ಹರಡುತಿಹರು ಸಂಸ್ಕೃತಿಯ ಸುಗಂಧ.

—ಬಸವಣ್ಣ ಹೂಗಾರ.

## ಬ್ರಹ್ಮಚಾರಿ

ಬ್ರಹ್ಮಣಿ + ಚರತಿ + ಇತಿ = ಬ್ರಹ್ಮಚಾರಿ; ವಿಷಯಗಳಲ್ಲಿ ಚರಿಸದೆ ಬ್ರಹ್ಮನಲ್ಲಿ ಚರಿಸುವವರು ಬ್ರಹ್ಮಚಾರಿಗಳು;

—ಪಂ. ನಾಗಭೂಷಣ ಶಾಸ್ತ್ರಿಗಳವರು.

(ಸಾವಧಾನ, ೩೧-೫-೧೯೭೦.)

# ನರಶ್ರೇಷ್ಠ ನಾಗಭೂಷಣ

—ಪ್ರೊ. ಶಂಕರ ತೊರಗಲ್ಲ

ಜ್ಞಾನ ಬುತ್ತಿಯನ್ನು ಇಡೀ ಸಮಾಜಕ್ಕೆ "ಸಾವಧಾನ"ದಿಂದ ನೀಡುತ್ತ ಜೀವ ಸವೆಸಿದ ಪಂಡಿತ ನಾಗಭೂಷಣ ಶಾಸ್ತ್ರಿಗಳು ಆಧ್ಯಾತ್ಮಿಕ ಪ್ರಪಂಚದಲ್ಲಿ ತೀರ ಎತ್ತರದ ವ್ಯಕ್ತಿಗಳಾಗಿದ್ದಾರೆ. ಇವರ ನರ ನಾಡಿಗಳಲ್ಲಿ ಲಿಂ. ಮೃತ್ಯುಂಜಯ ಅಪ್ಪಗಳ ಕೃಪಾಶೀರ್ವಾದ ಹರಿಯುತ್ತಿದೆ. ಮಹಾಂತಪ್ಪಗಳ ಮಾತೃಪ್ರೇಮ ಇವರ ಮೇಲಿರುವದರಿಂದ ಶಿವಾನುಭವದ ಸೂತ್ರ ಹಿಡಿದು ಜನ ಹೃದಯವನ್ನು ಸೂರೆಗೊಂಡಿದ್ದಾರೆ.

ಇಂದಿನ ಕಾಲದಲ್ಲಿ ಬರೆಯುವದಕ್ಕೆ ವೇಳೆಯ ಅಭಾವ. ಅದರಲ್ಲಿಯೂ ಆಧ್ಯಾತ್ಮಿಕ ವಿಚಾರವಾಗಿ ಬರೆಯುವದು ಓದುವದು ಅಸಾಧ್ಯವಾದಂತಿದೆ. ಆದರೆ ಪಂ. ನಾಗಭೂಷಣರ ಲೇಖನಿ ಜನಮನವನ್ನು ಬಡಿದೆಬ್ಬಿಸಲು ಬಲು ಹರಿತವಾಗಿದೆ. ವಿಶೇಷವಾಗಿ ತತ್ತ್ವವನ್ನು ಪ್ರತಿಪಾದಿಸುವಲ್ಲಿ, ಸರಳಗನ್ನಡದಲ್ಲಿ ಶ್ರೀಸಾಮಾನ್ಯನಿಗೂ ತಿಳಿಯುವಂತೆ ಅಭಿವ್ಯಕ್ತ ಮಾಡುವಲ್ಲಿ ಇವರದು ಎತ್ತಿದ ಕೈ. ಸಾವಧಾನ ಸಂಪಾದಕರಾಗಿ ಅನೇಕ ವರ್ಷ ಸೇವೆ ಸಲ್ಲಿಸುತ್ತ ಬಂದಿದ್ದಾರೆ. ವೀರಶೈವ ಧರ್ಮದ ಭವಿಷ್ಯತ್ತಿನ ಬಗ್ಗೆ ನಿರೂಪಣೆ ಮಾಡಿ ಇತ್ತೀಚಿನ ಪರಿಸ್ಥಿತಿಯನ್ನು ಕಂಡು ಕನಿಕರಗೊಂಡಿದ್ದಾರೆ. ಲಿಂಗಧಾರಿಗಳ ಜಾಗರೂಕತನ ಧರ್ಮರಕ್ಷಣೆಗೆ ಎಷ್ಟು ಅವಶ್ಯವೆಂದು ಶಾಸ್ತ್ರಗಳ ಮುಖಾಂತರ ಉದಾಹರಣೆಗಳೊಂದಿಗೆ ನೀಡಿ ಧರ್ಮಜಾಗೃತಿಗಾಗಿ ಎಚ್ಚರಿಸಿದ್ದಾರೆ. ಗುರು-ವಿರಕ್ತರಲ್ಲಿಯ ಭೇದವಳಿಯದ ಸಣ್ಣತನದಿಂದ ಶಾಂತಿ ದುರ್ಲಭವೆಂದಿದ್ದಾರೆ. ಇವೆರಡು ಸಮಾಜದ ಎರಡು ಚಕ್ಷುಗಳು. ವೀರಶೈವ ಧರ್ಮಸ್ಥಿರತೆಗೆ ಇವು ಅಭೇದ ಸ್ವರೂಪದಲ್ಲಿ ನಡೆಯಬೇಕಾಗಿದೆ.

ಪೂಜ್ಯ ಮೃತ್ಯುಂಜಯ ಅಪ್ಪಗಳ ಸನ್ನಿಧಾನದಲ್ಲಿ ನಾಗಭೂಷಣರು ಹೆಮ್ಮರದ ಷಡಿನೆಳಲಿನಲ್ಲಿದ್ದವರು, ಅಪ್ಪಗಳ ಆದೇಶದಂತೆ ಭೂಷಣ ಪರೀಕ್ಷೆಗಳನ್ನು ನಡೆಸಿದ

ರಲ್ಲದೆ ಶಾಸ್ತ್ರಸಮ್ಮತ ತತ್ವಗಳನ್ನು ಹಾಗೆ ಸುಲಭ ರೀತಿಯಲ್ಲಿ ಆಚಾರ-ವಿಚಾರಗಳ ನಿಲುಕುವಂತೆ ವಿದ್ಯಾರ್ಥಿಗಳಿಗೆ ಬೋಧಿಸಿದ್ದಾರೆ. ಅವರ ಹೃದಯಗಳನ್ನು ಅರ ಸಿದ್ದಾರೆ. ಅಜ್ಞಾನದ ಪರೆ ಹರಿಯಬೇಕಾದರೆ, ಇಂದಿನ ವೈಜ್ಞಾನಿಕ ಯುಗದಲ್ಲಿ ನಂಬಿಗೆಯನ್ನೇ ನಾಶಮಾಡಿಕೊಂಡ ನರನಿಗೆ ಹಾಗೂ ಸಾಧಕನಿಗೆ ಇಂಥ ಶಾಸ್ತ್ರಗಳ ನಿಷ್ಠುರವಾದ ವಿಚಾರಗಳು ಬಹಳ ಅವಶ್ಯವಾಗಿವೆ.

ವಯೋವೃದ್ಧರೂ, ಜ್ಞಾನವೃದ್ಧರೂ ಆದ ನಾಗಭೂಷಣರಲ್ಲಿ ನಗೆ ಚಿಮ್ಮು ತ್ತಿದೆ. ಸದಾ ಹಸನ್ಮುಖಿಗಳು. ಧಾರ್ಮಿಕ ವಿಚಾರಗಳಿಂದ (ಲೇಖಕನಿಗೆ ಅವು ಕಬ್ಬಿಣದ ಕಡಲೆಯಂತೆ ಕಠಿಣವೆನಿಸಿದ್ದವು) ಬೇಸರಾದ ಮನಸ್ಸಿಗೂ ಹೊಸತನ ತುಂಬಿ ಹೃದಯಕ್ಕೆ ಶಾಂತಿ ಸಮಾಧಾನ ನೀಡುವ ಕಲೆ ಇವರದಾಗಿದೆ. ಇದಕ್ಕೆಲ್ಲ ಕಾರಣ ಏನು ಎಂದಾಗ ಅವರಿಂದ ಹೊರಡುವ ಸೌಮ್ಯವಾದ ಎರಡೇ ನುಡಿ. ಒಂದು ಪೂಜ್ಯ ಅಪ್ಪಗಳ ಕೃಪೆಯಿಂದ. ಇನ್ನೊಂದು ಶಾಂತಸಾಗರಕ್ಕೂ ಮಿಕ್ಕಿದ ಸಮಾಧಾನ ಸಂಪಾದಿಸಿದ ಮಹಾಂತ ಅಪ್ಪಗಳ ಕರುಣೆಯಿಂದ.

ವಿದ್ಯೆಗೆ ವಿನಯವೇ ಭೂಷಣವೆಂಬಂತೆ ವೇದ ಶಾಸ್ತ್ರಗಳನ್ನು ಅಡಗಿಸಿಕೊಂಡ ನಾಗಭೂಷಣರಿಗೆ ವಿನಯವೇ ದೊಡ್ಡ ಆಸ್ತಿಯಾಗಿದೆ. ಪಂಡಿತ ರತ್ನರಾಗಿದ್ದಾರೆ ಇವರ ಸೇವೆಯನ್ನು ನಮ್ಮ ಸಮಾಜ ಪಡೆದುಕೊಳ್ಳಬೇಕಷ್ಟೇ ? ಮಹಾತ್ಮರ ಪರಿ ಸರದಲ್ಲಿದ್ದವರು ಕ್ರಮೇಣ ಮಹಾತ್ಮರಾಗುವದುಂಟು. ಸಿಪ್ಪೆ ಉಪ್ಪಿನ ಸಂಗದಿಂದ ಉಪ್ಪು ಆಗುವಂತೆ ಸಂತರ ಸೇವೆಯಲ್ಲಿದ್ದವ ಸಂತನಾಗಲಾರನೇ ? ಲಿಂಗನೋಟ ನಾಟದಿಂದ ಅಂಗ ಲಿಂಗವಾಗುವಂತೆ ನರಶ್ರೇಷ್ಠ ನಾಗಭೂಷಣರ ಸೇವಾಭಾವನೆ ಪೂಜ್ಯ ಮೃತ್ಯುಂಜಯ ಅಪ್ಪಗಳು ತಮ್ಮವನನ್ನಾಗಿ ಮಾಡಿಕೊಳ್ಳಲಾರರೆ !

ಮೋಜಿಗಾಗಿ, ಶಬ್ದಾಲಂಕಾರಕ್ಕಾಗಿ ಸಾಹಿತ್ಯ ನಿರ್ಮಾಣವಾಗಬಾರದು. ಸಾಹಿತ್ಯದ ಪರಮ ಗುರಿ ವ್ಯಕ್ತಿಗಳ ಆತ್ಮೋನ್ನತಿ. ಶಾಸ್ತ್ರಗಳವರು ಆತ್ಮದ ಬೆಳಕನ್ನು ಕಾಣಲು ಅನುಕೂಲವಾಗುವ ಸಾಹಿತ್ಯ ಸಂಪಾದನೆಗೆ ಆದ್ಯತೆ ನೀಡಬೇಕೆಂದಿದ್ದಾರಲ್ಲದೆ ಅಂತಹ ಕೃತಿಗಳನ್ನು ಕನ್ನಡಿಗರಿಗೆ ದಯಪಾಲಿಸಿದ್ದಾರೆ ಇಂತಹ ವಿದ್ವನ್ಮಣಿಗಳನ್ನು ಗೌರವಿಸುವದು ಸಮಾಜದ ಆದ್ಯ ಕರ್ತವ್ಯವಾಗಿದೆ. ಇವರ ಅಮೃತ ಮಹೋತ್ಸವ ವಷ್ಟೇ ಅಲ್ಲ, ಶತಮಾನೋತ್ಸವವೂ ಜರಗುವಂತೆ "ಅಪ್ಪಗಳು" ನರಶ್ರೇಷ್ಠ ನಾಗ ಭೂಷಣರಿಗೆ ದೀರ್ಘಾಯುಷ್ಯವನ್ನು ಕರುಣಿಸಲಿ !

# ಸೌಜನ್ಯ ಶೀಲ

---

—ಶ್ರೀ ಅಣ್ಣಾರಾಯ ಸಾಲಿಮನಿ

ಪಂಡಿತರಿವರು; ಸಂಸ್ಕೃತ ಕನ್ನ-
ಡಿ ಯಂತಿಹರು ; ಉನ್ನ-
ತ ಮಾರ್ಗದರ್ಶಿಗಳಿವರು.

ನಾನೆಂಬಹಂಕಾರವು ಇವರಿಗೆ ಗೊತ್ತಿಲ್ಲ.
ಗಣ್ಯ ಪುರುಷರು; ಅಹುದು—ಪುಣ್ಯ ಪುರುಷರು.
ಭೂತಾಯ ಒಡಲಲ್ಲಿ ಬೆಳೆದ—ನುಡಿ ಭೂ-
ಷಣವೊಂದೇ ಇವರ ಭೂಷಣ. ಕ್ಷಣಕ್ಷ-
ಣದಲ್ಲಿಯೂ ನೆನೆಯಬೇಕಾದ ಸುಕೃತ ಮೂರ್ತಿ.

ಶಾರದಾಂಬೆಯ ಸವಿನುಡಿಗಲಿತು, ಬೋಧಿಸುವ, ಶಾ
ಸ್ತ್ರಿಗಳಿವರು; ನಯವಿನಯ ಸಂಪನ್ನರು.
ಗಣಗುಣಗಳಲ್ಲಿ ಮಾನ್ಯರು; ಧನ್ಯರು— ಅ
ಳು-ನಗುಗಳಿಲ್ಲದ ಸೌಜನ್ಯ ಶೀಲರಿವರು-

ಪಂಡಿತ
ನಾಗಭೂಷಣ
ಶಾಸ್ತ್ರಿಗಳು !

# ಶಿವತತ್ತ್ವ ಚಿಂತಾಮಣಿ

—ಶ್ರೀ ಕಟ್ಟಿಬಸಪ್ಪ ಬಾಲಪ್ಪಾ ಬಜಿ
"ಮಧುರ ಕವಿ"

ಎಪ್ಪತ್ತು ವರ್ಷಗಳು ಭರಿಸಿ ।
ಇಪ್ಪತ್ತರ ಹರೆಯದ ಹುರುಪಿನಲಿ ।
ಸೊಪ್ಪತ್ತಿನ ಕಾರ್ಯದ ಚಿಲುಮೆ ಜಿಗಿಯುತಿದೆ ॥೧॥

ಶಿವಕಾರುಣ್ಯ ಕಾರ್ಯದ ನಿರ್ಝರತೆ ತುಂಬಿ ।
ಭವರೋಗ ನಿವಾರಕ ಉಪದೇಶವನೀಯುತ್ತ ।
ಶಿವಯೋಗಿ ಶ್ರೀಮದಥಣಿ ಕಾರುಣ್ಯದಲ್ಲಿ ನಲಿಯುತಿದೆ ॥೨॥

ಮಠ ಮಾನ್ಯಗಳು ಜಾಗ್ರತೆ, ನೀವು ನೀಡಿದ ಸಲಹೆ ।
ಕುಠಾರ ಪ್ರಹಾರವಾಗಿ ಎಚ್ಚತ್ತರು ।
ಶಾಟಿ, ಕಮಂಡಲ ಧರಿಸಿ ಧ್ಯಾನಿಸದೆ ಜನಜಾಗ್ರತೆ ಮಾಡಿದರು ॥೩॥

ಸಾವಧಾನ ಪತ್ರಿಕೆಯು ಅಚ್ಚಕೂಟದಲ್ಲಿ ನಿಚ್ಚಳ ।
ಶಿವಸಾನ್ನಿಧ್ಯಕ್ಕೆ ಸೇರುವವರ ವಿಚಾರ ಸಂಬಂಧಿ ।
ಕಾವ್ಯರಸಿಕತೆ ಲೇಖನ ಸೃಷ್ಟಿಯ ಸಾಹಿತ್ಯ ಬೆಳೆಯಿಸಿದಿರಿ ॥೪॥

ಮೃತ್ಯುಂಜಯ ಶಿವಯೋಗಿಗಳ ಪ್ರೇರಣೆಯಿಂದ ।
ಶೃತಿ ನಿನಾದ ಕಾವ್ಯಗಂಗೆ ಥೈ ತಕ ಥಿವಾ ತೋಂನ್ ।
ಧೃತಿಗೆಡದಂತೆ ತಾಳಲಯಬದ್ಧವಾಗಿ ಸರಾಗಮೇಳವನುಡಿಸಿದಿರಿ ॥೫॥

ಅಖಿಲ ಭಾರತ ಶಿವಾನುಭವ ಸಂಸ್ಥೆಯನ್ನು ಕಟ್ಟಿ ।
ನಿಖಿಲ ವೀರಶೈವರ ಧರ್ಮಪ್ರಭೆ ಮೂಡಿಸಿ ।
ಸಖತನ ಸಂಘಟನೆ ವೀರಶೈವರಲ್ಲಿ ಮೂಡಿಸಿದಿರಿ ॥೬॥

ಚಿತ್ರದುರ್ಗ, ದಾವಣಗೇರಿ, ಧಾರವಾಡ, ಬೆಳಗಾಂವ ।
ಛಾತ್ರ ವರ್ಗಗಳು ಶಿವಾನುಭವದ ಪರಿಪಾಠಗಳು ।
ಮಿತ್ರ ವೃಂದದ ಬೋಧಕ ಪಂಡಿತರಿಂದ ಸಲೆ ವೀರಶೈವ ಸಾಹಿತ್ಯ
ಪ್ರಸಾರಗೊಳಿಸಿದಿರಿ ॥೭॥

ಕಾಶೀ ವಿಶ್ವನಾಥನ ಸಾನ್ನಿಧ್ಯದಲ್ಲಿ ಧರ್ಮವಿಶಾರದ ।
ಈಶನೊಲಿಮೆಯ ಮತ ತತ್ವಗಳನ್ನು ಅಭ್ಯಾಸಿಸಿ ।
ದೇಶ ಸೇವೆಯಲಿ ಈಶ ಸೇವೆ ಇದೆ ಎಂಬುದನರುಹಿದಿರಿ ॥೮॥

ಕಟ್ಟಾಳು, ವ್ಯಾಯಾಮನಗಳು, ಅಂತೆಯೇ ಗಟ್ಟಿಯಾಗಿರುವ ।
ಶ್ರೇಷ್ಠ ಧರ್ಮ ಸಂಸ್ಕೃತಿಯನ್ನು ಪ್ರಸಾರಗೊಳಿಸಲು ।
ನಿಷ್ಠೆಯುಳ್ಳ "ಶರೀರ ಮಾದ್ಯಂ ಖಲು ಧರ್ಮ ಸಾಧನಂ" ಎಂಬ ಉಕ್ತಿಗೆ
ನೀವು ಸೂಕ್ತರಾಗಿದ್ದಿರಿ ॥೯॥

ನಾಗಭೂಷಣ ಅಂಕಿತನಾಮವು ಅನ್ವರ್ಥಕ್ಕೆ ತಕ್ಕ ।
ಸೊಗ ಶಿವಸಾಹಿತ್ಯ ನಿಮ್ಮಿಂದ ನಾಡಿಗೆ ನಿಲುಕಿದೆ ।
ನಿಗಮಾಗಮ ಶಾಸ್ತ್ರಕೋವಿದ ಪಂಡಿತೋತ್ತಮರು ನೀವು ॥೧೦॥

ಗುರುಕಾರುಣ್ಯದಲ್ಲಿ ಶಿವಕಾರುಣ್ಯ ಹೊಂದುವ ತತ್ತ್ವ ।
ತಿರುಳಿನ ಪರತರ ಶಿವತತ್ತ್ವ ಚಿಂತಾಮಣಿ ।
ನಿರ್ಮಲ ವಿಚಾರಗಳು ನಿಮ್ಮಿಂದ ನಾಡಿಗೆ ವಿಶ್ವ ಲಭಿಸಿತು ॥೧೧॥

ಧಾರವಾಡವು ಮರಿಕಲ್ಯಾಣವಾಯಿತು ।
ನರ, ನಾರಿಯರು ಹರನ ಪರತತ್ವ ತಿಳಿಯಲು ।
ವರಗುರು ಮೃತ್ಯುಂಜಯನ ಸಾನ್ನಿಧ್ಯದಲ್ಲಿ ಬರುವಂತೆ ಮಾಡಿದಿರಿ ॥೧೨॥

ಸಾವಧಾನದಲಿ ಯುಕ್ತವಿಚಾರಗಳ ಸಂಪಾದಕೀಯ ।
ಸಾವಧಾನ ಮಾಡಿತು ಜನರಿಗೆ ಸೂಕ್ತಸಲಹೆ ।
ಭವಬಾಧೆ ನೀಗಿಸುವ ವರವಿಚಾರಗಳಿಂದ ತುಂಬಿಸಿದಿರಿ ॥೧೩॥

ಪಂಡಿತ, ಕವಿ, ಗಮಕಿ, ಕೀರ್ತನಕಾರ, ನಾಟ್ಯ ।
ಮಂಡಿತ ವಿಚಾರಗಳ ಚರ್ಚಿಸಿ ಪ್ರಚುರಪಡಿಸಿ ।
ಮಂಡಲದಲ್ಲಿ ಪ್ರಸಾರಗೊಳಿಸಿ ಶಿವಸಾಹಿತ್ಯ ಬೆಳೆಯಿಸಿದಿರಿ ॥೧೪॥

ನಿಮ್ಮಿಂದ ಇನ್ನೂ ಹೆಚ್ಚಿನ ಕಾರ್ಯವು ।
ನಮಗೆ ನಿಲುಕಲಿ, ಆನಂದೋತ್ಸವಗಳು ।
ಎಮ್ಮಲ್ಲಿ ಭರಿಸಲಿ. ನವಚೇತನವುದಿಸಲಿ ॥೧೫॥

ನಿಮ್ಮ ಕೃಪೆಯು ಕಾರುಣ್ಯದಲ್ಲಿ ನಲಿಯುವ ।
ಎಮ್ಮ ಭಾಗ್ಯವು ಹೆಚ್ಚಲಿ, ಶ್ರೇಯ ದೊರೆಯಲಿ ।
ಸೊಮ್ಮಿನ ಶಿವಸಾಹಿತ್ಯದ ಮೇರುಗಿರಿಯನೇರುವ ಭಾಗ್ಯ
ದೊರೆಯಲಿ ॥೧೬॥

ವಚನ ಸಾಹಿತ್ಯ ಸಂಸ್ಕರಣ ಕಾರ್ಯದ ।
ಮೆಚ್ಚಿನ ಧೋರಣೆಯು ವಿಶ್ವವಿದ್ಯಾಲಯದ ।
ಹೆಚ್ಚಿನ ಶಕ್ತಿಯ ಸಂಘಟನೆ ನಿಮ್ಮಿಂದಾಗಲಿ ॥೧೭॥

ಹನ್ನೆರಡನೆಯ ಶತಮಾನದ ಬಸವಕಾಲ ।
ಇನ್ನಾದರೂ ಮುಂದೆ ಬರಲಿ, ಅಂದಿನ ।
ಜನಜಾಗ್ರತೆ ಮುನ್ನಾದತೂ ಆಗಲಿ ಭರದಲಿ ॥೧೮॥

ನಾಡಗುಡಿಯು ಧರ್ಮಪತಾಕೆ ಹಾರಲಿ ।
ಒಡನಾಡಿಗಳೆಲ್ಲ ಆನಂದದಿಂದ ಬಾಳಲಿ ।
ಮೃಡನ ಕಾರುಣ್ಯವನ್ನೇ ಹೊತ್ತು ದಿನನಿತ್ಯ ನಲಿಯಲಿ ॥೧೯॥

ವೀರಶೈವ ಧರ್ಮದಲ್ಲಿರುವ ತತ್ತ್ವವಿಚಾರ ।
ವರಮತಿತಾರ್ಥಗಳು ಬಾಳಿನ ಸತ್ಯದರ್ಶನ ।
ನರರು ಅರಿಯಲಿ, ಅರಿತಂತೆ ಆಚರಿಸಿ ಆನಂದಿಸಲಿ ॥೨೦॥

ಈ ಕಾರ್ಯ ಕೈಕೊಂಡು ಮುಂದಡಿ ಇರಿಸಿ ನಡೆದು ।
ಈ ಧರ್ಮ ಸೇವೆಯು ಕೈಂಕರ್ಯದ ಶಂಕರತ್ವ ।
ಈ ನಿರ್ಮಲ ಪಕ್ವಭರಿತ ಎಪ್ಪತ್ತನೇ ಸಂವತ್ಸರದ ಮಾಧುರ್ಯ
ವರ "ಕಟ್ಟಿಯ ಬಸವಣ್ಣ"ನಲ್ಲಿ ಸೂಸಲಿ ॥೨೧॥

○ ○

"ಮುನ್ನ ಹುಟ್ಟಿದುದಕೆ ಕೃಪೆಮಾಡು ಲಿಂಗವೆ!
ಇನ್ನು ಹುಟ್ಟಿದೆನಾದರೆ ಕೂಡಲಸಂಗಮದೇವಾ, ನಿಮ್ಮಾಣೆ",

—ಬಸವಣ್ಣ

# ಜ್ಞಾನಗುರು

---

—ಶ್ರೀ ಸದಾಶಿವಶಾಸ್ತ್ರಿ ಶಿವರುದ್ರಯ್ಯ ಹಿರೇಮಠ

ಸುಮಾರು ನಾಲ್ವತ್ತೈದು ವರ್ಷಗಳ ಹಿಂದಿನ ಸಂಗತಿ. ಪೂಜ್ಯ ಗುರು ನಾಗ ಭೂಷಣ ಶಾಸ್ತ್ರಿಗಳು ಗದುಗಿನ ಹಾಲ್ಕೆರೆಯ ಶ್ರೀ ಅನ್ನದಾನೀಶ್ವರ ಪಾಠಶಾಲೆಯಲ್ಲಿ ಅಧ್ಯಾಪಕರಾಗಿದ್ದಾಗ ಮೊದಲ ಸಲ ಕಂಡೆ. ನಾನು ಗದುಗಿಗೆ ಬರುವ ಒಂದೆರಡು ವರ್ಷಗಳ ಹಿಂದೆ ಶ್ರೀ ಹಾಲ್ಕೆರೆ ಅಜ್ಜಂದಿರ ಕೃಪಾಶೀರ್ವಾದ, ಧನ ಸಹಾಯದಿಂದ ಗುರುಗಳವರು ಪುಣ್ಯಕ್ಷೇತ್ರ ಕಾಶಿಗೆ ಹೋಗಿ ಸಂಸ್ಕೃತ ಕಾವ್ಯ, ನಾಟಕ, ವೇದ ವೇದಾಂತಗಳನ್ನು ಅಲ್ಪಾವಧಿಯಲ್ಲಿ ಅಭ್ಯಸಿಸಿ 'ಓದು ಒಕ್ಕಾಲು ಬುದ್ಧಿ ಮುಕ್ಕಾಲ ರಾಗಿ' ಗದುಗಿನ ಅನ್ನದಾನೀಶ್ವರ ಪಾಠ ಶಾಲೆಯಲ್ಲಿ ಅಧ್ಯಾಪಕ ಕಾಯಕದಲ್ಲಿದ್ದಾಗ ದೈವವಶದಿಂದ ನಾನು ಅವರನ್ನು ಕಂಡು ನನ್ನ ಬಗ್ಗೆ ಹೇಳಿಕೊಂಡೆ. ನನ್ನ ಜ್ಞಾನ ಪಿಪಾಸೆಯನ್ನರಿತು ದಯಾಮಯರಾದ ಗುರುಗಳು ಅಶನ, ವಸತಿಗಳ ಅನುಕೂಲತೆ ಮಾಡಿಕೊಟ್ಟು ವಿದ್ಯಾದಾನ ಮಾಡಿದರು. ಅವರ ಶಿಷ್ಯತ್ವದಲ್ಲಿ ಕಲಕತ್ತೆಯ "ಕಾವ್ಯ ಮಧ್ಯಮ" ಸಂಸ್ಕೃತ ಪರೀಕ್ಷೆ ಮಾಡಿಕೊಂಡೆ. ನಂತರ "ವೇದಾಂತ ಆದ್ಯ ಪರೀಕ್ಷೆ"ಯೂ ಆಯಿತು. ಬೇಸಿಗೆಯ ಬಿಡುವಿಗೆ ಊರಿಗೆ ಬಂದೆ. ಪ್ರಾಪಂಚಿಕ ತೊಂದರೆಗಳು ಗುರುಗಳಿಂದ ನನ್ನನ್ನು ದೂರ ಮಾಡಿಬಿಟ್ಟವು. ಆದರೆ ಗದುಗಿನಲ್ಲಿ ನಾನು ಕಳೆದ ಕೆಲವೇ ದಿನಗಳು ಜೀವನದಲ್ಲಿ ಮರೆಯದಂಥ ಅನುಭವವನ್ನು ದೊರಕಿಸಿಕೊಟ್ಟವು. ಗುರುಗಳಿಗೆ ಹೀಗೆ ಋಣಿಯಾಗಿದ್ದೇನೆ.

ಕೆಲದಿನಗಳ ನಂತರ ಗುರುಗಳು ಧಾರವಾಡಕ್ಕೆ ಬಂದು ಸಂಶೋಧನೆ, ಸಾಮಾ ಜಿಕ, ಧಾರ್ಮಿಕ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ತೊಡಗಿರುವರೆಂದೂ, "ಸಾವ ಧಾನ" ಪತ್ರಿಕೆಯ ಮುಖಾಂತರ ಜ್ಞಾನ ಪ್ರಸಾರಕ್ಕೆ ತೊಡಗಿರುವರೆಂದೂ ತಿಳಿದು ಸಂತಸಗೊಂಡೆನು.

ಪೂಜ್ಯರು ತಾವು ಕಂಡುದನ್ನು ಇತರರು ಕಾಣಬೇಕೆಂಬ, ತಾವು ಉಂಡಂಥ ಜ್ಞಾನಾಮೃತವನ್ನು ಇತರರೂ ಉಂಡು ನಲಿಯಬೇಕೆಂಬ ಸದ್ಭಾವನೆಯುಳ್ಳವರೆಂಬುದನ್ನು ಅನುಭವದಿಂದ ಅರಿತಿದ್ದೇನೆ. ಕೆಲದಿನಗಳ ಹಿಂದೆ ಅವರು ಬಾನುಲಿಯ 'ವಿಚಾರ ವೇದಿಕೆ"ಯಲ್ಲಿ ಬಿತ್ತರಿಸಿದ ವಿಚಾರಗಳಲ್ಲಿ ಈ ಅಂಶವು ಸ್ಪಷ್ಟವಾಗಿತ್ತು. ಅವರು ಆಗ "ಹಿಮಾಲಯವನ್ನು ಕಾಣಬಯಸುವವರು ಆ ಹಿಮಾಲಯವನ್ನು ಕಂಡು ಬಂದವರ ಸಂಗಡಿಗರಾಗಿ ಹೋದರೆ ಮಾತ್ರ ಹಿಮಾಲಯದ ಪೂರ್ಣ ಪರಿಚಯವಾಗಿ ನಲಿಯುವಂತೆ, ಸಚ್ಚಿದಾನಂದ ಪರಶಿವ ಬ್ರಹ್ಮವನ್ನು ಕಾಣಬಯಸುವ ಜಿಜ್ಞಾಸುಗಳು ಆ ಪರಬ್ರಹ್ಮವಸ್ತುವಿನ ಸಾಕ್ಷಾತ್ಕಾರ ಮಾಡಿಕೊಂಡವರ ಬೆನ್ನು ಹತ್ತಿದರೆ ಮಾತ್ರ ಆ ವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಂಡು ನಿತ್ಯ ಸತ್ಯಾನಂದಗಳನ್ನು ಅನುಭವಿಸುವರು" ಎಂದು ಹೇಳಿದರು. ಈ ಅಮೂಲ್ಯ ನುಡಿ ಮುತ್ತು ಅವರ ಸ್ವಭಾವಕ್ಕೆ ಹಿಡಿದ ಕನ್ನಡಿಯಾಗಿತ್ತು.

ಗದುಗಿನ ಪಾಠ ಶಾಲೆಯಲ್ಲಿದ್ದಾಗ "ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ ನಿಬೋಧತ" ಎಂಬ ಮಂತ್ರವನ್ನು ಮೊದಲುಗೊಂಡು ಅಧ್ಯಯನ ಸಾಗುತ್ತಿತ್ತು. "ಮೂಲೆಯ ಕಸದಂತೆ ಬೀಳ ಬೇಡಿರಿ. ಮಾನವ್ಯವನ್ನು ಪಡೆಯಲು ಎದ್ದೇಳಿರಿ. ಎಚ್ಚರಾಗಿರಿ. ಬುದ್ಧಿಯನ್ನು ಜಾಗ್ರತ ಗೊಳಿಸಿರಿ. ಅದನ್ನು ಸದುಪಯೋಗಮಾಡಿಕೊಳ್ಳಿರಿ. ಶ್ರೇಷ್ಠ ವ್ಯಕ್ತಿಗಳನ್ನು ಪಡೆದು ನಿತ್ಯ ಸತ್ಯವನ್ನು ಅರಿತುಕೊಳ್ಳಿರಿ. ಮುಕ್ತಿಯನ್ನು ಹೊಂದಿರಿ." ಇವೇ ಮೊದಲಾದ ಅಂದಿನ ಸೂಕ್ತಿಗಳು ನನ್ನ ಜೀವನವನ್ನು ಸದಾ ಎಚ್ಚರಗೊಳಿಸುತ್ತ ಬಂದಿವೆ. ನನ್ನಂತೆಯೆ ಎಷ್ಟು ಜನ ಗುರುಗಳಿಂದ ತಮ್ಮ ಬಾಳನ್ನು ಬೆಳಗಿಸಿಕೊಂಡಿರುವರೊ !

ಈಗ ಪೂಜ್ಯರ ಅಮೃತ ಮಹೋತ್ಸವ ನೆರವೇರಿಸುವದನ್ನು ಕೇಳಿ ತುಂಬ ಸಂತೋಷವಾಗಿದೆ. ಪರಮಾತ್ಮನು ಸದ್ಗುರುವಿಗೆ ದೀರ್ಘ ಆರೋಗ್ಯ ಭಾಗ್ಯವನ್ನು ಕರುಣಿಸಲೆಂದು ಬೇಡುವೆ.

[ ಸಾವಧಾನ ೩೧-೧೦-೧೯೭೭ ದ ಕೃಪೆಯಿಂದ]

೦. ೦

# ಶರಣು ಶರಣಾರ್ಥಿಗಳು

ಶ್ರೀ ಈ. ಅಂ. ಮಣ್ಣಿ
"ಇಮಾಂಕ್ಷ"

[ಸುನೀತ]

ನಾನಾರು? ಅದು ಏನು? ನಾನು ಅದರ ಸಹಜ ಸಂಬಂಧವದು ಏನೇನು?
ಪೃಥ್ವ್ಯಾದಿ ಪಂಚಭೂತಗಳಲ್ಲ ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳು ಮುನ್ನಲ್ಲ
ಮೂಗಲ್ಲ, ಬಾಯಲ್ಲ, ಕಣ್ಣಲ್ಲ ತ್ವಕ್ಕಂತೂ ಅಲ್ಲಲ್ಲ. ಪಾಯುವೇ?
ಉಪಸ್ಥಯೇ?
ಪಾದವೇ? ಪಾಣಿಯೇ? ಅಲ್ಲಲ್ಲ. ಇವು ಯಾವು ಮತ್ತಲ್ಲ. ಮನೋಬುದ್ಧಿ
ಅಹಂಕಾರ.
ಚಿತ್ತಗಳು ಮೇಣ್ ಅಲ್ಲ. ಮತ್ತೆ? ನಾನೆಂಬುದೇನೇನು? ಈ ಎಲ್ಲ ಆತ್ಮೊಂದು
ಇವ ಅಂಗ-ಸದ್ವಸ್ತು. ಆಚಾರ, ಗುರು, ಶಿವ, ಚರ, ಪ್ರಸಾದ, ಲಿಂಗಗಳೇ
ಪಂಚಸಾದ್ಯಾಖ್ಯಗಳು. ಕ್ರಿಯೇ ಮೊದಲ್ಗೊಂಡು ಪರಾಂತ ಶಕ್ತಿಗಳೇ
ಪಂಚಕಲೆಗಳು.
ಒಟ್ಟಾಗಿ ಲಿಂಗವದು ಚಿದ್ವಸ್ತು ಚಿತ್-ಕಲೆಯು ಮಹಾಲಿಂಗ ಶಿವತತ್ತ್ವ-ಆನಂದ.

ಇವು ಸಹಜದಲಿ 'ಅಸಿ ತ್ವಂ ತತ್' ಇದು ಪೂರ್ಣ. ಅದು ಪೂರ್ಣ,
ಸಹಜ ಸಂಬಂಧವದು ಸಂಪೂರ್ಣ—ಎಂಬ ಶರಣ ಧರ್ಮದ ಪಾಠವನು
ಅರ್ಧ ಶತಕದಮೇಲೆ ಇಪ್ಪತ್ತು ವರ್ಷಗಳ ಪರ್ಯಂತ ಓದಿ, ಬಯಸಿ
ಬಂದವರಿಗೆ ಓದಿಸಿ

# ಕರ್ಮಯೋಗಿ

—ಕೊತ್ತಲ ಮಹಾದೇವಪ್ಪ

ವೇದಗಳ ಸಾಕಾರ ಮೂರ್ತಿವಂತರು ।
ವೀರಶೈವ ಪ್ರವರ್ತಕ ಧೀಮಂತರು ॥
ಮಂಗಳ ಮಂಟಪಗಳನು ನಿರ್ಮಿಸಿ ।
ಭೂತಲದಲಿ ನಿಷ್ಕಾಮಯೋಗಿಯೆನಿಸಿ ॥೧॥

ಮನುಜರಲಿ ಘನವುಳ್ಳವರು ।
ಸಕಲಕೂ ಲೇಸ ಬಯಸುವವರು ॥
ವಿದ್ವತ್ತು, ವಿನಯಕೆ ಅಪರೂಪ ವ್ಯಕ್ತಿ ।
ವೀರಶೈವ ಧರ್ಮದ ಅಪಾರ ಶಕ್ತಿ ॥೨॥

ಮಗುವಿನಂತೆ ನಗುವಿನಲಿ ।
ಮೌನಿಯಂತೆ ಮಾತಿನಲಿ ॥
'ಸಾವಧಾನ'ದಿ ನಿಮ್ಮಯ ಕೀರ್ತಿ ।
ಸಾಧನೆಯಾಯಿತು ಅದುವೇ ಸ್ಫೂರ್ತಿ ॥೩॥

ಕರ್ಮದಲಿ ಬಾಳಿದಿರಿ ಶ್ರೇಷ್ಠರಾಗಿ ।
ಶ್ರೇಷ್ಠರಲಿ ಬೆಳಗಿದಿರಿ ವಿಶಿಷ್ಟರಾಗಿ ॥
ನಿಷ್ಠೆಯಲ್ಲೂ ಉತ್ಕೃಷ್ಟರಾಗಿ ।
ಬಾಳಿ ಘನತೆಯಲಿ ಭೂಷಣರಾಗಿ ॥೪॥

೦ ೦

ಬಾಳಿನುದ್ದಕೂ ಅವುಗಳನೇ ಬದುಕಿ, ಭಕ್ತಸಂತತಿಯ ಬದುಕಿಸಿ, ಶರಣ ಸ್ಥಲದರಿ
ನಿಂತ ಅರವಿನರಳಿನ ಶಿವಾದ್ವೈತಿಗಳಿವರು. ಹೌದೌದು ನಡೆ-ನುಡಿಯ
ಸಾಕಾರ
ಮೂರ್ತಿಗಳು-ನಾಗಭೂಷಣರು. ಇದೋ ತಮಗೆ ಶರಣು; ಮಹಾಂತ
ಸಂತತಿಯ ಶರಣು-ಶರಣಾರ್ಥಿಗಳು.

---

## ವಿವರಣೆ

ನಾನು———ನೀನು———ಸಮರಸ

| | |

ಅಸಿ(ಸತ್) ತ್ವಂ(ಚಿತ್) ತತ್(ಆನಂದ)

| | |

ಅಂಗ ಲಿಂಗ ಶಿವ——೩೬ ತತ್ತ್ವಗಳು

(೬×೪+೧)=೨೫ (೫+೫)=೧೦

ಇದು ಪೂರ್ಣ ಅದು ಪೂರ್ಣ ಸಂಪೂರ್ಣ

ಇನ್ನು ಏನೇನೋ?

೦ ೦

# ಸ್ವಾಮಿಕೃಪಾಭೂಷಣರು

—ಶ್ರೀ ಗುರುಸ್ವಾಮಿ ಕಲಿಕೇರಿ

" ಮಾನವನು ದೇವಾಂಶ ಸಂಭೂತನು, ಶಿವನ ಒಂದು ಅಂಶ–ಎಂದು ಭಾವಿಸಿ, ಜನಸೇವೆ ಮಾಡಬೇಕು. ಅಂಥ ಸೇವೆ ದೇವರಿಗೆ ಸಲ್ಲುತ್ತದೆ ಎಂದು ಭಾವಿಸ ಬೇಕು. "

ಎಂದು ಪರಮ ಹಂಸರಾದ ಸ್ವಾಮಿ ರಾಮಕೃಷ್ಣರು ನುಡಿದ ನುಡಿ ನಡೆಗಿಳಿಸಿ ಬಾಳುವವರು ಕೆಲವೇ ಜನರು. ಅಂಥವರ ಮಾಲಿಕೆಯಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳು ಸೇರುತ್ತಾರೆ. ಶಾಸ್ತ್ರಿಗಳು ಸಂಪಾದಿಸಿದ ಆಧ್ಯಾತ್ಮ ವಿದ್ಯೆ ತಾನು ದೇವಾಂಶ ಸಂಭೂತನೆಂದು ಅರಿತಿದೆ. ಶಿವನ ಒಂದಂಶವೆಂಬ ನಿಶ್ಚಲ ನಿಲುಮೆಯ ಭಾವ ಬೈರಾಗಿತ್ವದಲ್ಲಿ ಶಿವಾನುಭವ ಸೇವೆಯ ಕೈಕೊಂಡು, ಜನತಾ ಜಗದೀಶನನ್ನು ಒಲಿಸಿದೆ; ಒಲಿಸುತ್ತಲಿದೆ.

ಸಂಗನಾಳ ಗ್ರಾಮದ ಶಾಸ್ತ್ರೀಮಠದ ನಾಗಭೂಷಣರು ತಮ್ಮ ಮಠದ ಅಂಕಿತಕ್ಕೆ ತಕ್ಕ ಅನ್ವರ್ಥಕತೆಯನ್ನು ಗಳಿಸುವಲ್ಲಿ ಕೋಶ ಓದಿದರು, ದೇಶ ತಿರುಗಿದರು, ಕಾಶಿಯಲ್ಲಿ ನೆಲೆಸಿದರು. ಏಸೊಂದು ಸಂವತ್ಸರಗಳನ್ನು ಶ್ರಮದ ತಪಸ್ಸಿನಲ್ಲಿ ಕಳೆದು ಕಳೆಗೊಂಡರೋ ! ವಿದ್ಯೆಯ ತವರೇ ತಾವಾಗಿರುವಂತಿದ್ದಾರೆ. ವಿದ್ಯೆ–ವಿನಯಗಳ ಅವಳಿಗಿನ್ನೊಂದು ಹೆಸರೇ ನಾಗಭೂಷಣ ಶಾಸ್ತ್ರಿಗಳೆಂದು ಹೇಳಬೇಕು. ನಡೆ-ನುಡಿಯಲ್ಲಿ ಶರಣ ಬಾಳಿಗರಾಗಿ ಸಾವಧಾನದಲ್ಲಿ ಶಿವ ನಿಧಿ ಸಾಧನವನ್ನರ್ಥೈಸುವಲ್ಲಿ ನಿಜ ಶ್ರೀಮಂತರಾಗಿದ್ದಾರೆ. ಅಂತೆಯೇ ಸಾವಧಾನ ಪತ್ರಿಕೆಯ ಸಂಪಾದಕರಾಗಿ ಮೆರೆವ ಭಾಗ್ಯ ಇವರದಾಗಿದೆ. ಎಲ್ಲಿ ಕಲೆ ಇದೆ, ಎಲ್ಲಿ ವಿದ್ಯೆ ಇದೆ ಎಂಬುದನ್ನರಿತು ಆದರಿಸಿ, ಆಶ್ರಯ ನೀಡಿ, ವಿದ್ಯಾವಂತರನ್ನು ಸಾಕಿ, ಸಲುಹಿ, ಬೆಳೆಸಿ, ಬೆಳಗಿಸಿ, ಅವರಿಂದ ಸಮಾಜ ಸೇವೆ ಮಾಡಿಸಿ, ಸಮಾಜವನ್ನು ಬೆಳಗಿಸುವ ಮಹಾನ್ ಪವಾಡ ಗೈದ

ಪೂಜ್ಯ ಮೃತ್ಯುಂಜಯಪ್ಪಗಳ ಕೃಪಾ ದೃಷ್ಟಿ ಶಾಸ್ತ್ರಿಗಳಿಗೊಲಿದು ಬಂದಾಗ ಇವರ ಸಾವಧಾನ ಪತ್ರಿಕೆ ಹಾಗು ಶಿವಾನುಭವ ಸೇವೆ ಹಚ್ಚ ಹಸಿರಾಯಿತು. ಬಲು ಹೆಸರಾಯಿತು.

ಕವಿ-ಕಲಾವಿದ-ಪಂಡಿತ-ಶಾಸ್ತ್ರಿ! ಶಿವಾನುಭವಿ ! ಇವರು ಧರ್ಮಾಧಿಕ್ಯದ ಪ್ರತೀಕಗಳು. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ್ಯ ಎಂಬೈಮೊಗಗಳು ಶಿವನಿಗಿದ್ದಂತೆ ಈ ಐವರು ಶಿವ ಧರ್ಮದೈಮೊಗಗಳೆಂದು ನಿಜ ಹೇಳಿ ಹೊಗಳಬೇಕು. ಇವರು ಆದಂದಿನಿಂದಲೂ ಧರ್ಮಾಧಿಕ್ಯವನ್ನು ಕಲಾಧಿಕ್ಯವನ್ನು ಸ್ಥಾಪಿಸಿ ಸ್ಥಿರಗೊಳಿಸುತ್ತ ಸಮಾಜಾಭಿವೃದ್ಧಿಗೈಯ್ಯುತ್ತ ಬಂದ ಜಗದ್ಭರಿತ ಸಂಪತ್ತುಗಳು.

ಈ ನಿಜ ಸಂಪದ್ಭರಿತರನ್ನು ರಾಜಾಧಿರಾಜರು, ಸಮಾಜ ಪ್ರಮುಖರು ಆದುಸುತ್ತ ರಕ್ಷಣೆ ನೀಡುವಲ್ಲಿ ದೇಶವನ್ನು ಧರ್ಮ–ಕಲಾ ಸಂಗಮದ ಶ್ರೇಯಸ್ಸಿನಲ್ಲಿ ಆಳಿದರು. ಇದು ಬರಬರುತ್ತ ಪ್ರಜಾಪ್ರಭುತ್ವದ ಪರಿಸರದ ಪ್ರಾಧಿಕ್ಯದಲ್ಲಿ ಈ ಐವರು ಯಾರವರು…? ಎಂಬಂತಾಯಿತು. ಆಶ್ರಯವಿರದ, ಆದರ ವಿರದ ವಿಚಿತ್ರ ಪರಿಸ್ಥಿತಿಯ ಸುಳಿಯಲ್ಲಿ ಇವರು ಸಿಕ್ಕಾಗ ಧರ್ಮ ಪೀಠಾಧೀಶರು ಎತ್ತಿಕೊಂಡರು. ಈ ಸಂತ್ಸಂಪ್ರದಾಯವನ್ನು ಹಾನಗಲ್ಲ ಕುಮಾರ ಶಿವಯೋಗಿಗಳು ಅದಮ್ಯವಾಗಿ ನಡೆಸಿಕೊಂಡು ಬಂದಂತೆ ಧಾರವಾಡ ಮುರುಘಾಮಠದ ಮೃತ್ಯುಂಜಯಪ್ಪಗಳೂ ಅಗಮ್ಯವಾಗಿ ನಡೆಸುತ್ತ, ನಿಜ ನಿರಂಜನ ಮೂರ್ತಿ ಎಂದೆನಿಸಿ ಮೆರೆದರು. ಮಹಾತ್ಮರಾದ ಮೃತ್ಯುಂಜಯಪ್ಪಗಳು ಮೆಟ್ಟಿದ ಧಾರವಾಡ ಶೈಕ್ಷಣಿಕ ಕೇಂದ್ರವಾಯಿತು, ಮುರುಘಾಮಠ ಕೈಲಾಸವಾಯಿತು. ಪೂಜ್ಯರಿಂದ ಅನಂತ ಕವಿ, ಕಲಾವಿದ, ಪಂಡಿತ, ಶಾಸ್ತ್ರಿ, ಶಿವಾನುಭವಿಗಳು ಬೆಳಕು ಕಂಡರು. ಅವರಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳೂ ಒಬ್ಬರು, ದಿವ್ಯರು. ಅಂತೆಯೇ ಇವರಿಗೆ "ಸ್ವಾಮಿ ಕೃಪಾ ಭೂಷಣರು" ಎಂದು ಹೃದಯತುಂಬಿ ಉಗ್ಗಡಿಸಿರುವೆ." ಬಹುತೇಕ ಕರ್ನಾಟಕದ ಹಲವು ಮಠಗಳಲ್ಲಿ ಶಾಸ್ತ್ರಿಗಳ ಶಿವಾನುಭವ ಪ್ರವಚನ ನಡೆಯುವಲ್ಲಿ ಮೃತ್ಯುಂಜಯಪ್ಪಗಳ ನೆನಹು ಹೊಳೆಹಾಗಿ ಹೊಳೆಯುತ್ತದೆ.

ಶಿವಾನುಭವದ ರಸಘಟ್ಟಿಯಂತಿದ್ದ ಶಾಸ್ತ್ರಿಗಳ ಜೀವನ ಸಾರ್ಥಕ ಜೀವನ. ಇವರ ನುಡಿ ಮುತ್ತಿನ ಹಾರ, ಸ್ಫಟಿಕದ ಸಲಾಕೆ, ಮಾಣಿಕ್ಯದ ದೀಪ್ತಿ, ಲಿಂಗಮೆಚ್ಚಿ ಹೌದೆಂದ ಶಿವನುಡಿ. ಅಂತೆಯೆ ಕೂಡಲ ಸಂಗಮಾಧೀಶನ ಸಾಕಾರ ರೂಪರಾದ ನಾಡಿನ ಮಹಾಸ್ವಾಮಿಗಳವರ ಸಮ್ಮುಖದಲ್ಲಿ ಇವರ ಶಿವಾನುಭವ ಸೇವೆ ನಡೆಯುತ್ತಲಿದೆ "ಹರಟೆ ಆರೋಗ್ಯ, ಪುರಾಣ ಪುಂಡರಗೋಷ್ಠಿ, ಜಗಳ ಪರಮ ಸುಖ, ಶಾಸ್ತ್ರವಾಗ

ದುಃಖ" ಎಂದೆನ್ನುವ ಜನಗಳ ಮಧ್ಯದಲ್ಲಿಯೇ ಶಾಸ್ತ್ರಿಗಳು ನಿಂತು ತಮ್ಮ ಅಸ್ಖಲಿತ ವಾಣಿಯಿಂದ ಶಾಸ್ತ್ರಾನುಭವ ಪ್ರವಚನವನ್ನು ಮಾಡುತ್ತ ಜನಗಳನ್ನು ಒಪ್ಪಿಸುತ್ತ, ತಿದ್ದುತ್ತ ಸಾಗಿದ ಇವರ ಕಾಯಕ ಸಿದ್ಧ–ಪ್ರಸಿದ್ಧ ಪವಾಡ ಸದೃಶ, ಶಾಸ್ತ್ರ ಶಿವಾನು ಭವ ಎಂದರೆ ಮೂಗು ಮುರಿದು, ಮೂರರಿಂದ ಬಹಳೆಂದರೆ ಮೂವತ್ತು ಜನ ಶಾಸ್ತ್ರಾನುಭವ ಸಭೆಗೆ ಸೇರುವ ಪರಸ್ಥಿತಿಯಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳ ಶಿವಾನುಭವ ಪ್ರವಚನಕ್ಕೆ ಕಿಕ್ಕಿರಿದ ಜನಸ್ತೋಮ ನೆರೆಯುತ್ತದೆ. ಅಂದಾಗ ಇವರ ಲೀಲಾಜಾಲವಾದ ಪಾಂಡಿತ್ಯದ ಪ್ರತಿಭೆ, ಶಿವಾಧ್ಯಾತ್ಮದ ಪ್ರಭೆ ಅದೆಷ್ಟು ತೇಜಃ ಪುಂಜವಾಗಿರಬೇಡ !

ಇವರಿಂದ ಶಿವಾನುಭವ ಬದುಕಿದೆ. ಶಿವತನ ಚಿಗುರುತ್ತಿದೆ. ಇವರ ಬದುಕು ಶರಣ ಬದುಕು, ಶಿವ ಬದುಕು. ಇವರನ್ನಾಶ್ರಯಿಸಿದ(೭೫) ಎಪ್ಪತ್ತೈದು ಸಂವತ್ಸರಗಳು ಸಫಲಗೊಂಡಿವೆ, ಪಾವನಗೊಂಡಿವೆ. ಇನ್ನೂ ಹೆಚ್ಚು ಸಫಲಗೊಳ್ಳುವ, ಹರುಷದಾವೇಶ ಪಾವನವಾಗುವ ಕಾಲಾವಕಾಶ ಶತ ಸಂವತ್ಸರಗಳಿಗೂ ಲಭಿಸಲಿ.

ಂ ಂ

"ಅನ್ಯರ ಮನೆಗೆ ಹೋಗಿ ತನ್ನುದರವ ಹೊರೆಯದ,
ಅಚ್ಚ ಶರಣ ಕಂಡರೆ, ನಿಶ್ಚಯವಾಗಿ ಕೂಡಲ ಸಂಗಯ್ಯನೆಂಬೆನು"

—ಬಸವಣ್ಣ

# ನಾಡಭೂಷಣ

—ಶ್ರೀಮತಿ ಸುಲೋಚನಾ ಸಂ. ಮಟ್ಟಿ

ನಾಡಭೂಷಣ ನಮ್ಮ ನಾಗಭೂಷಣ ಶಾಸ್ತ್ರಿ
ಎಪ್ಪತ್ತೈದರ ವರುಷದಲಿ ॥ ಮುನ್ನಡೆದು ॥
'ಸೊಗಸಿನ ಬಾಳು' ಬಾಳಿದ ॥೧॥

ತಂದೆ ಪರಪ್ಪಯ್ಯ ತಾಯಿ ಲಿಂಗಮ್ಮನ
ಏಕೈಕ ಪುತ್ರ ನವಶರಣ ॥ ನಾಗಯ್ಯ ॥
ತಾಯಿ ಹೃದಯದ ವೀರಶೈವನು ॥೨॥

ಕಾಶಿಯಲಿ ವಿದ್ಯೆಯ ಕಲಿತು ಸಂಸ್ಕೃತದಲ್ಲಿ
'ನ್ಯಾಯಶಾಸ್ತ್ರ'ದ ಪರೀಕ್ಷೆಯ ॥ಪಾಸಾಗಿ॥
'ಪಂಡಿತ' ಪದವಿ ಪಡೆದಾತ ॥೩॥

ವೀರಶೈವಾಚಾರ ವ್ರತ ನಿಯಮ ಪಾಲಿಸುತ
ಕಾಯಕ ಯೋಗಿ ಎಂದೆನಿಸಿ ॥ ಜನತೆಗೆ ॥
ಜ್ಞಾನದಾಸೋಹಿ ತಾನಾದ ॥೪॥

ಪ್ರವಚನಕಾರರು ಟೀಕಾಚಾರ್ಯರು ಎನಿಸಿ
ವೀರಶೈವದ ವಿದ್ಯಾಪೀಠವ ॥ ಸ್ಥಾಪಿಸಿ ॥
ಲಿಂಗ ಪೂಜಾನಿಷ್ಠರೆನಿಸಿದ ॥೫॥

ಸಂಸಾರದೊಳಿದ್ದು ಸದ್ಗತಿ ಹೊಂದುವ
ಶರಣರ ಮಾರ್ಗ ಅನುಸರಿಸಿ ॥ ಬಾಳಲ್ಲಿ ॥
ಶಿವತತ್ತ್ವದ ಹಿರಿಮೆ ಅರಿತಾತ ॥೬॥

ನೂರಾರು ವರುಷಗಳು ಬಾಳಿ ಒದುಕಲಿಯೆಂದು
ನೂರಾರು ಪ್ರಾರ್ಥನೆ ಮಾಡೋಣ। ಶಿವನಲ್ಲಿ।
ಸರ್ವರು ಕೂಡಿ ಬೇಡೋಣ ॥೭॥

೦ ೦

"ಬ್ರಹ್ಮಪದವಿಯನೊಲ್ಲೆ,
ವಿಷ್ಣುಪದವಿಯನೊಲ್ಲೆ
ರುದ್ರಪದವಿಯನೊಲ್ಲೆ
ಮತ್ತಾವ ಪದವಿಯನೊಲ್ಲೆನಯ್ಯಾ
ಕೂಡಲ ಸಂಗಮ ದೇವಾ,
ನಿಮ್ಮ ಸದ್ಭಕ್ತರ ಪಾದವನರಿದಿಪ್ಪ
ಮಹಾಪದವಿಯನೆ ಕರುಣಿಸಯ್ಯಾ"

—ಬಸವಣ್ಣ

# "ಶಿವಸಿದ್ಧಾಂತ ರತ್ನ"

—ಬಸಣ್ಣ ಹೂಗಾರ

ಸಂಗನಾಳದಲ್ಲಿ ಜನಿಸಿ, ಕಾಶಿಯಲ್ಲಿ ಶಾಸ್ತ್ರಗಳ ಅಭ್ಯಸಿಸಿ
ಪಂಡಿತರಾಗಿ ಬಂದಿಹರು.
ಧಾರವಾಡದಲ್ಲಿ ನಿಂದು ಈಗ ಸಾವಧಾನ ಪತ್ರಿಕೆಯಿಂದ
ಜನತ ಬಾಳನ್ನು ಪಾವನಗೊಳಿಸುತಿಹರು. ॥೧॥

ಶರಣ ಧರ್ಮ ಸಿದ್ಧಾಂತಕ್ಕೆ ಈ ಶಾಸ್ತ್ರಿಗಳವರ ಜೀವನವೇ
ಬರೆದಂತಿದೆ ಸಚೇತನ ಭಾಷ್ಯ.
ಧರ್ಮ ಭೋಧನೆಯು ಜೊತೆಗೆ ಶರಣ ಜೀವನ ಸಾಗಿಸುವ
ಬಾಳು ಬಹು ಸ್ವಾರಸ್ಯ. ॥೨॥

ಆಧ್ಯಾತ್ಮದ ಅನುಭವವನ್ನು ಸರಳ ಸುಂದರವಾಗಿ ಬೋಧಿಸುವ
ಇವರ ನುಡಿ ಮುತ್ತುಗಳ ವಾಣಿ,
ಪಾರಮಾರ್ಥಿಕದ ಜಿಜ್ಞಾಸುಗಳ ಹೃದಯಕ್ಕೆ ಹರಿಸುವದು
ಆತ್ಮೋದ್ಧಾರ ಸಂಜೀವಿನಿ. ॥೩॥

ಶರಣ ಸಂಸ್ಕೃತಿಯನ್ನು ಬೋಧಿಸಿ ಜನರ ಬಾಳನ್ನು ಉನ್ನತ
ಮಟ್ಟಕ್ಕೇರಿಸಲು ಮಾಡುವರು ಯತ್ನ,
ಪರಮ ಪಾಂಡಿತ್ಯಕ್ಕೆ ಸುಜ್ಞಾನದ ಔನ್ನತ್ಯಕ್ಕೆ ಕೊಟ್ಟಿಹರು
ಇವರಿಗೆ ಬಿರುದು "ಶಿವಸಿದ್ಧಾಂತ ರತ್ನ." ॥೪॥

ಶರಣ ಸಾಹಿತ್ಯವನ್ನು ಪ್ರಚಾರಗೊಳಿಸಲು ಅನೇಕ
ವಚನಗಳನ್ನು ಸಂಗ್ರಹಿಸಿ ಪ್ರಕಟಿಸಿಹರು.
ವೀರಶೈವಧರ್ಮ ಸಿದ್ಧಾಂತವನ್ನು ತಿಳಿಸುವ ಕನ್ನಡ ನಾಡಿನ
ಏಕಮೇವ ಪಂಡಿತರಿವರು, ॥೫॥

ವೀರಶೈವಧರ್ಮ ಬೋಧನೆಯ ಕಣ್ಮಣಿ, ಪಂಡಿತ,
ಶ್ರೀ ನಾಗಭೂಷಣ ಶಾಸ್ತ್ರಿಗಳವರು
ಹರಕರುಣೆಯಿಂದ ಧರ್ಮ ಸಂಸ್ಕೃತಿಯ ಸೇವೆ ಸಲ್ಲಿಸುತ್ತ
ನೂರು ವರ್ಷ ಬಾಳಲಿ. ॥೬॥

ೆ ೆ

"ಗುರು ಮುನಿದರೆ ಒಂದು ದಿನ ತಾಳುವೆ,
ಲಿಂಗ ಮುನಿದರೆ ದಿನದರೆ ತಾಳುವೆ,
ಜಂಗಮ ಮುನಿದರೆ ಕ್ಷಣಮಾತ್ರ ತಾಳಿದೆನಾದರೆ
ಎನ್ನ ಪ್ರಾಣದ ಹೋಕು !"

—ಬಸವಣ್ಣ

# ಕಲ್ಲುಸಕ್ಕರೆ

—ಶ್ರೀ ಎಲ್ಲಪ್ಪ ಹಲಕುರ್ಕಿ

ಎಲ್ಲರು ಎಲ್ಲರಂತಿದ್ದರೂ
ನಾಗಭೂಷಣ ಶಾಸ್ತ್ರಿಗಳು
ಎಲ್ಲರಂತಲ್ಲ.
ಭಕ್ತಿಯ ಬೆಳಕು,
ನೊಸಲಿಗೆ ಸದಾ
ಚಿದ್ವಿಭೂತಿ,
ಶಿವಕಳೆಯ
ಬಿಳಿ ವಸ್ತ್ರಧಾರಿ,
ಹರೆಯುದವರಿಗೂ
ಹಾಲುಣಿಸುವ
ಮಾತೃವಾತ್ಸಲ್ಯ.
"ಬನ್ನಿರಿ, ಹದುಳವಿದ್ದಿರಾ ?
ಶರಣು, ಶರಣ್ರೀಪಾ"
ಎನ್ನುವ ಹೃದಯ ಪೂರ್ಣ ನುಡಿ.
ಮೃತ್ಯುಂಜಯಪ್ಪಗಳ,
ಮಹಾಂತಪ್ಪಗಳ ಕರುಣದ ಕಂದ.
ಬಸವಾದಿ ಶರಣರ ವಚನ ಸಾಹಿತ್ಯದ
ಸವಿಯೋಗರವ
ಜನರಿಗೆ ಉಣಿಸಿದಾತ,
ಅಜ್ಞಾನ ಕತ್ತಲೆಗೆ

ಜ್ಞಾನದ ಸೂರ್ಯ.
ವಯ ಎಪ್ಪತ್ತೈದಾದರೇನು ?
ಇಪ್ಪತ್ತರ ಕಳೆಸೂಸುವ
ಹಿರಿ ಹುಡುಗ !
ಇವರು
ಎಲ್ಲರ ಬಾಯಲ್ಲಿ
ಕಲ್ಲು ಸಕ್ಕರೆ !
ಅಣ್ಣನ ವಚನಗಳ ಅನುಭವಾಮೃತ
ಉಣಿಸಿದವ,
ಶರಣಸಾಹಿತ್ಯದ
ಬೆಳಕಾದವ,
ಎತ್ತ ಕಚ್ಚಿದರೂ
ಕಲ್ಲುಸಕ್ಕರೆಯಂತಿರುವ.

೦ ೦

## ಶಿವಾನುಭವ

"ಇಂದ್ರಿಯಗಳ ವ್ಯಾಪಾರ ಶಿವನ ವ್ಯಾಪಾರವಾಗಿರಬೇಕು, ಶಿವಮಯವಾಗಿರಬೇಕು, ಇದು ಶಿವಾನುಭವ",

—ಪಂ. ನಾಗಭೂಷಣ ಶಾಸ್ತ್ರಿಗಳವರು.

(ಸಾವಧಾನ ೩೦-೫-೧೯೮೦)

# ಆತ್ಮೋದ್ಧಾರಕ

—ಪಾರ್ವತಾ ಹಂಪಾಳಿ

ಕರ್ನಾಟಕದ ಸುಪ್ರಸಿದ್ಧ ಕವಿಗಳೂ, ವೇದಾಂತಿಗಳೂ ಆದಂಥ ಪಂಡಿತ ನಾಗಭೂಷಣಶಾಸ್ತ್ರಿಗಳವರು ಆತ್ಮೋದ್ಧಾರ ಇಲ್ಲದವರಿಗೆ ಆತ್ಮೋದ್ಧಾರ ಮಾಡಿ ಕೊಡುವಂತಹ ಸಹಿಷ್ಣುತೆ ಭಾವನೆವುಳ್ಳವರು. ದುರ್ಗುಣಗಳನ್ನು ಒಳ್ಳೆಯ ಗುಣವಂತರನ್ನಾಗಿ ಮಾಡುವ ಸೌಹಾರ್ದತೆ ಇವರಲ್ಲುಂಟು. ಕರಿಯ ಶಿಲೆಯಂತೆ ಇರುವ ಕಲ್ಲುಹೃದಯದವರನ್ನು ಬಿಳಿಯ ಅಮೃತಶಿಲೆಯಂತೆ ವಿಶಾಲ ಹೃದಯದವರನ್ನಾಗಿ ಮಾಡಿದ್ದಾರೆ. ಮನದಲ್ಲಿ ಅಜ್ಞಾನದಿಂದಾವೃತವಾದವರಿಗೆ ಜ್ಞಾನಸುಧೆಯನ್ನು, ಆತ್ಮ ತೃಪ್ತಿಯನ್ನು ನೀಡಿದ್ದಾರೆ. ವೀರಶೈವ ಧರ್ಮದಲ್ಲಿ ನಿಷ್ಠೆಯಿಲ್ಲದವರಿಗೆ ಧರ್ಮದಲ್ಲಿ ಪ್ರಗತಿಯನ್ನು ಹೊಂದುವಂತೆ, ತಮ್ಮ ತಮ್ಮಗಳ ಆಚಾರ ಕಾಯ್ದುಕೊಳ್ಳುವಂತ ಅವರವರ ಮನಸ್ಸನ್ನು ದೃಢಪಡಿಸಿರುತ್ತಾರೆ. ಇವರು ಶ್ರೇಷ್ಠ ತತ್ತ್ವಜ್ಞಾನಿಗಳೂ, ಕೀರ್ತಿವಂತರೂ, ಶರಣರೂ ಆಗಿದ್ದಾರೆ. ಹೆಸರಿಗೆ ತಕ್ಕಂತೆ ಅಪಾರವಾದಂತಹ ವ್ಯಕ್ತಿತ್ವವನ್ನು ಇವರು ಪಡೆದದ್ದು ಎಲ್ಲರಿಗೂ ಗಮನೀಯವಾದದ್ದು, ಮತ್ತು ಇವರ ಪಾಂಡಿತ್ಯವನ್ನು, ಔದಾರ್ಯವನ್ನು ಎಷ್ಟೊಂದು ಹೊಗಳಿ ಬಣ್ಣಿಸಿದರೂ ತೃಪ್ತಿಯಸಿಗಲಾರದು.

ಸ್ವಾತಿ ಮಳೆಯ ನೀರು ಎಲ್ಲಾ ಚಿಪ್ಪುಗಳ ಮೇಲೆ ಬಿದ್ದಾಗ್ಯೂ ಶ್ರೇಷ್ಠವಾದಂತಹ ಮುತ್ತಿನ ಚಿಪ್ಪೊಂದೇ ಹೇಗೆ ಅದನ್ನು ಗ್ರಹಿಸಬಲ್ಲುದೋ ಅದರಂತೆ ಇವರ ನಡೆ ನುಡಿ ಮುತ್ತುಗಳನ್ನು ಬಲ್ಲವರೇ ಬಲ್ಲರು. ಮತ್ತು ಜ್ಞಾನದ ಆಕರ್ಷತ್ವದಿಂದ ಎಲ್ಲರ ಪ್ರೀತಿ, ವಿಶ್ವಾಸ, ಅಕ್ಕರತೆಯಿಂದ ಭಕ್ತರ ಹೃದಯವನ್ನು ಬಹಳವಾಗಿ ಸೂರೆಗೊಂಡಿದ್ದಾರೆ. ಬತ್ತಿಯು ತನ್ನ ದೇಹವನ್ನೆಲ್ಲ ಸುಟ್ಟುಕೊಂಡು ವಿಶ್ವಕ್ಕೆ ಜ್ಯೋತಿಯನ್ನು ಬೆಳಗುವಂತೆ ಇವರ ಜ್ಞಾನಾಮೃತದ ಬೆಳಕು ವಿಶ್ವದ ತುಂಬೆಲ್ಲ ಅಚ್ಚ ಹಸುರಾಗಿ ಥಳ ಥಳನೆ ಹೊಳೆಯುವಂತೆ ಹಬ್ಬಿಕೊಂಡಿದೆ. ಇವರ ಆಧ್ಯಾತ್ಮಿಕತೆ

ನಮಗೆಲ್ಲ ಒಂದು ಜ್ಯೋತಿಯಾಗಿದೆ. ಇವರ ಹೃದಯಾಂತರಾಳದಿಂದ ಹೊರಹೊಮ್ಮಿದ ಅಮೃತವಾಣಿಯು ನಮ್ಮ ಜೀವನದಲ್ಲಿಯೇ ಒಹು ದೊಡ್ಡ ಮಾರ್ಪಾಟು ಮಾಡಿದೆ. ವೀರಶೈವ ಧರ್ಮದಲ್ಲಿ ಶಿವತತ್ತ್ವದ ಮಹತಿಯನ್ನು ತುಂಬಾ ಅರ್ಥಗರ್ಭಿತ-ವಾಗಿ ತಿಳಿಹೇಳಿದ್ದಾರೆ. ಪಶುತ್ವ ಹೊಂದಿದ ನಮಗೆ ಪಶುಪತಿಯನ್ನು ಅರಸುವ ಮಾರ್ಗವನ್ನು ತುಂಬಾ ಕೂಲಂಕುಷವಾಗಿ ತಿಳಿಸಿದ್ದಾರೆ. ಎಲ್ಲಾ ಜಾತಿ-ಮತ-ಪಂಥ ಸಮನ್ವಯದ ದೃಷ್ಟಿಯಿದೆ ಇವರಿಗೆ. ಸತ್ಸಂಗ, ದೃಷ್ಟಿಯಂತೆ ಸೃಷ್ಟಿ, ಧರ್ಮದ ಅವಶ್ಯಕತೆ, ಬುದ್ಧಿವಂತ ಮನುಷ್ಯನು ಶ್ರದ್ಧೆಯಿಂದ ಸತ್ಕರ್ಮದಲ್ಲಿ ತೊಡಗಬೇಕು, ಬಸವಣ್ಣನವರ ಸಪ್ತ ಶೀಲಾಚರಣೆಯ ಪ್ರಯೋಜನ, ಶಿವಾದ್ವೈತ, ಷಟ್‌ಸ್ಥಲರಹಸ್ಯ ಜ್ಞಾನಯೋಗ, ಭಕ್ತಿಯೋಗ, ಮುಂತಾದವುಗಳನ್ನು ಬಹಳ ಸ್ವಾರಸ್ಯಕರವಾಗಿ ಇವರು ತಿಳಿಸಿದ್ದಾರೆ.

ಭಕ್ತರ ಹೃದಯಾಂತರಾಳದಿಂದ ಭಕ್ತಿಯು ದಿಟವಾಗುವಂತೆ ಭಾವನೆಯನ್ನು ಅಷ್ಟೊಂದು ಪರಿಪಕ್ವಗೊಳಿಸಿದ್ದಾರೆ. ಇವರ ಮಹತ್ತರವಾದಂತಹ ಕೀರ್ತಿಯು ಎಲ್ಲೆಡೆಗಳಲ್ಲಿಯೂ ಪಸರಿಸಿ ಚಿರನೂತನವಾಗಲಿ. ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವದ ಅಭಿನಂದನ ಗ್ರಂಥಕ್ಕೆ ಒಂದು ವಿನೂತನ ಶೋಭೆ ಬರಲಿ. ಈ ಗ್ರಂಥದ ವಿಜಯದ ಜಯಕಾರವು ವಿಶ್ವದ ತುಂಬೆಲ್ಲಾ ಮೊಳಗಲಿ ಎಂದು ಹಾರೈಸುತ್ತೇನೆ.

○ ○

## ನೆನಹು

“ಮಹಾತ್ಮರ ನೆನಹಿನಿಂದ ಪವಿತ್ರತೆಯುಂಟಾಗುತ್ತದೆ....

“ಮಹಾತ್ಮರಂ ನೆನೆವುದೇ ಘನಮುಕ್ತಿಪಥಂ ಶಿವಾಧವಾ” ಎಂದು ಅನುಭವಿಗಳು ಹೇಳಿದ್ದಾರೆ! ‘ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ.”

—ಪಂ. ನಾಗಭೂಷಣ ಶಾಸ್ತ್ರಿಗಳವರು

(ಸಾವಧಾನ ೧೫-೫-೧೯೮೦)

# ನಿಮಗೆ ಶರಣು

—ಪಾರ್ವತಾ ಹಂಪಾಳಿ

ಪಂಡಿತ ನಾಗಭೂಷಣ ಶಾಸ್ತ್ರಿಗಳವರ
ಜ್ಞಾನಾಮೃತದ ಪ್ರಸಾರದಿಂದ
ಜ್ಞಾನವನು ಮೆಲ್ಲ ಮೆಲ್ಲನ ಹೀರಿಕೊಂಡೆವಯ್ಯಾ.
ಒಳಿತು ಒಳಿತು ವಿಷಯಗಳನು
ಮೆದುಳು ಕಟ್ಟೆಯಲಿ ಇರಿಸಿ
ಮರೆಯುದಂತೆ ಜ್ಞಾನವನು ಉಳಿಸಿಕೊಂಡೆವಯ್ಯಾ

ಅಂಧಃಕಾರದಲ್ಲಿದ್ದ ನಮ್ಮವರನು
ಬೆಳಕಿನೆಡೆಗೆ ತಂದವರು ಇವರಯ್ಯಾ.
ಕಲಿವ ದಾಹವೇರಿದಾಗ ಜ್ಞಾನಕಾಗಿ ಕಾಯುವಾಗ
ಬೋಧನೆಯ ರೂಪದಲಿ ಸಂಪಾದಕರಾದರಯ್ಯ.
ನಮ್ಮಗಳೆಲ್ಲರ ಮನವ ಸೆಳೆದು ಭಾವ ಬೀಜವ ಬಿತ್ತಿ ಬಿತ್ತಿ,
ಕಣ್ಣು ತೆರೆಯಿಸಿದವರು ಇವರಯ್ಯ,

ದೇಶದ ಜನರೆಲ್ಲರನು ಒಂದುಗೂಡಿಸಿ
ಭೇದ ಭಾವವ ದೂರ ಮಾಡಿಹರಯ್ಯ.
ಇವರ ನುಡಿ ಮುತ್ತುಗಳೆಮಗೆ
ಜೀವನದ ದಾರಿದೀಪವಾದವಯ್ಯ.
ನಮ್ಮನು ಶಿವನ ಕೃಪೆಗೆ
ಪಾತ್ರರನ್ನಾಗಿ ಮಾಡಿಹರಯ್ಯ,

ನಿಮಗೆ ನಮ್ಮ ಅಪೂರ್ವ ಅಭಿನಂದನೆಗಳಯ್ಯ,
ದೇವರ ಕರುಣೆಯು ಕಂದರಾಗಿ ಧರೆಗೆ ಬಂದು
ರಾಷ್ಟ್ರಕ್ಕಾಗಿ ದುಡಿದು, ಜ್ಞಾನದ ಮಾರ್ಗವ ತೋರಿದರಯ್ಯ.
ನಿಮಗೆ ಶರಣು ಶರಣಯ್ಯ
ಅಪೂರ್ವವಾದ ಜ್ಞಾನವನು ಪಡೆದ ನಿಮ್ಮನು ನೋಡಿ
ಭಾರತಾಂಬೆಗಾಗಿ ತ್ಯಾಗ ಮಾಡುವದನು ಕಂಡು
ನಾನು ಹಿಗ್ಗಿ ಕೊಳ್ಳುವೆನಯ್ಯ.

೦ ೦

## ಶ್ರೀ ಮೃತ್ಯುಂಜಯಪ್ಪಗಳು

"ಶ್ರೀ ಮೃತ್ಯುಂಜಯಪ್ಪಗಳು ಸಮಾಜದ ಅಭಿವೃದ್ಧಿಗಾಗಿ ಮತ್ತು ಸಮಾಜದ ಪರಿಪೂರ್ಣತೆಗಾಗಿ ಕಾರ್ಯಮಾಡಿದರು. ಮೊಟ್ಟಮೊದಲು ನಾನು ಶ್ರೀಮುರುಘಾಮಠಕ್ಕೆ ಬಂದದ್ದು ೧೯೨೭ರಲ್ಲಿ. ಕಾಶಿಯಲ್ಲಿ ನಾನು ಅಭ್ಯಾಸ ಮಾಡುವಾಗ ನನಗೆ ಅತಿ ಪರಿಚಿತರೂ, ಪಂಡಿತರೂ ಆಗಿದ್ದ ಶ್ರೀ ಮಹಾದೇವ ಸ್ವಾಮಿಗಳನ್ನು ಕಾಣುವದಕ್ಕಾದಿ ಆಗ ನನಗೆ ಅಕಸ್ಮಾತ್ತಾಗಿ ಶ್ರೀ ಮೃತ್ಯುಂಜಯಪ್ಪಗಳ ಪ್ರಭಾವ ಹಾಗು ದಿವ್ಯ ಜೀವನದ ಪರಿಚಯವಾಯಿತು.

ಒಮ್ಮೆ ಮೈಸೂರ ಶ್ರೀ ನಿ. ಪ್ರ. ಗೌರೀಶಂಕರ ಸ್ವಾಮಿಗಳವರು ಮುರುಘಾ ಮಠಕ್ಕೆ ಬಂದಿದ್ದರು. ಸಭೆ ನೆರೆದಿತ್ತು. ಆಗ ಅವರು ನನಗೆ ಮೃತ್ಯುಂಜಯ ಸ್ವಾಮಿಗಳಿಗೆ ಕೊನೆಗೆ ಭಜನೆಯ ಕಾಲದಲ್ಲಿ ಕುಣಿಯಲು ತಿಳಿಸಿರೆಂದು ಹೇಳಿದರು. ಆಗ ನಾನು ಹಾಗೆ ಹೇಳಲು ನನಗೆ ಸಾಧ್ಯವಿಲ್ಲೆಂದು, ಅವರ ಸ್ವಯಂ ಪ್ರೇರಣೆಯಿಂದ ಅದು ನಡೆಯು ಬೇಕಾದದ್ದೆಂದು ಹೇಳಿದೆನು. ಸ್ವಲ್ಪ ಹೊತ್ತಿನಲ್ಲಿ ಮೃತ್ಯುಂಜಯ ಸ್ವಾಮಿಗಳು ಸಾಂಬಶಿವ ಭಜನೆಮಾಡುತ್ತ ಪರವಶರಾಗಿ ಕುಣಿಯಲಿಕ್ಕೆ ಹತ್ತಿದರು. ಆಗ ಗೌರೀಶಂಕರ ಸ್ವಾಮಿಗಳವರೂ ಎದ್ದು ಹೋಗಿ ಅವರ ಜೊತೆಗೆ ಕುಣಿಯಹತ್ತಿದರು. ಇಷ್ಟು ಅವರ ತನ್ಮಯತೆ."

—ಪಂ. ನಾಗಭೂಷಣ ಶಾಸ್ತ್ರಿಗಳವರು
(ಸಾವಧಾನ ೩೦-೪-೧೯೮೦)

# ಹಾರೈಕೆ

—ಡಾ|| ಕೆ. ಎಸ್. ಕೋಣಿನ

ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಪರಿಚಯವು ಲಿಂ. ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರಿಂದ ಆಯಿತು. ಇವತ್ತಿಗೆ ಮೂವತ್ತೇಳು ವರ್ಷಗಳಾದವು. ಯಾವಾಗಲೂ ಶ್ರೀಗಳವರ ಜೊತೆಗೆ ಅಥಣಿ, ಘಟಪ್ರಭಾ ಮೊದಲಾದ ಊರುಗಳಿಗೆ ಆಗಮಿಸುತ್ತಿದ್ದರು.

ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವವು ಧಾರವಾಡ ಶ್ರೀ ಮುರುಘಾಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಮಹಾಂತ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆಯುವದು ಸಮಾಜಕ್ಕೂ ನಮಗೂ ತುಂಬಾ ಸಂತೋಷವಾಗಿದೆ.

ಪಂಡಿತ ನಾಗಭೂಷಣಶಾಸ್ತ್ರಿಗಳವರು ಲಿಂಗೈಕ್ಯ ಶ್ರೀ ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಕೃಪೆಗೆ ಪಾತ್ರರಾದವರು. ಕೋಮಲ ಹೃದಯದವರು, ಮಹಾವಿದ್ವಾಂಸರು, ಕಾರ್ಯದಲ್ಲಿ ದಕ್ಷತೆಯುಳ್ಳವರು, ಶಾಂತಮೂರ್ತಿಗಳು, ನಿರಾಡಂಬರವುಳ್ಳವರು ಆಗಿರುತ್ತಾರೆ. ಹಿಂದೆ ಅವರಿಂದ್ಸಸಮಾಜದ ಕಾರ್ಯ ಸಾಕಷ್ಟಾಗಿದೆ, ಇನ್ನು ಮುಂದೆಯೂ ಕೂಡ ಸಮಾಜ ಸೇವೆಯು ಬಹು ದಿವಸಗಳ ವರೆಗೆ ಆಗಲಿ ಅಂತಾ ಮಹಾತಪಸ್ವಿ ಶ್ರೀಮದಥಣಿ ಶಿವಯೋಗಿಗಳವರ ಕೃಪೆಯಾಗಲೆಂದು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ. ಈಗಿನ ಪೂಜ್ಯ ನಿ. ಪ್ರ. ಮಹಾಂತ ಸ್ವಾಮಿಗಳವರ ಕೃಪೆಗೂ ಪಾತ್ರರಾಗಿರುತ್ತಾರೆ. ಇಂಥವರ ಅಮೃತ ಮಹೋತ್ಸವದ ಕಾರ್ಯಕ್ರಮಗಳು ಮಹಾತಪಸ್ವಿಗಳ ಬೆಳಕಿನಲ್ಲಿ ಯಶಸ್ವಿಯಾಗಿ ಪೂರೈಸಲೆಂದು ಶ್ರೀಗಳವರ ಪಾದದಲ್ಲಿ ಬೇಡಿಕೊಳ್ಳುತ್ತೇನೆ.

# ‘ನಮನ’

—ಶ್ರೀ ಬಿ. ಎಫ್. ಹುಬ್ಬಳ್ಳಿ

ಸಹಜ ಸತ್ಯದ ಮೂರ್ತಿಯೋ
ಅಂತೆ ನಿಮ್ಮಯ ಕೀರ್ತಿಯು
ಸತ್ಯ ! ಶಿವ ! ಶಿವ ! ಆರ್ತಿಯೋ
ನಯದಿ ನಮನ ಸತ್ಯಕೆ

ಮಾತು ಮುತ್ತು, ಬಸವ ಹೃದಯ
ಇಡಿಯ ಬಾಳ ಭವಣೆ ಉಣಲು
ಗಟ್ಟಿ ಮನವ ತೊಟ್ಟ ಶ್ರೀ ಶ್ರೀ
ಶಾಸ್ತ್ರಿಯವರಿಗೆ ನಮನವು!

ಬಿಳಿಯ ಧೋತಿ ಬಿಳಿಯ ಶರ್ಟು
ಸಂಪ್ರದಾಯದ ಸತ್ಯ ಶರಣ
ತನುಮನವು ಜಾಣ ಪದವು
ಹೆಸರಿನಲ್ಲಿಯೇ ಭೂಷಣವು !

ಶ್ರೀ ‘ ಪಂಡಿತ ನಾಗಭೂಷಣ ’
ಶ್ರೀ ಶ್ರೀ ಶ್ರೀ ಶಾಸ್ತ್ರಿಯವರೆ
ನಿಮಗೆ ಶತ ಶತ ನಮನವು
ಮೊನ್ನೆ ಮೊನ್ನೆಯೆ ಅಣ್ಣ ಅಳಿದ

ಕೇಳಿ "ಸಿಡಿಲು" ಹೊಡೆದುದಾಯ್ತು
ದೇವನಿಚ್ಛೆಯೆಂದು ತಿಳಿದು
ಮತ್ತೆ ಆಸ್ತಿಕರಾಗಿ ನಿಂತ
ಶ್ರೀ ಶಾಸ್ತ್ರಿ ನಿಮಗೆ ಇದೋ
ನನ್ನ ಶತ ಶತ ನಮನವು !

ಶ್ರೀ ಸರಸತಿ ಕನ್ನಡತಿಯು
ಸೇವೆ ಎನೆ ಬರಿಯುವವರು
ಹಳ್ಳಿ ಹಳ್ಳಿಗೆ ಹೋಗಿ ಕೇಳಿ
"ತಾಡಪತ್ರ" ಕೃತಿಗಳನ್ನು
ತಂದು ಕನ್ನಡಾಸ್ತಿಯನ್ನು
ಬೆಳೆಸುತ್ತಿರುವ ಮಾನಧನ್ಯ-
ನಿಮಗೆ ಕನ್ನಡ ಚಿರಋಣಿ !

ಸಾಕು ಎನಿಸಬಹುದು ಸ್ತುತಿಯು
ಬೇಕು ಎನಿಸುತಿಹುದು ಕವಿಗೆ
ನಾಕ ಲಭಿಸಲಿ 'ಶಾಸ್ತ್ರಿ'ವರ್ಯಗೆ
ಕಾಕು ದೈವ ಮೌನ ತಾಳಿ

ಕಾಟ ನಿಲ್ಲಿಸಿ ಹರಿಸಲಿ
ಕನ್ನಡಾಂಬೆಯು ಸೇವೆಗಾಗಿ
'ಹಸಿವು' 'ಕಸಿವು' ಕೂಡಿಬರಲಿ
ಶಾಸ್ತ್ರಿವರ್ಯ ಹೆಸರು ಬಳ್ಳಿಯು
ನಾಡ ನೆಲ-ಜಲ ಬೆಳೆಸಲಿ
ಎಂದು ಕಂದ ಬೇಡಿ ಕಾಡಿ
ಕವಿತೆ ಮುಗಿಸಿ ನಮಿಸುವೆ.

೦ ೦

# ಈ ಶಾಸ್ತ್ರಿ ಮಹಾತ್ಮ!

—'ಉಳುವೀಶ' ಹುಲೆಪ್ಪನವರಮಠ.

ಧಾರವಾಡ ಮುರುಘಾಮಠ
ಸಲುಹಿದಂಥ ದಿಗ್ಗಜ,
ವೀರಶೈವ-ಗಂಧಾನಿಲ
ತೀಡುತಿರುವ ಮಲಯಜ.

ಸಂಸ್ಕೃತವನು ಅರ್ಥೈಸುವ
ಅನುಪಮ ರಸವಾಣಿ
ಇಲ್ಲಿದೆ; ಇನ್ನೆಲ್ಲಿದೆ
ಇಂಥ ಅತ್ಯುನ್ನತ ಶ್ರೇಣಿ ?

ಸಹನೆಯ ಸಾಕಾರ ರೂಪ
ಮೊಗದಿ ಶಾಂತ ಕಳೆಯು
ತೂಗಿ ತೂಗಿ ನುಡಿವ ಬೆಡಗು
ಬಗೆ, ತುಂಬಿದ ಹೊಳೆಯು

ಪಾಂಡಿತ್ಯದ ಪರಾಕಾಷ್ಠ
ಇಲ್ಲಿಯೆ ಮೈದಾಳಿದೆ.
ಸಂಸ್ಕಾರದ ಸೌಭಾಗ್ಯದಿ
ಚಾರಿತ್ರ್ಯವೆ ಮೆರೆದಿದೆ.

ವಚನ ಶಾಸ್ತ್ರದಲಿ ಒಲ್ಲಿದ
ಲಿಂಗ ತತ್ವ ವಿದನು
ಪ್ರವಚನದಲಿ ಪಾರಂಗತ
ವಾಙ್ಮಯ ಕೋವಿದನು.

ಮೃತ್ಯುಂಜಯವರದ ಹಸ್ತ
ದಿಂದ ಪುನೀತಾತ್ಮ
ಮಠಕೊಪ್ಪುವ ಶ್ರೇಷ್ಠ ಆಸ್ತಿ
ಈ ಶಾಸ್ತ್ರಿ ಮಹಾತ್ಮ !

೦ ೦

## ಶೂನ್ಯ ಸಂಪಾದನೆ

"ಶೂನ್ಯ ಸಂಪಾದನೆ ವಿಲಕ್ಷಣವಾಗಿದೆ. ಸುಲಕ್ಷಣವೂ ಆಗಿದೆ. ನಿಗಮಾಗಮ ಕಲ್ಪವೃಕ್ಷದ ಅಮೃತ ಫಲವೇ ಶೂನ್ಯ ಸಂಪಾದನೆ. ಶೂನ್ಯ ಸಂಪಾದನೆಯು ಕೋರಿಕೆಯ ಅರ್ಥ—ಶೂನ್ಯ ಅಂದರೆ ಇಲ್ಲದ್ದು. ಸಂಪಾದನೆ ಅಂದರೆ ನಮ್ಮಲ್ಲಿಲ್ಲದ್ದನ್ನು ಪ್ರಾಪ್ತ ಮಾಡುವುದು. 'ಶೂನ್ಯ' ಅಭಾವಾರ್ಥದಲ್ಲಿ ಪ್ರಯೋಗಮಾಡಿದವರೂ ಇದ್ದಾರೆ. ಶೂನ್ಯಂ ಆಸೀತ್. ಶೂನ್ಯ ಅಂದರೆ ಪರಶಿವ ತತ್ತ್ವ. ಸಂಪಾದನೆಯೆಂದರೆ ಅನುಭವಮಾಡಿಕೊಳ್ಳುವುದು. ಶೂನ್ಯ ತತ್ತ್ವ ಪರಿಪೂರ್ಣ ತತ್ತ್ವ. ಶಿವ-ಪರಶಿವ-ಶೂನ್ಯ-ಸರ್ವಶೂನ್ಯ-ನಿರಾಲಂಬ. ಇವೆಲ್ಲ ಮೂಲ ತತ್ತ್ವವಾಚಕ ಶಬ್ದಗಳು."

—ಪಂ. ನಾಗಭೂಷಣ ಶಾಸ್ತ್ರಿಗಳವರು

(ಸಾವಧಾನ, ೩೧–೧–೮೦)

# ವೀರಶೈವ ಸಮಾಜದ ಸಾಕಾರಮೂರ್ತಿ

—ಶ್ರೀ ಎಸ್. ಎಸ್. ಭೂಸರಡ್ಡಿ

ಎಪ್ಪತ್ತೈದರಲ್ಲಿಯೂ ಇಪ್ಪತ್ತರ ಉತ್ಸಾಹ ಹುಮ್ಮಸ್ಸು ತೋರುತ್ತಿರುವ ಪಂ. ನಾಗಭೂಷಣ ಶಾಸ್ತ್ರಿಗಳು ನಮ್ಮ ನಾಡಿನಲ್ಲಿ ಬೆಳಗುತ್ತಿರುವ ಶಾಸ್ತ್ರಿಗಳ ಉಜ್ವಲ ಪರಂಪರೆಯಲ್ಲಿಯೇ ಗಣ್ಯರು, ಮಾನ್ಯರು, ಹೃದಯ ಶ್ರೀಮಂತರು. ತಮ್ಮ ಬದುಕಿನ ಬಹು ಭಾಗವನ್ನು ವಿಶ್ವಮಾನ್ಯ ವೀರಶೈವ ಧರ್ಮ ತತ್ತ್ವ, ಸಾಹಿತ್ಯ, ಸಂಸ್ಕೃತಿಯ ಪ್ರಸಾರಕ್ಕಾಗಿ ಮೀಸಲಿಟ್ಟು ದುಡಿದವರು, ಹಣ್ಣಾದವರು. ಇದೀಗ ಅವರನ್ನು ರಾಜ್ಯ ಸರಕಾರದ ಸಂಸ್ಕೃತ ಶಿಕ್ಷಣ ವಿಭಾಗದವರು ಅವರ ಸೇವೆಯನ್ನು ಮನಗಂಡು ಸತ್ಕರಿಸಲು ಮುಂದಾದುದು ಶ್ಲಾಘನೀಯ.

ರಾಯಚೂರ ಜಿಲ್ಲೆಯ ಯಲಬುರ್ಗಾ ತಾಲೂಕಿನ ಸಂಗನಾಳದ ಶಾಸ್ತ್ರಿ ಮನೆತನದ ಲಿಂಗಮ್ಮ ಪರ್ವತರಾಜ ದಂಪತಿಗಳ ಪುತ್ರರಾಗಿ ಜನ್ಮವೆತ್ತಿದ ಶಾಸ್ತ್ರಿಗಳು ಹಾಳಕೆರೆ ಅನ್ನದಾನ ಮಹಾಶಿವಯೋಗಿಗಳ ಕೃಪಾಶೀರ್ವಾದದಿಂದ ಅವರ ಕರುಣೆಯ ಕಂದರಾಗಿ (೧೯೧೭--೨೪) ಶಿವಾನುಭವ ಆನಂದಾಮೃತವನ್ನು ಮನದಣಿಯೇ ಸವಿದು, ಬಾಳಿನಲ್ಲಿ ಅಳವಡಿಸಿಕೊಂಡು ಶ್ರೀಗಳ ಉತ್ಕಟವಾದ ಹಂಬಲದಿಂದ ಅವರ ಪ್ರೋತ್ಸಾಹದ ಆಶ್ರಯದಲ್ಲಿ ಸಂಸ್ಕೃತ ವಿದ್ಯೆಯ ಪ್ರಸಿದ್ಧ ಕೇಂದ್ರ ಕಾಶಿಯಲ್ಲಿ ಅಖಂಡ ಆರು ವರುಷಗಳ ಪರ್ಯಂತ ನಿಷ್ಠೆ, ಶ್ರದ್ಧೆಯಿಂದ ಸಾಹಿತ್ಯ, ನ್ಯಾಯ, ವೇದಾಂತ ಈ ಮೂರು ವಿಷಯಗಳನ್ನು ಮುಖ್ಯವಾಗಿಟ್ಟುಕೊಂಡು ಅಭ್ಯಾಸ ಮಾಡಿದರು, ವಿವೇಚನಾಶೀಲ ಚಿಂತನವನ್ನು ಬೆಳೆಸಿಕೊಂಡರು. ಈ ವಿಷಯದಲ್ಲಿ ಪರಿಣಿತರಾದರು. ೧೯೩೦ ರಲ್ಲಿಯೇ ಎಲ್ಲ ಪಂಡಿತರ ಸಮ್ಮುಖದಲ್ಲಿ ಅಖಂಡ ಒಂದೂವರೆ ತಿಂಗಳ ಕಾಲ ಸಿದ್ಧಾಂತ ಶಿಖಾಮಣಿ ಮಹತ್ವದ ತತ್ತ್ವ ಗ್ರಂಥದ ಪ್ರವಚನ ಮಾಡಿದ ಹಿರಿಮೆ ಇವರದು. ಅಂದಿನಿಂದ ಇಂದಿಗೂ ಅವರ ಪ್ರವಚನಗಳು ಈ ನಾಡಿನ ಉದ್ದಗಲಗಳಲ್ಲಿ ನಡೆದಿವೆ, ಪ್ರಖ್ಯಾತ ಮಠಗಳಲ್ಲಿ ನಡೆಯುತ್ತಲಿವೆ.

ಈಗಲೂ ಸಹ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಇಲಕಲ್ಲಿನ ವಿಜಯ ಮಹಾಂತೇಶ್ವರ ಮಹಾಮಠದಲ್ಲಿ 'ಸಿದ್ಧಾಂತ ಶಿಖಾಮಣಿ' ಪ್ರವಚನಗಳು ತಪ್ಪದೆ ಇವರಿಂದ ನಡೆಯುತ್ತಿವೆ. ಆದುದರಿಂದಲೇ ಇವರು ಪ್ರವಚನ ಪ್ರವೀಣರು, ಲಿಂ. ಮುರುಗೋಡದ ಮಹಾತಪಸ್ವಿ ಶ್ರೀ ಮಹಾಂತಜ್ಜನವರಂತೂ ಶ್ರೀ ಎಡೆಯೂರು ಸಿದ್ಧಲಿಂಗೇಶ್ವರರ ಮಹಾ ಪುರಾಣವನ್ನು ಇವರಿಂದ ಹೇಳಿಸಿದ್ದೇ ಹೇಳಿಸಿದ್ದು, ಆ ಸಂಸ್ಮರಣೆಯನ್ನು ಆ ರಸಗಳಿಗೆಯನ್ನು ಶಾಸ್ತ್ರಿಗಳು ಇಂದಿಗೂ ಜ್ಞಾಪಿಸಿಕೊಳ್ಳುತ್ತಾರೆ, ಸಿದ್ಧಲಿಂಗ ಶಿವಯೋಗಿಗಳು ಬೋಳ ಬಸವಾರ್ಯರಿಗೆ ಬೋಧಿಸಿದ ಏಕೋತ್ತರ ಶತ ಸ್ಥಲದ ಹೃದಯಂಗಮ ನಿರೂಪಣೆಯನ್ನು ಅಜ್ಜನವರು ಬಹುವಾಗಿ ಮೆಚ್ಚಿಕೊಂಡಿದ್ದನ್ನೂ, ಅವರು ಆಶೀರ್ವಾದ ನೀಡಿದ್ದನ್ನೂ ಜ್ಞಾಪಿಸಿಕೊಳ್ಳುತ್ತಾರೆ.

ಕಾಶಿಯಿಂದ ತಾಯಿನಾಡಿಗೆ ಮರಳಿದ ನಂತರ (೧೯೩೨) ವೀರಶೈವ ಧರ್ಮದ ಕೇಂದ್ರಸ್ಥಾನ ಗಂಡುಮೆಟ್ಟಿನ ತಾಣ ಗದುಗಿನಲ್ಲಿ ನಿಂತುಕೊಂಡು ಸಂಸ್ಕೃತ ಮಹಾವಿದ್ಯಾಲಯದ ಅಧ್ಯಾಪಕರಾಗಿ ತತ್ಪರತೆಯಿಂದ ಕಾರ್ಯವನ್ನು ನಿರ್ವಹಿಸಿದರು. ಇವರ ಗರಡಿಯಲ್ಲಿ ಕಲಕತ್ತೆ ವಿಶ್ವವಿದ್ಯಾಲಯದ ಸಂಸ್ಕೃತ ಪರೀಕ್ಷೆಗಾಗಿ ಅನೇಕ ವಿದ್ಯಾರ್ಥಿಗಳು ತರಬೇತಿ ಪಡೆದರು. ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ಅಪ್ರತಿಮ ಪ್ರತಿಪಾದಕರಾದ ಶ್ರೀ ಶಾಸ್ತ್ರಿಗಳು ಬೆಂಗಳೂರು, ಮೈಸೂರ ಸಂಸ್ಕೃತ ಕಾಲೇಜುಗಳಲ್ಲಿ ನಡೆಯುತ್ತಿದ್ದ ಪರೀಕ್ಷೆಗಳ ಪರೀಕ್ಷಕರಾದುದು ಸಹಜವೇ ಸರಿ.

ಗದುಗಿನ ಮಹಾಜನತೆಯ ಉದರಾಶ್ರಯದಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳು ವೀರಶೈವ ಧರ್ಮದ ನಿತ್ಯ ಸತ್ಯವಾದ ತತ್ತ್ವ ಮೌಲ್ಯಗಳನ್ನು ಮಾನಸ್ಸಿನಲ್ಲಿ ಮನದಟ್ಟವಾಗುವಂತೆ ಬೋಧಿಸಲು ಅ. ಭಾ. ವೀರಶೈವ ವಿದ್ಯಾಪೀಠ (೧೯೪೦) ವನ್ನು ಸ್ಥಾಪಿಸಿ ತನ್ಮೂಲಕ ನಾಡಿನ ಸಾವಿರಾರು ವಿದ್ಯಾರ್ಥಿಗಳಿಗೆ ವೀರಶೈವ ಸಾಹಿತ್ಯದ ಸೌರಭವನ್ನು ತತ್ತ್ವಜ್ಞಾನದ ಅಮೃತವನ್ನು ಉಣಬಡಿಸಿದರು. ಚಿಕ್ಕ-ಚೊಕ್ಕ ಕೃತಿಗಳನ್ನು ಹೊರಗೆ ತಂದರು. ಈ ವಿದ್ಯಾಪೀಠದ ಅಭ್ಯಾಸ ಕ್ರಮ ಪಠ್ಯ ಪುಸ್ತಕಗಳನ್ನು ಮನವಾರೆ ಮೆಚ್ಚಿಕೊಂಡವರಲ್ಲಿ ಹರ್ಡೇಕರ ಮಂಜಪ್ಪನವರೊಬ್ಬರು. ಅಂದು ಅವರು ಮಾಡಿದ ಸೇವೆ ಅಮೂಲ್ಯವಾದುದು, ಅಮೋಘವಾದುದು. ಅದೊಂದು ಅವರ ಜೀವನದಲ್ಲಿಯೇ ಮಹತ್ವದ ಘಟ್ಟ. ಇದರೊಂದಿಗೆ ಧಾರವಾಡದ ಮುರುಘಾಮಠದ ಪರಮ ಪೂಜ್ಯರೂ ತ್ರಿವಿಧದಾಸೋಹಮೂರ್ತಿಗಳೂ ಆದ ಶ್ರೀ ಮ. ನಿ. ಪ್ರ ಮೃತ್ಯುಂಜಯಪ್ಪಗಳ ಸತ್ಯಸಂಕಲ್ಪದಂತೆ ಅ.ಭಾ. ಶಿ. ಸಂಸ್ಥೆಯ ಮುಖಪತ್ರಿಕೆಯಾದ 'ಸಾವಧಾನ' ಪಾಕ್ಷಿಕದ (೧೫-೬-೧೯೪೭) ಸಮರ್ಥ ಸಂಪಾದಕರಾಗಿ ಮೂವತ್ತು ಮೂರು ವರ್ಷಗಳಿಂದಲೂ ಧಾರ್ಮಿಕ ಜಾಗ್ರತಿಯ ಕಾರ್ಯಮಾಡುತ್ತಿರುವುದು

ಗಮನಾರ್ಹ! ಅವರ ವಿದ್ವತ್ತ್ವಪೂರ್ಣ ಸಂಪಾದಕೀಯ ಲೇಖನಗಳು ನಮ್ಮ ಬಾಳಿಗೆ ಹೊಸ ಬೆಳಕು ಬೀರುತ್ತಿವೆ. ಮಾರ್ಗದರ್ಶನ ಸೂತ್ರಗಳನ್ನು ನೀಡುತ್ತಿವೆ.

ಇವರ ಈ ಸೇವೆಯನ್ನು ಮನದಂದು ರಾಜ್ಯ ಸರಕಾರದವರು ೫೦೦ ರೂಪಾಯಿ ಮಾಸಿಕ ವೇತನವನ್ನು ನೀಡಿ ಪ್ರೋತ್ಸಾಹಿಸಿದೆ. ಇವರ ಅನುಭವದ ಲಾಭವು ಕ. ವಿ. ವಿ. ವಚನ ವಾಙ್ಮಯ ವಿಭಾಗಕ್ಕೂ ಸಂದಿದೆ. ಇದೀಗ ಬಸವ ಪೀಠ ಪಡೆಯುತ್ತಿದೆ. ಮೂವತ್ತಕ್ಕೂ ಮಿಕ್ಕಿ ಕೃತಿಗಳನ್ನು ರಚಿಸಿದ ಪಂ. ನಾಗಭೂಷಣ ಶಾಸ್ತ್ರಿಗಳ ಲೇಖನಿಯಿಂದ ಇನ್ನೂ ಹಲವಾರು ಮಹತ್ವದ ಕೃತಿಗಳು ಬರಬೇಕಿದೆ. ಸಪ್ತ ಕಾವ್ಯದ ಗುರು ಬಸವನ ಸಮಗ್ರ ಕೃತಿಗಳನ್ನು ಡಾ. ಸುಂಕಾಪುರರೊಡನೆ ಸಂಪಾದಿಸಿದ್ದಾರೆ. "ಭಾರತೀಯ ದರ್ಶನ ಮೀಮಾಂಸೆ", 'ಚೆನ್ನಬಸವಣ್ಣನವರ ವಚನ ಸಂಗ್ರಹ', 'ವೀರಶೈವ ಧರ್ಮ ತತ್ತ್ವ ವಿವೇಚನೆ' ಮೊದಲಾದವುಗಳು ಜನಪ್ರಿಯವಾಗಿವೆ.

ಪಂ. ನಾಗಭೂಷಣ ಶಾಸ್ತ್ರಿಗಳ ಸೇವೆಯನ್ನು ಸ್ಮರಿಸಿ ಈಗಾಗಲೇ ನಾಡಿನ ಪ್ರಮುಖ ಮಠಗಳು ಆದರಿಸಿ ಸತ್ಕರಿಸಿವೆ. ಅವರ ಅಮೃತ ಮಹೋತ್ಸವ ಸವಿನೆನಪಿಗಾಗಿ ಈ ಅಭಿನಂದನಾಪರ ಸಂಚಿಕೆಯು ರೂಪತಾಳಿದೆ. ಶ್ರೀ ಶಿವಯೋಗಿಗಳ ಕೃಪಾಶೀರ್ವಾದದಿಂದ ಪಂಡಿತ ನಾಗಭೂಷಣ ಶಾಸ್ತ್ರಿಗಳು ನಾಡಭೂಷಣರಾಗಿ ಬೆಳಗುತ್ತಿರುವುದು ನಮ್ಮೆಲ್ಲರಿಗೆ ಅಭಿಮಾನದ ಹೆಮ್ಮೆಯ ಸಂಗತಿಯೇ ಸರಿ.

೦ ೦

## ಜಗದ್ಗುರು

"ಕರ್ತವ್ಯ ಮಾಡಿ ಅಧಿಕಾರ ಹೊಂದಬೇಕೋ ? ಅಧಿಕಾರ ಹೊಂದಿ ಕರ್ತವ್ಯ ಮಾಡಬೇಕೋ? ಎಡೆಯೂರು ಸಿದ್ಧಲಿಂಗ ಶಿವಯೋಗಿಗಳು ಕರ್ತವ್ಯ ಮಾಡಿ ಜಗದ್ಗುರುಗಳಾದರು".

—ಪಂ. ನಾಗಭೂಷಣ ಶಾಸ್ತ್ರಿಗಳವರು

(ಸಾವಧಾನ, ೩೧–೧–೮೦)

# ಅಮೃತ ಮಹೋತ್ಸವ ಕಂಡ ನಾಡಭೂಷಣ: ಪಂಡಿತ ನಾಗಭೂಷಣ ಶಾಸ್ತ್ರಿಗಳವರು

—ಪ್ರೊ. ವಸಂತ ಪಾಟೀಲ

೧೫-೮-೧೯೭೨ ರಂದು ಭಾರತದುದ್ದಗಲಕ್ಕೂ ಸ್ವಾತಂತ್ರ್ಯೋತ್ಸವದ ಬೆಳ್ಳಿ ಹಬ್ಬವನ್ನು ಆಚರಿಸಲಾಯಿತು. ಅಂದು ಧಾರವಾಡದ ಅವಿಮುಕ್ತ ಕ್ಷೇತ್ರವಾದ ಮುರು ಘಾಮಠದಲ್ಲಿ ಎರಡು ಹಬ್ಬಗಳನ್ನು ಆಚರಿಸಲಾಯಿತು. ಒಂದು ರಾಷ್ಟ್ರದ ಸ್ವಾತಂತ್ರ್ಯೋತ್ಸವದ ಬೆಳ್ಳಿಹಬ್ಬ ಮತ್ತೊಂದು ಸಾವಧಾನ ಪಾಕ್ಷಿಕ ಪತ್ರಿಕೆಯ ಬೆಳ್ಳಿಹಬ್ಬ ರಾಜಕಾರಣ ಮತ್ತು ಧರ್ಮದ ವಿಜಯೋತ್ಸವಗಳವು. ಸಾವಧಾನ ಪತ್ರಿಕೆಯ ಬೆಳ್ಳಿಯ ಹಬ್ಬಕ್ಕೆ ಶ್ರೀ ಮ. ನಿ. ಪ್ರ. ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು, ಮೂರುಸಾವಿರಮಠ, ಹುಬ್ಬಳ್ಳಿ, ಇವರು ಪರಮ ಪೂಜ್ಯ ಅಧ್ಯಕ್ಷರಾಗಿಯೂ ಮತ್ತು ಪ್ರಪಂಚ (ಮತ್ತು ವಿಶ್ವವಾಣಿ) ಪತ್ರಿಕೆಯ ಸಂಪಾದಕರಾದ ಶ್ರೀಮಾನ್ ಪಾಟೀಲ ಪುಟ್ಟಪ್ಪನವರು, ಎಮ್. ಎಸ್‌ಸಿ (ಕ್ಯಾಲಿಫೋರ್ನಿಯಾ) ಮುಖ್ಯ ಅತಿಥಿಗಳಾಗಿಯೂ ಆಗಮಿಸಿದ್ದರು. ಧಾರ್ಮಿಕ ಪತ್ರಿಕೆಯೊಂದು ಈ ಕಲಿಯುಗದಲ್ಲಿ ಜಯಭೇರಿ ಹೊಡೆದು ಬೆಳ್ಳಿಹಬ್ಬವನ್ನು ಆಚ ಸುತ್ತಿರುವುದು ಅಚ್ಚರಿಯ ಸಂಗತಿ ! ಅದಕ್ಕೆ ಕಾರಣ, ಕಲಿಯುಗದಲ್ಲಿ ಕೃತಯುಗದ ರೀತಿನೀತಿಗಳನ್ನು ಅವಲಂಬಿಸಿ ಜನಮನವನ್ನು ಪಾರಮಾರ್ಥಿಕದೆಡೆಗೆ ಒಯ್ಯುವ ಹಂಬಲವುಳ್ಳ ಶಕ್ತಿಗಳು ಈ ಪತ್ರಿಕೆಯ ಬೆನ್ನೆಲುಬುಗಳಾಗಿವೆ. ಅವುಗಳಲ್ಲಿ ಈ ಪತ್ರಿಕೆಯ ಸಂಪಾದಕರಾದ "ನಾಡಭೂಷಣ", ಪಂಡಿತ ನಾಗಭೂಷಣ ಶಾಸ್ತ್ರಿಗಳವರು ಒಬ್ಬರು.

೧೫-೮-೧೯೪೭, ಸ್ವಾತಂತ್ರ್ಯದಿನ. ಭಾರತ ಬ್ರಿಟಿಶರ ಬಂಧನದಿಂದ ವಿಮುಕ್ತ ವಾದ ದಿನ. ರಾಜಕೀಯ ಸ್ವಾತಂತ್ರ್ಯಕ್ಕೆ ಧಾರ್ಮಿಕ ಬೆಂಗಾವಲು ಅತ್ಯವಶ್ಯಮು

ಅಂಶ ಮೃತ್ಯುಂಜಯಪ್ಪನವರಿಗೆ ಗೊತ್ತು. ಅದಕ್ಕೆ ಅಂದೇ ಧರ್ಮದ ಜ್ಯೋತಿಯನ್ನು ಬೆಳಗಿಸಿದರು ಈ ಸಾವಧಾನ ಪತ್ರಿಕೆಯ ಪ್ರಕಾಶನದ ಮುಖಾಂತರ. ಧಾರ್ಮಿಕ ಕಲಶಕ್ಕೆ ಧಾರ್ಮಿಕರೇ ಬೇಕಲ್ಲವೇ? ಮಹತ್ತನ್ನು ಸಾಧಿಸಲು ಮಹಾತ್ಮರೇ ಬೇಕಲ್ಲವೇ? ಅಖಿಲಭಾರತ ಶಿವಾನುಭವ ಸಂಸ್ಥೆಯ ಮುಖಪತ್ರಿಕೆಯಾದ ಈ ಸಾವಧಾನ ಪತ್ರಿಕೆಗೆ ಖ್ಯಾತಿವೆತ್ತ, ಶಿವಾನುಭವಿಯಾದ ಸಂಪಾದಕರೇ ಬೇಕಲ್ಲವೇ? ಮೃತ್ಯುಂಜಯಪ್ಪನವರು ಅಂಥ ಸಮರ್ಥ ಶಕ್ತಿಯನ್ನು ಮೊದಲು ಹುಡುಕಿಟ್ಟುಕೊಂಡೇ ಈ ಕಾರ್ಯಕ್ಕೆ ಕೈಹಾಕಿದ್ದರು. ಆ ಸಮರ್ಥ ಶಕ್ತಿಯೇ ಪಂ. ನಾಗಭೂಷಣ ಶಾಸ್ತ್ರಿಗಳವರು.

**ಜನನ ಮತ್ತು ಬಾಲ್ಯ :** ಶಾಸ್ತ್ರಿಗಳವರು ೮-೪-೧೯೦೬ ರಲ್ಲಿ ಸಂ ಗ ನಾ ಳ (ತಾ. ಯಲಬುರ್ಗಿ, ಜಿ. ರಾಯಚೂರ) ದಲ್ಲಿ ಜನಿಸಿದರು. ಅವರ ತಾಯಿತಂದೆಗಳು ಲಿಂಗವ್ವ ಪರ್ವತರಾಜರವರು. ಇಂಥ ದಂಪತಿಗಳು ಸ್ವಾಭಾವಿಕವಾಗಿ ನಾಗಭೂಷಣನನ್ನೇ ಪಡೆಯಬೇಕಲ್ಲವೇ? ತಂದೆ-ತಾಯಿಗಳು ಇಟ್ಟ ಹೆಸರು ಸಾರ್ಥಕವಾಗುವಂತೆ ಶಾಸ್ತ್ರಿಗಳವರು ನಡೆದು ತೋರಿಸಿದ್ದಾರೆ. ಅವರ ಜೀವನ ಸಾಧಕರಿಗೆಲ್ಲ ಆದರ್ಶ. ಜೀವನ ಸಾಫಲ್ಯವನ್ನು ಸಂಸಾರ ಮಾರ್ಗದಿಂದ ಸಾಧಿಸಬೇಕೋ ಅಥವಾ ಸನ್ಯಾಸಮಾರ್ಗದಿಂದಲೋ ಎಂಬ ವಾದ ವಿವಾದಗಳನ್ನು ಕ್ರೋಢೀಕರಿಸಿ, ಸಾಧಕನಿಗೆ ಯಾವಮಾರ್ಗವಾದರೂ ಆಷ್ಟೇ ಎಂಬಂಶವನ್ನು ತಮ್ಮ ಜೀವನದ ಮುಖಾಂತರ ಸ್ಪಷ್ಟಪಡಿಸಿದ್ದಾರೆ.

ಬಾಸಿಂಗ ಬಲ ಬಾಲ್ಯದಲ್ಲಿಯೇ ಪಡೆದ ಪುಣ್ಯವಂತರಿವರು. ಗಂಡ, ಹೆಂಡತಿಯಾಗಿ ಆಡುವ ಆಟವನ್ನು ತಮ್ಮ ಜೀವನ ನಾಟಕದಲ್ಲಿಯೇ ಅಳವಡಿಸಿಕೊಂಡವರಿವರು! ಲಗ್ನದಲ್ಲಿ ಈ ವರನ ವಯಸ್ಸು ಕೇವಲ ಎಂಟು ವರ್ಷ! ಬಹುಶಃ ಬೇರೆಯವರು ಧೋತರ ಉಡಿಸಿರಬೇಕು! ಇನ್ನು ವಧು ಶಿವಗಂಗಮ್ಮನವರ ವಯಸ್ಸಂತೂ ಕೇವಲ ಆರು ತಿಂಗಳು! ಮೊಲೆಯುಣ್ಣುವುದನ್ನು ಬಿಡಿಸಿ, ಸ್ವತಃ ವರನೇ ವಧುವನ್ನು ಎತ್ತಿಕೊಂಡು ಲಗ್ನದ ವಿಧಿನಿಯಮಗಳನ್ನು ಆಚರಿಸಿರಬೇಕು! ಇಂಥ ಭಾಗ್ಯ ಎಷ್ಟು ಮಂದಿಗಿದೆ?! ಈಗಿನವರಿಗಂತೂ ಮೊಮ್ಮಕ್ಕಳಾಗುವ ವಯಸ್ಸಾದರೂ ಇನ್ನೂ ಬಾಸಿಂಗ ಬಲ ಬಲು ದೂರ!!

**ಕಾಶೀ ಪಂಡಿತರು :** ಶಾಸ್ತ್ರಿಗಳವರ ಪ್ರಾಥಮಿಕ ಶಿಕ್ಷಣವು ಅವರ ಸೋದರತ್ತೆಯವರ ಊರಾದ ನಿಡಗುಂದಿಯಲ್ಲಿ ಆಯಿತು. ಇದೇ ಸೋದರತ್ತೆಯ ಮಗಳೇ ಇವರ ಧರ್ಮಪತ್ನಿ ಶಿವಗಂಗಮ್ಮನವರು. ಶಾಸ್ತ್ರಿಯವರಿಗೆ ಮೂವರು ಸೋದರತ್ತೆಯವರು ಸಂಗಮ್ಮ, ಗಂಗಮ್ಮ, ಅನ್ನದಾನಮ್ಮರು; ಒಬ್ಬಳು ಅಕ್ಕ, ಪಾರ್ವತಮ್ಮ.

ಪ್ರಾಥಮಿಕ ಶಾಲೆಯಿಂದ ಶಾಸ್ತ್ರಿಗಳವರ ಶಿಕ್ಷಣವು ಹಾಲಕೆರೆ ಪಾಠಶಾಲೆಯಲ್ಲಿ ಸಂಸ್ಕೃತ ಅಭ್ಯಾಸದತ್ತ ಮುನ್ನಡೆಯಿತು. ಇಂದಿನ ಅಗಾಧ ಪ್ರಕಾಂಡ ಪಂಡಿತರಾದ ಶಾಸ್ತ್ರಿಗಳವರು ಅಂದು ಈ ದಿಶೆಯತ್ತ ತಯಾರಾಗತೊಡಗಿದರು. ಅಲ್ಲಿ ಅವ್ಯಾಹತವಾಗಿ ಆರು ವರ್ಷ ಸಂಸ್ಕೃತ ಅಭ್ಯಾಸ ನಡೆಯಿತು. ಅಷ್ಟಕ್ಕೇ ಶಾಸ್ತ್ರಿಯವರ ಸಂಸ್ಕೃತ ದಾಹ ಶಮನವಾಗಲಿಲ್ಲ. ಅದರ ನಿತ್ಯತೃಪ್ತಿಗಾಗಿ ಶಾಸ್ತ್ರಿಗಳವರು ತ್ರೇತಾಯುಗದ ಕ್ಷೇತ್ರ ಕಾಶಿಗೆ ೧೯೩೫ರಲ್ಲಿ ಧಾವಿಸಿದರು. ಅಲ್ಲಿ ಸುಮಾರು ಆರು ವರ್ಷ ಅಂದರೆ ೧೯೪೧ರ ವರೆಗೆ ಅವರ ಸಂಸ್ಕೃತ ಅಭ್ಯಾಸ ಅವ್ಯಾಹತವಾಗಿ ಮುಂದುವರೆಯಿತು. ಪಂಡಿತ ಪರೀಕ್ಷೆಗೆ ಸಾಹಿತ್ಯ, ನ್ಯಾಯ ಮತ್ತು ವೇದಾಂತಗಳನ್ನು ಮುಖ್ಯ ವಿಷಯಗಳನ್ನಾಗಿ ತಕ್ಕೊಂಡು ಕಲಕತ್ತಾ ಕೇಂದ್ರದಿಂದ ಪಾಸಾದರು. ಅಂದಿನಿಂದ ಅವರಿಗೆ 'ಪಂಡಿತ' ಎಂಬ ಉಪಾಧಿಯು ಬಂದಿರುವುದಲ್ಲದೆ 'ಶಾಸ್ತ್ರಿ' ಎಂಬ ಪದವಿಯು ಅಡ್ಡಹೆಸರಾಗಿ ಅವರ ಜೀವನದುದ್ದಕ್ಕೂ ಬಂದಿದೆ. ಶಾಸ್ತ್ರಿಗಳವರ ಹಿರಿಯರೂ ಕೂಡ ಸಂಸ್ಕೃತದಲ್ಲಿ ನಿಷ್ಣಾತರಿದ್ದರಲ್ಲದೆ ಶಾಸ್ತ್ರ ಹೇಳುವುದರಲ್ಲಿ ಪಾರಂಗತರಾಗಿದ್ದರು. ಅದಕ್ಕೆಂತಲೇ ಅವರ ಮನೆತನಕ್ಕೆ 'ಶಾಸ್ತ್ರೀಮಠ' ಎಂದು ಅಡ್ಡಹೆಸರು ಬಂದಿರುವುದು. ಆ ಅಡ್ಡಹೆಸರು ಇಂದಿನ ತಲೆಮಾರಿಗೂ ಸಾರ್ಥಕಹೊಂದಿದೆ. ಶಾಸ್ತ್ರಿಗಳವರ ಶಾಸ್ತ್ರ ಪ್ರವಚನ ಕೇಳುವುದೊಂದು ಆತ್ಮಕ್ಕೆ ಹಬ್ಬ. ಪಂಡಿತರಿಂದ ಹಿಡಿದು ಪಾಮರರವರೆಗೆ ಎಲ್ಲರಿಗೂ ಮನದಟ್ಟವಾಗುವಂತೆ ಹೇಳುವ ಚತುರತೆ, ಪ್ರವೀಣ್ಯವನ್ನು ಅವರು ತಮ್ಮ ವಾಣಿಯಲ್ಲಿ ಅಳವಡಿಸಿಕೊಂಡಿದ್ದಾರೆ.

**ಕಾರ್ಯಕ್ಷೇತ್ರ :** ಗದುಗಿನ ಹತಗಲಿಮಠ ಶಾಸ್ತ್ರಿಗಳವರ ಕಾರ್ಯಕ್ಷೇತ್ರವಾಯಿತು. ತಾವು ಗಳಿಸಿದ ಸಂಸ್ಕೃತ ಪಾಂಡಿತ್ಯವನ್ನು ವಿದ್ಯಾರ್ಥಿಗಳಿಗೆ ಬೋಧಾಮೃತಪಾನ ಮಾಡಿಸತೊಡಗಿದರು. ವಿದ್ಯಾರ್ಥಿಗಳ ಮುಖಾಂತರ ಶಾಸ್ತ್ರಿಗಳವರ ಕೀರ್ತಿ ಸುತ್ತೆಲ್ಲ ಪಸರಿಸತೊಡಗಿತು. ಕೀರ್ತಿಯು ಬೆನ್ನುಹತ್ತದ ಸರಳಜೀವರಾದ ಶಾಸ್ತ್ರಿಗಳವರ ಹೆಸರು ಕನ್ನಡಿಗರ ಮನೆಮಾತಾಗತೊಡಗಿತು. ಅಪಾರ ಪಾಂಡಿತ್ಯದ ಜೊತೆಗೆ ಬೋಧನ ಕಲೆಯನ್ನು ಅವರು ಅಳವಡಿಸಿಕೊಂಡಿದ್ದುದರ ಮೂಲಕ ಅವರ ವಿಚಾರಗಳು ಕೇಳುಗನ ಹೃದಯದಾಳಕ್ಕೆ ಇಳಿದು ಆತ್ಮೀಭೂತವಾಗುವವು. ೧೯೪೧ರಿಂದ ೧೯೬೧ರ ವರೆಗೆ ಗದಗು ಶಾಸ್ತ್ರಿಗಳವರ ಕಾರ್ಯಕ್ಷೇತ್ರವಾಗಿತ್ತು.

**ವಿಶ್ವವಿದ್ಯಾಲಯದತ್ತ :** ಗದಗು ಶಾಸ್ತ್ರಿಗಳವರಿಗೆ ಕಾರ್ಯವಸಗಲು ಬಹುಶಃ ಚಿಕ್ಕದಾಗಿರಬಹುದು; ಪಾಂಡಿತ್ಯದ ಸದುಪಯೋಗ ವಿಶ್ವಕ್ಕೆ ಸಲ್ಲಬೇಕಲ್ಲವೇ? ಅದಕ್ಕೆಂತಲೇ ವಿಶ್ವವಿದ್ಯಾಲಯದಿಂದ ಇವರಿಗೆ ಕರೆ ಬಂದಿತು. ಡಾ, ಆರ್. ಸಿ. ಹಿರೇಮಠರ

ನೇತೃತ್ವದಲ್ಲಿ ಮೈದಾಳಿದ ವಚನ ವಾಙ್ಮಯ ವಿಭಾಗದಲ್ಲಿ 'ಶಾಸ್ತ್ರಿಯ' ಸ್ಥಾನ ಅನ್ವರ್ಥಕನಾಮ ಪಡೆದ ಶಾಸ್ತ್ರಿಗಳವರಿಗೆ ಲಭಿಸಿತು. ಶರಣರ ಸೇವೆಗೆ ಶರಣರೇ ಅಣಿಯಾಗಬೇಕಲ್ಲವೇ ? ಹನ್ನೆರಡನೆಯ ಶತಮಾನದ ಶಿವಶರಣರ ವಚನಗಳನ್ನು ಇಪ್ಪತ್ತನೆಯ ಶತಮಾನದ ಶರಣ ಪಂ. ನಾಗಭೂಷಣ ಶಾಸ್ತ್ರಿಗಳವರು ಸಂಪಾದನೆ ಮಾಡುವಲ್ಲಿ ಶ್ರಮಿಸಿದರು. ೧೯೬೧ರಿಂದ ೧೯೭೯ರ ವರೆಗೆ ಈ ದಿಶೆಯತ್ತ ವಿಶ್ವವಿದ್ಯಾಲಯವು ಶಾಸ್ತ್ರಿಗಳವರ ಕಾರ್ಯಕ್ಷೇತ್ರವಾಗಿತ್ತು. ಸದ್ಯಕ್ಕೆ ಸಾವಧಾನ ಪತ್ರಿಕೆಯ ಸಂಪಾದನ ಕಾರ್ಯದೊಂದಿಗೆ ಮುರುಘಾಮಠದ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವರಲ್ಲದೆ ಅಲ್ಲಲ್ಲಿ ಕರೆಗಳಿಗೆ ಓಗೊಟ್ಟು ಶಾಸ್ತ್ರ, ಪ್ರವಚನ ಕಾರ್ಯಗಳನ್ನು ಕೈಕೊಳ್ಳುವರು.

ಪಂಡಿತ ನಾಗಭೂಷಣ ಶಾಸ್ತ್ರಿಗಳವರ ಪುಣ್ಯಮಯ ಜಂಗಮ ಜೀವನದಲ್ಲಿ ಹಲವಾರು ಮಠಗಳು ತಮ್ಮವೇ ಆದ ಪಾತ್ರಗಳನ್ನಾಡಿವೆ. ಅವುಗಳಲ್ಲಿ ಕಾಶಿಯ ಜಂಗಮವಾಡಿಮಠ, ಹಾಳಕೆರೆಯ ಅನ್ನದಾನೀಶ್ವರಮಠ, ಗದುಗಿನ ಹಡಗಲಿಮಠ ಧಾರವಾಡದ ಮುರುಘಾಮಠ, ಹುಬ್ಬಳ್ಳಿಯ ಜಗದ್ಗುರುಮಠ, ಕೊಪ್ಪಳದ ಗವಿಸಿದ್ದೇಶ್ವರಮಠ, ನವಲಗುಂದದ ಗವಿಮಠ, ಮೂಡಿಮಠ, ಚಿಕ್ಕಸೂಗೂರುಮಠ, ನಿಡಶೋಸಿಯ ಸಿದ್ಧಸಂಸ್ಥಾನಮಠ ಹಾಗೂ ಶಿವಯೋಗ ಮಂದಿರಗಳನ್ನು ಹೆಸರಿಸಬಹುದು. ಕರ್ನಾಟಕದ ಎಲ್ಲ ಮಠ ಹಾಗೂ ಆಯಾ ಮಠದ ಸ್ವಾಮಿಗಳವರ ಸಾಮೀಪ್ಯ ಪಡೆದವರಿವರು.

ಪಂ. ನಾಗಭೂಷಣ ಶಾಸ್ತ್ರಿಗಳವರ ಜೀವನದಲ್ಲಿ ಇಲಕಲ್ಲದ ಶ್ರೀ ವಿಜಯ ಮಹಾಂತೇಶ್ವರ ಮಠದ ಪಾತ್ರವೂ ಅಷ್ಟೇ ಮುಖ್ಯ. ಒಂದು ದೃಷ್ಟಿಯಲ್ಲಿ ಅದು ಶಾಸ್ತ್ರಿಗಳವರಿಗೆ ತವರುಮನೆ. ಪ್ರತಿವರುಷ ಶ್ರಾವಣಮಾಸ ಪೂರ್ತಿ ಇಲಕಲ್ಲ ಶ್ರೀ ವಿಜಯ ಮಹಾಂತೇಶನ ಮಠದಲ್ಲಿ ಶಾಸ್ತ್ರಿಗಳವರ ಪ್ರವಚನ ನಡೆಯುವುದು. ಅಲ್ಲಿ ಅವರ ಪ್ರವಚನಕ್ಕೆ ಮಾರು ಹೋಗಿ ಮುಗ್ಧನಾಗಿ ಜೀವನಪರ್ಯಂತ ಅವರ ಸೇವೆಗೆ ಸಿದ್ಧನಾಗಲು ಸನ್ನದ್ಧನಾದೆ. ಅಂತೆಯೇ ಅವರ ಬಗೆಗೆ ಲೇಖನ, ಗ್ರಂಥಗಳು ಹೊರಹೊಮ್ಮತೊಡಗಿವೆ. ಇದು ಶಿವನಿಚ್ಛೆ.

ಉತ್ತರದ ಜಂಗಮವಾಡಿ ಮಠದಲ್ಲಿ ಸಂಸ್ಕೃತದ ಪ್ರಕಾಂಡ ಪಾಂಡಿತ್ಯವನ್ನು ಸಂಪಾದಿಸಿ ದಕ್ಷಿಣದೆಡೆಗೆ ಹರಿದು ಬಂದ ಈ ಶಿವತೊರೆ ಇಲಕಲ್ಲದಲ್ಲಿ ಶ್ರೀ ವಿಜಯ ಮಹಾಂತ ಭಕ್ತಿಯ ಸಾಗರವನ್ನು ನಿರ್ಮಿಸಿದೆ ! ಈ ಭಗೀರಥ ಪ್ರಯತ್ನ "ಅಭಿನವ ಚೆನ್ನಬಸವಣ್ಣ" ಹಾಗೂ "ಅಭಿನವ ವಿಜಯ ಮಹಾಂತ"ನೇ ಆದ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳಿಂದಾಗಿದೆ. ಅವರಿಂದ ಇಲಕಲ್ಲವು ಈಗ ಕಲ್ಯಾಣವಾಗಿದೆ ! ಕ್ರಾಂತಿಯೋಪಾದಿಯಲ್ಲಿ ಜನತೆಯಲ್ಲಿ ಜಾಗ್ರತಿಯನ್ನುಂಟುಮಾಡಿರುವರಲ್ಲದೆ, ಮಠವನ್ನು

ನವೀಕರಿಸಿ ಜೀರ್ಣೋದ್ಧಾರಗೈಸಿ ಸುಸ್ಥಾನವಮಾಡಿರುವರು. ಎಂಥವರೂ ಈ ಮಠಕ್ಕೆ ಮನಸಾ ಮಣಿಯುವಂತಾಗಿದೆ !

ಸಂಸಾರಿಕ ಸನ್ಯಾಸಿ : ಶಾಸ್ತ್ರಿಗಳವರ ಜೀವನ ದಿವ್ಯ ಜೀವನ. ಅವರು ನಿಜವಾಗಿಯೂ ಗುರು, ಲಿಂಗ, ಜಂಗಮೋಪಾದಿಯಲ್ಲಿರುವರು. ಅವರ ಮಾತು ವಿಭೂತಿ; ಅವರ ನೋಟ ರುದ್ರಾಕ್ಷಿ; ಅವರ ವಾಣಿ ಮಂತ್ರ; ಅವರ ಆಚಾರ ಪಂಚಾಚಾರ; ಅವರ ಆವರಣ ಅಷ್ಟಾವರಣ. ಇಂಥ ಶಕ್ತಿಯ ಸಾಮಿಪ್ಯಕ್ಕೆ ಬಂದ ಭಕ್ತರಿಗೆಲ್ಲ ಸ್ವಾಭಾವಿಕವಾಗಿ ಪಾದೋದಕ, ಪ್ರಸಾದಗಳು ಲಭಿಸುವವು-ನಿಜ ಜೀವನಪಥ ಕಾಣಲು, ಆತ್ಮೋದ್ಧಾರವಮಾಡಿಕೊಳ್ಳಲು. ಚಿಕ್ಕವಯಸ್ಸಿನಲ್ಲಿಯೇ ಸಂಸಾರ ಕಟ್ಟಿಕೊಂಡರು, ಅವರ ಸಂಸಾರ ಬಳ್ಳಿಗೆ ಆರು ಫಲಗಳು-ಎರಡು ಗಂಡು-ಬಸವಣ್ಣ (ಲಿಂಗೈಕ್ಯರಾಗಿರುವರು), ಚೆನ್ನಬಸವಣ್ಣ ಮತ್ತು ನಾಲ್ವರು ಹೆಣ್ಣುಮಕ್ಕಳು (ವೀರಾಂಬೆ, ಮಹಾದೇವಿ, ಅನ್ನಪೂರ್ಣ ಮತ್ತು ಮಹಾಲಿಂಗವ್ವ. ಹಿರಿಯಾಮಳು ಲಿಂಗೈಕ್ಯಳಾಗಿರುವಳು.). ಇನ್ನು ಮೊಮ್ಮಕ್ಕಳ ಸಂಖ್ಯೆ ಏರುತ್ತಲಿದೆ ! ಖಚಿತ ಅಂಕಿ ಸಂಖ್ಯೆ ಕೊಡುವುದು ಕಠಿಣ ಇಷ್ಟಿದ್ದರೂ ನವನೀತದ ರೋಮದಂತೆ ನೀರಮೇಲಿನ ಕಮಲಪತ್ರದಂತೆ ಶಾಸ್ತ್ರಿಗಳವರು ನಿರ್ಲಿಪ್ತರು. ಇವರು ಬಳಸಿದ ಬ್ರಹ್ಮಚಾರಿಗಳು ! ರೀತಿ, ನೀತಿ, ಪೂಜಾವಿಧಾನ, ಪ್ರಸಾದ ಸ್ವೀಕರಿಸುವಲ್ಲಿ-ಮುಂತಾದವುಗಳೆಲ್ಲದರಲ್ಲಿಯೂ ಮಠದ ಗುರು, ಅಥವಾ ಜಗದ್ಗುರುವಿನ ಸಮಾನರು. ಅಂತರವಿಷ್ಟೇ ಶಾಸ್ತ್ರಿಗಳವರಿಗೆ-ಮಠದ ಪಟ್ಟವಿಲ್ಲ (ಆದರೆ ಕರ್ನಾಟಕದಲ್ಲಿಯ ಹಾಗೂ ಹೊರಗಿನ ಎಲ್ಲ ಮಠಗಳಿಗೂ ಇವರು ಬೇಕು.) ಕಾವಿಯ ಉಡುಗೆಯಿಲ್ಲ (ಶುಭ್ರ ಉಡುಗೆಯವರು). ಶಾಸ್ತ್ರಿಗಳವರ ಸಂಸಾರ ಶಿವಸಂಸ್ಕಾರ ಹೊಂದಿದೆ. ಬಾಲ್ಯದಲ್ಲಿಯೇ ವಿವಾಹವಾಗದಿದ್ದರೆ ಖಂಡಿತವಾಗಿಯೂ ಯಾವದೋ ಒಂದು ಮಠಕ್ಕೆ ಸ್ವಾಮಿಗಳಾಗುತ್ತಿದ್ದರು. (ಶಾಸ್ತ್ರಿಗಳವರು ಕಾಶಿಯಿಂದ ರಜೆಯಮೇಲೆ ಕೊಪ್ಪಳಕ್ಕೆ ಬಂದಾಗ್ಗೆ ಮೈಸೂರು ಮಠದ ಮರಿದೇವರು ೧೯೨೭ರಲ್ಲಿ ಇವರನ್ನು ಗವಿಸಿದ್ಧೇಶ್ವರ ಮಠದಲ್ಲಿ ಕಂಡು ತಮ್ಮ ಮಠಕ್ಕೆ ಸ್ವಾಮಿಯಾಗಿ ಬರಲು ಕೇಳಿಕೊಂಡಿದ್ದನ್ನು ಇಲ್ಲಿ ಸ್ಮರಿಸಬಹುದು). ಬಹುಶ: ಶಿವನಿಗೆ ಇದು ಬೇಕಿರಲಿಲ್ಲ. ಸಂಸಾರ ಹೇಯವಲ್ಲ, ಅದರ ಮುಖಾಂತರ ಸದ್ಗತಿ ಕಾಣುವುದರಲ್ಲಿ ನಿಜವಾದ ಧೀರತನವಿದೆ. ಅದಕ್ಕೆ ದೃಷ್ಟಾಂತವಾಗಲೋಸುಗವೇ ಶಾಸ್ತ್ರಿಗಳವರ ಜೀವನ. ಇತ್ತೀಚೆಗೆ ಪಾಂಡಿಚೇರಿಯ ಆಗಿನ ಲೆಫ್ಟನೆಂಟ ಗವರ್ನರ ಶ್ರೀ ಬಿ. ಡಿ. ಜತ್ತಿ (ಮುಂದೆ ಇವರು ಉಪ ರಾಷ್ಟ್ರಪತಿ ಹಾಗೂ ಕಾರ್ಯನಿರ್ವಾಹಕ ತಾತ್ಪೂರ್ತಿಕ ರಾಷ್ಟ್ರಪತಿಗಳೂ ಆದರು) ಯವರು ದಕ್ಷಿಣ ಹಿಂದುಸ್ಥಾನದಲ್ಲಿ ತತ್ತ್ವ ಪ್ರಚಾರವಮಾಡಲು ಶಾಸ್ತ್ರಿಗಳವರನ್ನು ಆಮಂತ್ರಿಸಿದ್ದರು. ಇವೆಲ್ಲ ಇವರ ದಿವ್ಯ ಜೀವನಕ್ಕೆ ಸಾಕ್ಷಿ.

ಪ್ರಕಟನೆಗಳು : ಶಾಸ್ತ್ರಿಗಳವರು ತಮ್ಮ ಧಾರ್ಮಿಕ ವಿಧಿಗಳಾಚರಣೆಯೊಂದಿಗೆ ಸಾಹಿತ್ಯ ಸೇವೆಯನ್ನು ಸಾಕಷ್ಟು ಮಾಡಿರುವರು. ಸುಮಾರು ಮೂವತ್ತಕ್ಕೂ ಮೇಲ್ಪಟ್ಟು ಕೃತಿಗಳ ರಚನೆ, ಸಂಪಾದನೆಯನ್ನು ಮಾಡಿರುವರೆಂದರೆ ಯಾರೂ ಅಚ್ಚರಿಪಡಬೇಕಿಲ್ಲ. ಬಸವಣ್ಣನ ಆದರ್ಶ ಜೀವನ, ಅಕ್ಕಮಹಾಧೇವಿಯ ಆದರ್ಶ ಜೀವನ, ವೀರಶೈವ ತತ್ತ್ವಪ್ರವೇಶ, ವಚನ ಮಧು-ಭಾಗ ೧ ಮತ್ತು ೨, ಗದ್ಯ ಸಂಗ್ರಹ, ಸರ್ವಜ್ಞ ವಚನ ಸಂಗ್ರಹ, ಅಷ್ಟಾವರಣ, ಪಂಚಾಚಾರ, ಧರ್ಮಾಚಾರ, ಅನುಭವ ಮುದ್ರೆ, ಚೆನ್ನಬಸವಣ್ಣನ ನೂರೆಂಟು ವಚನಗಳ ಸಂಗ್ರಹ, ತೋಂಟದ ಶ್ರೀಸಿದ್ಧಲಿಂಗ ಶಿವಯೋಗೀಶ್ವರರ ನೂರೆಂಟು ವಚನಗಳ ಸಂಗ್ರಹ (ಸಂ. ಶ್ರೀ ನಿ. ಜ. ತೋಂಟದ ಸಿದ್ಧಲಿಂಗೇಶ್ವರನ ಜಾತ್ರೆಯ ಶತಮಾನೋತ್ಸವದ ಪ್ರಕಟನ, ಪ್ರಕಾಶಕರು : ಉತ್ಸವ ಸಮಿತಿ, ಗದಗ, ಬೆಟಗೇರಿ, ೩-೧೦-೧೯೭೦, ಮುದ್ರಕರು: ಶ್ರೀ ಜಗದ್ಗುರು ಜಯವಿಭವ ಮುದ್ರಣಾಲಯ, ಮುರುಘಾಮಠ, ಮೃತ್ಯುಂಜಯ ನಗರ, ಧಾರವಾಡ ೬, ಪು. ೧೦೪; ಬೆಲೆ ೧-೨೫, ಗುರುಬಸವನ ಸಪ್ತಕಾವ್ಯ, ಸೊಗಸಿನ ಬಾಳು, ಜೀವನ ಯಾತ್ರೆ, ಭಾರತೀಯ ದರ್ಶನ ಸಮೀಕ್ಷೆ. ಭಾಗ ೧* (ಮೃತ್ಯುಂಜಯ ಪ್ರಕಾಶನ ೩, ಪ್ರಕಾಶಕರು: ಎಸ್. ಬಸವರಾಜ, ಮೃತ್ಯುಂಜಯ ನಿಲಯ, ಧಾರವಾಡ ಮಹಾಂತ ಮುದ್ರಣಾಲಯ, ಧಾರವಾಡ-೬, ೧೯೭೫, ಪು, ೧೨೦, ಬೆಲೆ ರೂ. ೧೦-೦೦). ಚೆನ್ನಸದಾಶಿವಯೋಗಿ ವಿರಚಿತ ಶಿವಯೋಗ ಪ್ರದೀಪಿಕಾ ** ಮುಂತಾದವುಗಳನ್ನು ಇಲ್ಲಿ ಉಲ್ಲೇಖಿಸಬಹುದು.

---

* ಪುಸ್ತಕ ವಿಮರ್ಶೆ : ವಸಂತ ಪಾಟೀಲ, "ಭಾರತೀಯ ದರ್ಶನ ಸಮೀಕ್ಷೆ ಭಾಗ-೧", ಮಾನವಿಕ ಭಾರತಿ, ಸಂಪುಟ ೧, ಸಂಚಿಕೆ ೧, ಷಾಣ್ಮಾಸಿಕ ಪತ್ರಿಕೆ, ಜ. ೧೯೭೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

** ಬಸವಾರಾಧ್ಯ ಟೀಕಾ ಸಮೇತ. ಸಂ. ರಜತಮಹೋತ್ಸವ ಪ್ರಕಟನೆ, ಕನ್ನಡ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಶ್ರೀ ಬಸವೇಶ್ವರಪೀಠ ತರಂಗ ನಾಲ್ಕು, ಪ್ರಕಾಶಕರು: ಸಿ.ಎಸ್. ಕಣವಿ, ನಿರ್ದೇಶಕರು, ಪ್ರಸಾರಾಂಗ ವಿಸ್ತರಣ ಪ್ರಕಟನ ವಿಭಾಗ ಕ.ವಿ. ವಿ. ಧಾರವಾಡ, ಮುದ್ರಕರು: ಎಮ್. ಎಮ್. ಹೊರಡಿ, ಕ್ವಾಲಿಟಿ ಪ್ರಿಂಟರ್ಸ ಧಾರವಾಡ, ಆ. ೧೯೭೬, ಪು. ೨೦೪, ಬೆಲೆ ೧೦ ರೂ. ವೀರಶೈವ ಧರ್ಮ ವಿವೇಚನೆ (ರಜತಮಹೋತ್ಸವ ಪ್ರಕಟನೆ, ಕನ್ನಡ ಅಧ್ಯಯನಪೀಠ, ವಿಶೇಷೋಪನ್ಯಾಸ--ಮಾಲೆ ನಾಲ್ಕು. ಕಲಬುರ್ಗಿ ವಿಶ್ವವಿದ್ಯಾಲಯದಲ್ಲಿ ನೀಡಿದವುಗಳು. ಪ್ರಕಾಶಕರು, ಕುಲಸಚಿವರು, ಕರ್ನಾಟಕ ವಿಶ್ವ-ವಿದ್ಯಾಲಯ, ಧಾರವಾಡ, ಮುದ್ರಕರು: ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ, ಮಹಾಶಿವರಾತ್ರಿ, ೨೮ ಫೆಬ್ರುವರಿ, ೧೯೭೬. ಪು. ೬೦, ಬೆಲೆ ರೂ. ೪-೫೦.

ಇಂದಿನ ಜಾಹಿರಾತಿನ ಬಲ ಪ್ರಪಂಚಕ್ಕೆ ಶಾಸ್ತ್ರಿಗಳು ದೂರ. ಗುಪ್ತಗಾಮಿನಿಯಾಗಿ ಇವರ ಸಾಹಿತ್ಯವಾಹಿನಿ ಪ್ರವಹಿಸುತ್ತದೆ. ಇವರು ಸಂಪಾದಿಸಿದ ಚೆನ್ನಬಸವಣ್ಣನವರ ವಚನ ಸಂಗ್ರಹ, ಬಿ. ಎ. ಕ್ಲಾಸಿಗೆ ಪಠ್ಯಪುಸ್ತಕವಾಗಿದೆ. ಭಾರತೀಯ ದರ್ಶನ ಸಮೀಕ್ಷೆ-ಭಾಗ-೧ ಇದು ಎಮ್. ಎ. ಕನ್ನಡ ಅಧ್ಯಯನಕ್ಕೆ ಪಠ್ಯಪುಸ್ತಕವಾಗಬಲ್ಲ ಯೋಗ್ಯತೆ ಹಾಗೂ ಸಾಮರ್ಥ್ಯವನ್ನು ಪಡೆದಿದೆ,

ಪುರಸ್ಕಾರಗಳು : ಕನ್ನಡಿಗರು ಅದರಲ್ಲಿಯೂ ಮುಖ್ಯವಾಗಿ ಲಿಂಗವಂತರು ತಮ್ಮವರಿಗೆ ಪುರಸ್ಕಾರ ನೀಡುವಲ್ಲಿ ಬಹಳ ಪ್ರಸಿದ್ಧ ಜಿಪ್ಪುಣರು ! ಶಾಸ್ತ್ರಿಗಳವರು ಕರ್ನಾಟಕದ ಬದಲು ಬೇರೆಲ್ಲಿಯಾದರೂ ಇದ್ದಿದ್ದರೆ ಅಥವಾ ಬೇರೆ ಮತಕ್ಕೆ ಸಂಬಂಧಿಸಿದ್ದರೆ ಅವರು ಹೊರಲಾರದಷ್ಟು ಪುರಸ್ಕಾರಗಳನ್ನು ಈಗಾಗಲೇ ಪಡೆಯಬಹುದಿತ್ತು ಆ ದೃಷ್ಟಿಯಲ್ಲಿ ಅವರು ದುರ್ಭಾಗ್ಯರು !

ಗದುಗಿನ ಶಿವಾನುಭವ ಸಂಸ್ಥೆಯವರು ಶಾಸ್ತ್ರಿಗಳವರಿಗೆ (೫೦ನೆಯ ಹುಟ್ಟು ಹಬ್ಬದ ಸವಿನೆನಹಿಗಾಗಿ) "ಶಿವಾದ್ವೈತ ಸಿದ್ಧಾಂತ ರತ್ನ" ಎಂಬ ಬಿರುದನ್ನೂ ಹಾಗೂ ೫೦೦೦ ರೂ. ಗಳ ಹಮ್ಮಿಣಿಯನ್ನು ನೀಡಿ ಸತ್ಕರಿಸಿದರು. ಆ ಹಣದಿಂದಲೇ ಗದುಗಿನ ಹಡಗಲಿ ಮಠದಲ್ಲಿ ಸಿದ್ಧಲಿಂಗ ವಿಜಯ ಪ್ರಿಂಟಿಂಗ್ ಪ್ರೆಸ್ ಪ್ರಾರಂಭವಾಯಿತು. ನವಿಲುಗುಂದದ ಸರ್ವಧರ್ಮ ಪರಿಷತ್ತು "ಶಿವಸಿದ್ಧಾಂತ ರತ್ನ" ಬಿರುದನ್ನು ಮಾನಪತ್ರ ನೀಡಿ, ಶಾಲನ್ನು ಹೊದಿಸಿ ಸತ್ಕರಿಸಿತು. ಧಾರವಾಡದ ಮುರುಘಾಮಠದಲ್ಲಿ ಸಂಸ್ಕೃತ ವಿದ್ವತ್ ಪರಿಷತ್ತಿನ ವತಿಯಿಂದ "ದರ್ಶನ ವಿಶಾರದ" ಎಂಬ ಬಿರುದನ್ನು ಹಾಗೂ ಬಂಗಾರ ಪದಕ ನೀಡಿ, ಶಾಲನ್ನು ಹೊದಿಸಿ ಸತ್ಕರಿಸಲಾಯಿತು. ನಿಡಸೋಸಿಯಲ್ಲಿ ಡಾ. ಆರ್. ಸಿ. ಹಿರೇಮಠ ಮತ್ತು ಡಾ. ನಂದಿಮಠರೊಂದಿಗೆ ಇವರನ್ನು ಮಾನಪತ್ರ ಸಂಭಾವನೆಯೊಂದಿಗೆ ಸತ್ಕರಿಸಲಾಯಿತು. ೧೯೬೬ ರಲ್ಲಿ ಧಾರವಾಡದ ಶ್ರೀ ಮುರುಘಾಮಠದಲ್ಲಿ ಪೂಜ್ಯ ಮಹಾಂತಪ್ಪಗಳ ಅಪ್ಪಣೆಯಮೇರೆಗೆ ಡಾ. ಆರ್. ಸಿ. ಹಿರೇಮಠರ ನೇತೃತ್ವದಲ್ಲಿ ಶಾಸ್ತ್ರಿಗಳವರ ಷಷ್ಟ್ಯಬ್ದಿ ಸಮಾರಂಭವನ್ನು ಆಚರಿಸಲಾಯಿತು. ಆಗ್ಗೆ ಶಾಸ್ತ್ರಿಗಳವರಿಗೆ ೧೦,೦೦೦ರೂ.ಗಳ ಹಮ್ಮಿಣಿಯನ್ನು ಅರ್ಪಿಸಲಾಯಿತು. ಅದರಲ್ಲಿಯೇ ಮುರುಘಾಮಠದ ಹಿಂಬದಿಯಲ್ಲಿ ಒಂದು ಪುಟ್ಟಮನೆಯಾಗಿ ಮೈದಾಳಿತು. ಆ ಷಷ್ಟ್ಯಬ್ದ ಸಂದರ್ಭದಲ್ಲಿ ಹುಬ್ಬಳ್ಳಿಯ ಮೂರುಸಾವಿರಮಠದ ಜಗದ್ಗುರುಗಳವರು ರುದ್ರಾಕ್ಷಿಗಳನ್ನೊಳಗೊಂಡ ಬಂಗಾರದ ಸರವನ್ನು ಶಾಸ್ತ್ರಿಗಳವರಿಗಿತ್ತು ಆಶೀರ್ವದಿಸಿದರು.

ಸರಕಾರದ ಕರ್ತವ್ಯ : ಶಾಸ್ತ್ರಿಗಳವರಿಗೆ ಪುರಸ್ಕಾರ ನೀಡುವಲ್ಲಿ ರಾಜ್ಯ ಹಾಗೂ ಕೇಂದ್ರ ಸರಕಾರಗಳು ಹಿಂದೆ ಬಿದ್ದಿದ್ದವು. ಆದರೆ ಇತ್ತೀಚೆಗೆ ರಾಜ್ಯ ಸರಕಾರವ

ಎಚ್ಚೆತ್ತು, ೫೦೦ ರೂಗಳ ಮಾಸಾಸನವನ್ನು ಶಾಸ್ತ್ರಿಗಳವರಿಗೆ ನೀಡಿದೆ. ಅವರ ಸೇವೆಗೆ ಈ ಹಣ ತೀರ ಅಲ್ಪ.

ರಾಜ್ಯ ಸರಕಾರವು ಪಂ. ನಾಗಭೂಷಣ ಶಾಸ್ತ್ರಿಗಳವರ ಸಂಸ್ಕೃತ ಪಾಂಡಿತ್ಯಕ್ಕೆ ಮನ್ನಣೆ ನೀಡಿ, ೧೯೭೮-೭೯ನೇ ಸಾಲಿನ ರಾಜ್ಯಪ್ರಶಸ್ತಿಯನ್ನು ಹಾಗೂ ಸಾವಿರ ರೂ. ಗಳ ಹಮ್ಮಿಣಿಯನ್ನು ನೀಡಿ, ಶಾಲು ಹೊದಿಸಿ ಸತ್ಕರಿಸಿತು. ಈ ಸಮಾರಂಭವು ಬೆಂಗಳೂರಲ್ಲಿ ದಿ. ೧೦-೫-೭೦ರಂದು ನೆರವೇರಿತು.

ಒಟ್ಟಿನಲ್ಲಿ ರಾಜ್ಯ ಸರಕಾರವು, ಅಲ್ಪವಾದರೂ ಚಿಂತೆಯಿಲ್ಲ ತನ್ನ ಪಾಲಿನ ಕರ್ತವ್ಯ ಪಾಲಿಸಿದೆ. ಇನ್ನು ಮುಂದೆ ಕೇಂದ್ರ ಸರಕಾರದ ವತಿಯಿಂದ ಪಂ. ನಾಗಭೂಷಣ ಶಾಸ್ತ್ರಿಗಳವರಿಗೆ ಪ್ರಶಸ್ತಿ, ಪುರಸ್ಕಾರ, ಸತ್ಕಾರಗಳು ನಡೆಯಬೇಕಾಗಿವೆ. ಆ ಶುಭ ದಿನದ ನಿರೀಕ್ಷೆಯಲ್ಲಿ ನಾವಿರುವೆವು.

ಸದ್ಯದಲ್ಲಿಯೇ ಧಾರವಾಡದ ಶ್ರೀ ಮುರುಘಾಮಠದಲ್ಲಿ ಪೂಜ್ಯರಾದ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರ ಅಪ್ಪಣೆಯ ಮೇರೆಗೆ, ಅವರ ಘನ ಅಧ್ಯಕ್ಷತೆಯಲ್ಲಿ ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತಮಹೋತ್ಸವವು ವಿಜೃಂಭಣೆಯಿಂದ ನೆರವೇರಲಿದೆ. ಅದೇ ಸಂದರ್ಭದಲ್ಲಿ ಈ ಅಭಿನಂದನ ಗ್ರಂಥವನ್ನು ಬಿಡುಗಡೆಮಾಡಿ ಈ "ನಾಡಭೂಷಣರಿಗೆ" ನಾಡಿನ ನಮ್ಮೆಲ್ಲರ ವತಿಯಿಂದ ಹೃತ್ಪೂರ್ವಕವಾಗಿ ಇದನ್ನು ನೀಡಲಾಗುವುದು. ಅದರಲ್ಲಿ ಭಾಗಿಯಾಗುವುದೇ ಸೌಭಾಗ್ಯ.

o o

# ಸಮನ್ವಯವಾದಿ

—ಕಾಶೀನಾಥಸ್ವಾಮಿ ಚ. ಸಾರಂಗಮಠ

ಪಂ. ನಾಗಭೂಷಣ ಶಾಸ್ತ್ರಿಗಳು ಸಂಸ್ಕೃತ ಹಾಗೂ ಕನ್ನಡ ಉಭಯ ಭಾಷಾ ಪಂಡಿತೋತ್ತಮರೂ, ವೀರಶೈವಸಿದ್ಧಾಂತವನ್ನು ಅಧಿಕಾರವಾಣಿಯಿಂದ ಪ್ರತಿಪಾದಿಸುವವರೂ ಹಾಗೂ ಗುರು-ವಿರಕ್ತರನ್ನು ಒಂದು ಗೂಡಿಸಿ ಒಂದು ಸುಂದರ ಸಮಾಜ ನಿರ್ಮಾಣವಾಗಬೇಕೆಂಬ ಹಟ ತೊಟ್ಟ ದಿಟ್ಟ ವಾಕ್ಪಟುಗಳೂ ಆಗಿದ್ದಾರೆ.

ಸುಮಾರು ೧೯೪೦ ರ ಸಮಯವಿರಬಹುದು. ಆವಾಗಲೇ ಪಂಡಿತರ ಹೆಸರನ್ನು ನಾನು ಕೊಪ್ಪಳದಲ್ಲಿ ಉರ್ದು ಮಿಡಲ್ ಕಲಿಯುವಾಗಲೇ ಕೇಳಿದ್ದೆ. ಅವರು ನಡೆಸುತ್ತಿದ್ದ ವೀರಶೈವ 'ಮಧುಕರ' ಪರೀಕ್ಷೆಗೆ ಪರೀಕ್ಷಾರ್ಥಿಯಾಗಿ ಅಭ್ಯಾಸ ಮಾಡುತ್ತಲಿದ್ದೆ. ಕೊಪ್ಪಳ ಗವಿಮಠದ ಮಠಾಧ್ಯಕ್ಷರಾದ ಪರಮ ಪೂಜ್ಯ ಲಿಂ. ಮರಿಶಾಂತವೀರ ಮಹಾಸ್ವಾಮಿಗಳು ಈ ಪರೀಕ್ಷೆಗೆ ಸ್ವತಃ ಹೇಳಿಕೊಡುತ್ತಿದ್ದರು. ಪೂಜ್ಯ ಶ್ರೀಗಳವರೇ ಪಂಡಿತ ನಾಗಭೂಷಣ ಶಾಸ್ತ್ರಿಗಳ ಪಾಂಡಿತ್ಯವನ್ನು ಧರ್ಮಾಭಿಮಾನವನ್ನು ಕುರಿತು ಮೆಚ್ಚಿಗೆಯ ಮಾತುಗಳನ್ನಾಡಿದ್ದರು. ಮಹಾ ತಪೋನಿಷ್ಠರೂ ಘನವಿದ್ವಾಂಸರೂ, ಮಿತಭಾಷಿಗಳೂ ಆದ ಶ್ರೀಗಳ ಮುಖದಿಂದ ಹೊಗಳಿಕೆಯನ್ನು ಕೇಳಿದ್ದರಿಂದ ಪಂಡಿತರ ಬಗ್ಗೆ ಗೌರವ ಭಾವನೆ ಅಂದೇ ನನ್ನ ಹೃದಯಾಂತರಾಳದಲ್ಲಿ ಬೇರೂರಿದ್ದು ಸ್ವಾಭಾವಿಕ.

ಪಂ. ನಾಗಭೂಷಣಶಾಸ್ತ್ರಿಗಳು ಬಹು ಮುಂದಾಲೋಚನೆಯುಳ್ಳವರು, ಸಮಾಜದ ಬಗ್ಗೆ ಅಪಾರ ಕಳಕಳಿ ತಾಳಿದವರೂ ಮತ್ತು ಮಹಾ ಮೇಧಾವಿಗಳೂ ಹೌದು. ಕನ್ನಡ ನಾಡು-ನುಡಿಯನ್ನು ಹಾಗೂ ವೀರಶೈವ ಧರ್ಮ-ತತ್ತ್ವಗಳನ್ನು ಜನಸಾಮಾನ್ಯರಲ್ಲಿ ಪ್ರಚಾರ ಮಾಡಬೇಕು, ಕನ್ನುಡಿಯ ಶ್ರೀಮಂತಿಕೆಯನ್ನು, ಧಾರ್ಮಿಕ ಧೀಮಂತಿಕೆಯನ್ನು ಎಳೆಯರ ಶುದ್ಧ ಹೃದಯಿಗಳ ಚಿತ್ತಪಟಲಗಳ ಮೇಲೆ

ಅಚ್ಚೊತ್ತಿದಂತೆ ಬೋಧಿಸಬೇಕೆಂಬ ಮಹಾತ್ವಾಕಾಂಕ್ಷೆ ಅವರದಾಗಿದೆ. ಅಂತೆಯೇ ತ್ರಿವಿಧ ದಾಸೋಹ ಮೂರ್ತಿಗಳು, ನಿದ್ದೆ ಹೋದ ಸಮಾಜವನ್ನು ಬಡಿದೆಬ್ಬಿಸುವ ಹಿರಿಯ ಹಂಬಲ ಹೊಂದಿದ ಪರಮಪೂಜ್ಯ ಶ್ರೀ ಮೃತ್ಯುಂಜಯಪ್ಪಗಳ ದೂರ ದೃಷ್ಟಿ ಬಿದ್ದ ಪಂ. ನಾಗಭೂಷಣ ಶಾಸ್ತ್ರಿಗಳನ್ನು ಧಾರವಾಡಕ್ಕೇನೇ ಕರೆಸಿಕೊಳ್ಳಲಾಯಿತು. ಅವರ ಸಂಪಾದಕತ್ವದಲ್ಲಿ 'ಸಾವಧಾನ' ಪತ್ರಿಕೆಯು ಯಾವ ಅಡೆ ತಡೆಯಿಲ್ಲದೇ ವೀರಶೈವಧರ್ಮ ತತ್ತ್ವ ಪ್ರಚಾರಕಾರ್ಯವನ್ನೂ ಅವಿರತವಾಗಿ ನಡೆಸುತ್ತ ಬರುತ್ತಲಿದೆ. ಪಂಡಿತರ ಲೇಖನ ಹಾಗೂ ಭಾಷಣಗಳಲ್ಲಿ ಅಲ್ಲದೇ ನಡೆನುಡಿಗಳಲ್ಲಿ ಧರ್ಮ ಸಮನ್ವಯ ವಿಶೇಷವಾಗಿ ಎದ್ದು ಕಾಣುತ್ತದೆ. ಅಗಾಧ ಪಾಂಡಿತ್ಯದ ಪ್ರತಿಭೆ ಓದುಗರನ್ನು ಮುಗ್ಧಗೊಳಿಸದಿರಲಾರದು. ಗುರು-ಜಂಗಮರು ವೀರಶೈವ-ಸಮಾಜ-ಪುರುಷನ ಎರಡು ಕಣ್ಣುಗಳಿದ್ದಂತೆ ಎಂದು ಪರಮ ಪೂಜ್ಯ ಶ್ರೀ ಮೃತ್ಯುಂಜಯಪ್ಪಗಳು ಪದೇ ಪದೇ ಅಪ್ಪಣೆ ಕೊಡಿಸುತ್ತಿದ್ದರು. ಅವರ ಈ ಧಾರ್ಮಿಕ ನೀತಿಯನ್ನು ಸಮನ್ವಯ ತತ್ತ್ವವನ್ನು ಅಂತಃಕರಣ ಪೂರ್ವಕವಾಗಿ ಅನುಷ್ಠಾನಕ್ಕೆ ತಂದವರು ಪಂ. ನಾಗಭೂಷಣ ಶಾಸ್ತ್ರಿಗಳು. ಶಾಸ್ತ್ರಿಗಳ ಆಳವಾದ ಪಾಂಡಿತ್ಯದ ಸೊಬಗನ್ನು ಸರ್ವ ಧರ್ಮೀಯರೂ ಇತ್ತಿತ್ತಲಾಗಿ ತತ್ತ್ವಾನ್ವೇಷಣ ಮಂದಿರದ ಭಾಷಣಗಳ ಮಾಲೆಗಳ ಮೂಲಕ ಸವಿಯುತ್ತಲಿರುವುದು ಅವರ ಎತ್ತರದ ವ್ಯಕ್ತಿತ್ವವನ್ನು ಎತ್ತಿತೋರಿಸುತ್ತದೆ. ಅವರ ಅಪಾರ, ಘನ ಪಾಂಡಿತ್ಯಕ್ಕೆ ಸರ್ವರೂ ಮಾರು ಹೋಗಿದ್ದಾರೆಂಬುದಕ್ಕೆ ಇದು ಉತ್ತಮ ನಿದರ್ಶನವಾಗಿದೆ.

ಎಂಥ ಕಹಿ ಪ್ರಸಂಗ ಒದಗಿ ಬಂದರೂ ಶಾಸ್ತ್ರಿಗಳು ಸಮಾಧಾನಿಯಾಗಿ, ಶಾಂತ ಸ್ವಭಾವದಿಂದಲೇ ವರ್ತಿಸುವವರು. ಎಂದೂ ಯಾರಿಗೂ ಹರಿಹಾಯ್ದವರಲ್ಲ. ಜೀವನದಲ್ಲಿ ಬರತಕ್ಕ ಸಂಕಷ್ಟಗಳನ್ನು ನಗುಮೊಗದೊಂದಿಗೆ ಸಹಿಸುತ್ತ, ಸರ್ವರಿಗೂ ಸಮ್ಮತವಾದ ಮಾರ್ಗವನ್ನು ತೋರುವವರೇ ! ನಡೆ ನುಡಿ ಒಂದಾದ ಅವರ ಸರಳ, ಶಾಂತ, ಸೌಜನ್ಯ ಸಂಪನ್ನ ವ್ಯಕ್ತಿತ್ವ ಸಮಾಜಕ್ಕೆ ಹಾಗೂ ನಾಡಿಗೇನೇ ಭೂಷಣ. ಅವರ ಅಪೂರ್ವ ವ್ಯಕ್ತಿತ್ವ ಹಾಗೂ ಘನ ಪಾಂಡಿತ್ಯದ ಸದುಪಯೋಗವನ್ನು ಸಮಾಜವು ಸಮರ್ಥವಾಗಿ ಉಪಯೋಗಿಸಿಕೊಳ್ಳಬೇಕಾಗಿದೆ. ಇಂಥ ತತ್ತ್ವ ರತ್ನಗಳು ಯುಗಕ್ಕೊಮ್ಮೆ ಈ ನಾಡಿನ ಪುಣ್ಯದಿಂದ ಕಾಣಿಸಿಕೊಳ್ಳುತ್ತವೆಂಬುದನ್ನು ಮರೆಯಲಾಗದು.

೦ ೦

ಪಂ॥ ನಾಗಭೂಷಣ ಶಾಸ್ತ್ರಿಗಳವರ

# ಅನುಭವಾಮೃತ

(ಇಲಕಲ್ಲದಲ್ಲಿತ್ತ ಆವರ ಪ್ರವಚನಗಳಿಂದ)

---

ಸಂಗ್ರಹ : ವಸಂತ ಪಾಟೀಲ

:: "ದೇಹದ ಹಸಿವು ತಡೆಯಬಹುದು ಜ್ಞಾನದ ಹಸಿವನ್ನು ಸಹಿಸುವುದಾಗುವುದಿಲ್ಲ. ಗಾಂಧೀಜಿ ೨೧ ದಿನ ಉಪವಾಸ ಇದ್ದರು ಆದರೆ ಒಂದು ದಿನವೂ ಪ್ರಾರ್ಥನೆ ಮಾಡದೆ ಇರಲಿಲ್ಲ".

:: 'ಅಲಂ' ಅಂದರೆ ಸಾಕು. 'ಅಲಂಕಾರ' ಅಂದರೆ ಇಲ್ಲಿಗೆ ಸಾಕು. (೧೧-೮-೭೧)

:: "ಸ್ತ್ರೀ ಪುರುಷರಲ್ಲಿ ಆಕರ್ಷಣೆ ಸ್ವಾಭಾವಿಕ, ಕಾರಣವೆಂದರೆ ಒಂದೇ ಇದ್ದದ್ದು ಎರಡಾಗಿದೆ. ಈ ಅಭಾವ ತುಂಬಿಕೊಳ್ಳಲು ಈ ಆಕರ್ಷಣೆ".

:: "ಇಚ್ಛಾ, ಜ್ಞಾನ, ಕ್ರಿಯಾ— ೩ ಶಕ್ತಿಗಳು. ಮೂರೂ ಕೂಡಿದರೆ ಶಿವ. ಶಕ್ತಿಯ ಸಂಕೋಚಾವಸ್ಥೆಯೇ ಜೀವ".

:: "ಭಕ್ತರಿಗೆ ಮುಕ್ತಿಯ ಚಿಂತೆಯಿಲ್ಲ. ಮುಕ್ತರಾದವರೇ ಭಕ್ತರಾಗುವರು".

:: "ದೇವನಾಗಬಹುದು. ಬಸವಣ್ಣನಾಗುವುದು ಕಷ್ಟ".

:: "ದೇಹ ಭಾಂಡೆ, ಅನುಭವದ ಅಡುಗೆ ಮಾಡಲು ಅದನ್ನು ತೊಳೆಯಬೇಕು''. (೧೨-೮-೭೧)

:: "ಪಂಚ (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ದ ವಿಸ್ತಾರವೇ ಪ್ರಪಂಚ".

:: "ಪಾದದಲ್ಲಿ ಫಲವಿದೆ. ಪಾದವೇ ಮೇಲು. ತಲೆಯೇ ಬೇರು''. (ಅದಕ್ಕೆ ಪಾದಕ್ಕೆ ನಮಸ್ಕರಿಸುವ ಪದ್ಧತಿ).

:: "ತಲೆ ತಂಪಿರಬೇಕು. ಪಾದ ಕಾವೇರಬೇಕು''. ೧೭-೮-೭೧

:: "ತಪ್ಯತೇ ಇತಿ ತಪಃ. ಇಂದ್ರಿಯಗಳಿಗೆ ಕಟ್ಟು ಹಾಕುವುದೇ ತಪಸ್ಸು". (೧೯-೮-೭೧)

:: "ಭಾಷ್ಯ ಬರೆದವರಿಗೆ ಆಚಾರ್ಯ ಎಂಬ ಹೆಸರು. ಉದಾ--ಶಂಕರಾಚಾರ್ಯ''.

:: "ಗೃಹಸ್ಥಾಶ್ರಮದಲ್ಲಿ ಮುಕ್ತಿ ಇಲ್ಲವೆಂದೇ ಸನ್ಯಾಸದವರಿಗೆ ಪ್ರವಾಸ''.

:: "ಅ+ಉ+ಮ=ಓಂ. ಓಂಕಾರ ನಾದದ ಹದ್ದಿನಲ್ಲಿ ರಾಕ್ಷಸರು ಕಾಲಿಡುವುದಿಲ್ಲ".

:: "ಶಿವದಿಂದ ವಿಯೋಗವಾದುದೇ ಜೀವಕ್ಕೆ ದು:ಖವಿರಲು ಕಾರಣ''. (೧೨-೯-೭೭)

:: "ರೇಣುಕರಿಂದ ಶಂಕರಾಚಾರ್ಯರು ಲಿಂಗ ಪಡೆದರು.''

:: "ಅವರವರಿಗೆ ಅವರಂತಿದ್ದರೂ ತಾನು ತನ್ನಂತಿರಬೇಕು.'' (೧೪-೯-೭೭)

# ಹೀಗಿರಬೇಕೆ ?

—ಡಾ!! ಎಂ. ಎಸ್. ಸುಂಕಾಪುರ

೧೯೩೮ ನೇ ಇಸ್ವಿ; ಶ್ರಾವಣ ಮಾಸ. ಗದಗಿನ ಹತಗಲಿ ಪೇಠದಲ್ಲಿ ಸಂಭ್ರಮವೇ ಸಂಭ್ರಮ. ಕಿಕ್ಕಿರಿದಜನಸಮೂಹದ ಎದುರಿನಲ್ಲಿ ಕುಳಿತು ಪುರಾಣ ಪ್ರವಚನ ನಡೆಸುತ್ತಿದ್ದ ಒಬ್ಬ ಶರಣ. ಆಗ ನಾನೊಬ್ಬ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ. ಗೆಳೆಯರೊಡನೆ ಪುರಾಣ ಕೇಳಲು ಹೋದೆ. ಪುರಾಣಶೈಲಿ ಅದ್ಭುತವಾಗಿತ್ತು. ಹೇಳಿದಷ್ಟೂ ಕೇಳಬೇಕೆನಿಸುತ್ತಿತ್ತು. ಮಾಯೆಯ ನೃತ್ಯ, ಹಾವಭಾವ ಸನ್ಯಾಸಿಗೂ ಸಂಸಾರ ರುಚಿ ತೋರಿಸುವಂತೆ ಕೇಳಿ ಬರುತ್ತಿದ್ದವು. ಮಾಯೆಯ ಮಾಟಕ್ಕೆ ಮನಸೋಲದ ಅಲ್ಲಮಪ್ರಭುವಿನ ನಡೆ ನುಡಿ ಗಂಭೀರ. ಅವನು ಮಾಯೆಯನ್ನು ಮೆಟ್ಟಿ ಮಾಯಾಕೋಲಾಹಲನೆನಿಸಿದವ. ಚಾಮರಸನ ಪ್ರಭುಲಿಂಗಲೀಲೆ ರಸವತ್ತಾಗಿರಬಹುದು. ಆದರೆ ಅದನ್ನು ಇನ್ನೂ ರಸವತ್ತಾಗುವಂತೆ ಮಾಡುತ್ತಿದ್ದವರು ಅಂದಿನ ಪುರಾಣಿಕರು, ಅವರ ಅಸ್ಖಲಿತವಾಣಿ, ಪ್ರಕಾಂಡಪಾಂಡಿತ್ಯ ಕೇಳುವವರ ಮನದಲ್ಲಿ ತತ್ತ್ವದ ಬೀಜವನ್ನು ಬಿತ್ತುತ್ತಲಿದ್ದುದು ಹೆಮ್ಮೆಯ ವಿಷಯ. ಇಂತಹ ಪುರಾಣಪ್ರವಚನಪಟುಗಳು ಸಿಕ್ಕಲಾರರೆಂದು ಜನ ಆಡಿಕೊಳ್ಳುತ್ತಿತ್ತು. ಆ ಮಾತು ಸ್ಪರ್ಶಿಸಿತು ನನ್ನಂತಹ ಹುಡುಗ ಬುದ್ಧಿಗೆ. ಪುರಾಣ ನಿಂತಮೇಲೆ ನನಗೆ ತಿಳಿದುಬಂತು ಆ ಪುರಾಣ ಪ್ರವಚನ ಪಟು ಶ್ರೀ ಪಂಡಿತ ನಾಗಭೂಷಣ ಶಾಸ್ತ್ರಿಗಳೆಂದು. ಅಂದಿನಿಂದ ಅವರಲ್ಲಿ ಪೂಜ್ಯ ಭಾವನೆ ಹುಟ್ಟಿಕೊಂಡಿತು. ಅದು ಬರುಬರುತ್ತ ಗಟ್ಟಿಗೊಂಡು ನಿಂತಿತು. ಇಂದಿಗೂ ಆ ಭಾವನೆ ನನ್ನಲ್ಲಿ ನೆಲೆಯಾಗಿ ನಿಂತಿದೆ. ಕೊನೆಯವರೆಗೂ ಅದು ಉಳಿಯುವಲ್ಲಿ ಸಂಶಯವಿಲ್ಲ

ಪಂಡಿತ ನಾಗಭೂಷಣ ಶಾಸ್ತ್ರಿಗಳು ಕಾಯಕ ನಿಷ್ಠರು, ವ್ರತಧಾರಿಗಳು, ಮೇಲಾಗಿ ಸಂಸ್ಕೃತ ಪಂಡಿತರು, ಕನ್ನಡ ಮತ್ತು ಹಿಂದೀ ಭಾಷೆಗಳಲ್ಲಿ ಪ್ರಭುತ್ವದಿಂದ ಮಾತಾಡ

ಬಲ್ಲವರು. ಅವರು ಹುಟ್ಟಿದ ಊರು ಸಂಗನಾಳ. ಕಲಿತದ್ದು ನಿಡಗುಂದಿ, ಹಾಲಕೆರೆಯಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಕಾಶಿಗೆ ಹೋದರು. ತತ್ತ್ವಶಾಸ್ತ್ರಗಳನ್ನು ಓದಿಕೊಂಡು ಮರಳಿ ತಾಯ್ನಾಡಿಗೆ ಬಂದು ಗದಗಿನಲ್ಲಿ ನೆಲೆನಿಂತರು. ಗದಗ ಶಾಸ್ತ್ರಿಗಳ ಆಚಾರ ವಿಚಾರಕ್ಕೆ ಮಾರುಹೋದ ಕಾಲವದು, ನಡೆನುಡಿಗೆ ಮನಸೋತವರು ಬಹುಜನ. ಎಲ್ಲರ ಬಾಯಿ ಯಲ್ಲಿ ಪಂಡಿತ ನಾಗಭೂಷಣ ಶಾಸ್ತ್ರಿಗಳ ಮಾತೇ ಮಾತು. ಇದನ್ನೆಲ್ಲ ಕೇಳಿ ಪ್ರತ್ಯಕ್ಷ ಕಂಡವ ನಾನು. ಈ ಯುಗದ ಶರಣರೆಂಬುದನ್ನು ನನ್ನ ಭಾವನೆ ಇಂದಿಗೂ ತಿಳಿಯು ತ್ತಲಿದೆ. ಪಂಡಿತ ನಾಗಭೂಷಣ ಶಾಸ್ತ್ರಿಗಳು ಗದುಗಿನಲ್ಲಿ ಮಾಡಿದ ಸೇವೆ ಅಪಾರ ವಾದುದು. ಸದ್ಭಕ್ತರಲ್ಲಿ ಶರಣಸಾಹಿತ್ಯವನ್ನು ಪ್ರಚಾರಪಡಿಸುವ ಕಾರ್ಯಕ್ಕೆ ಅವರು ಮೊದಲು ಕೈಹಾಕಿದರು. ಮಠದಲ್ಲಿ ಪುರಾಣವಷ್ಟೇ ನಡೆದರೆ ಸಾಲದೆಂದು ನಂಬಿ, ಆಗಾಗ ಭಾಷಣಗಳನ್ನೇಪಡಿಸುತ್ತಿದ್ದರು. ಪಂಡಿತರನ್ನು ಬರಮಾಡಿಕೊಂಡು ಅವ ರೊಡನೆ ವಿಚಾರವಿನಿಮಯಮಾಡುತ್ತಿದ್ದರು. ಶಿವಾನುಭವ ಪರೀಕ್ಷೆಗಳನ್ನು ಏರ್ಪಡಿಸಿ ಬಾಲಕಬಾಲಿಕೆಯರಲ್ಲಿ ಶರಣ ಸಾಹಿತ್ಯದ ರುಚಿ ಹುಟ್ಟುವಂತೆ ಶ್ರಮಿಸುತ್ತಿದ್ದರು. ಧರ್ಮಪ್ರಚಾರಕ್ಕಾಗಿ ಸ್ವತಂತ್ರವಾದ ಮುದ್ರಣಾಲಯ ದೊರಕಿಸಿ, ಅದರ ಮುಖಾಂತರ ಧಾರ್ಮಿಕ ಪತ್ರಿಕೆ ನಡೆಸಿದರು. ತತ್ತ್ವಶಾಸ್ತ್ರ ಸುಲಭವಾಗಿ ಸರ್ವರಿಗೂ ತಿಳಿಯಲೆಂದು ಚಿಕ್ಕಚಿಕ್ಕ ಹೊತ್ತಿಗೆಗಳನ್ನು ಹೊರತಂದರು. ಅವರು ಇಷ್ಟೆಲ್ಲ ಕಾರ್ಯ ಗಳನ್ನು ಹಮ್ಮಿಕೊಳ್ಳಲು ಶ್ರೀ ಮುರುಘಾಮಠದ ಅಧ್ಯಕ್ಷರಾಗಿದ್ದ ಶ್ರೀ ಮೃತ್ಯುಂ-ಜಯ ಸ್ವಾಮಿಗಳವರ ಆಶೀರ್ವಾದ ಸದಾ ಇತ್ತೆಂಬುದನ್ನು ಮರೆಯಲಾಗದು.

ಶ್ರೀ ಮೃತ್ಯುಂಜಯ ಸ್ವಾಮಿಗಳವರ ಸಂಕಲ್ಪ ಬಹು ದೊಡ್ಡದು. ಶ್ರೀ ಪಂಡಿತ ನಾಗಭೂಷಣ ಶಾಸ್ತ್ರಿಗಳವರು ಧಾರವಾಡದಲ್ಲಿ ವಾಸ್ತವ್ಯ ಮಾಡಿದರೆ ಸಮಾಜ ಸೇವೆಗೆ ಹೆಚ್ಚು ಅನುಕೂಲವೆಂದು ಶ್ರೀಗಳವರು ಬಗೆದರೋ ಏನೊ ! ಪಂಡಿತ ನಾಗ ಭೂಷಣ ಶಾಸ್ತ್ರಿಗಳವರು ಧಾರವಾಡಕ್ಕೆ ಬಂದು ನಿಂತರು. ಆದರಿಂದ ಶ್ರೀ ಶಾಸ್ತ್ರಿ ಗಳವರ ಕಾರ್ಯಕ್ಷೇತ್ರವೂ ವಿಶಾಲವಾಯಿತು. ಇವರ ಪಾಂಡಿತ್ಯವನ್ನು ಕಂಡುಕೊಂಡ ಕರ್ನಾಟಕ ವಿಶ್ವವಿದ್ಯಾಲಯವು ಅವರ ಸೇವೆಯನ್ನು ಪಡೆಯಿತು. ವಚನಶಾಸ್ತ್ರದ ಸಂಶೋಧನೆಗೆ ಪಂಡಿತ ನಾಗಭೂಷಣಶಾಸ್ತ್ರಿಗಳು ಸಹಾಯಕರಾದರು. ವಚನ ಸಾಹಿತ್ಯ ಆಳವಾದುದು, ಅಗಲವಾದುದು. ಅದರಲ್ಲಿರುವ ಅನೇಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಶಾಸ್ತ್ರಿಗಳ ನೆರವು ಅಗತ್ಯವಾಗಿತ್ತೆಂದೇ ಹೇಳಬೇಕು. ಅಂತಹ ಹಲ ವಾರು ಪಂಡಿತರ ಸಹಾಯ ಸಂಪದ ಸಹಕಾರ ಬುದ್ಧಿ ಇದ್ದುದರಿಂದಲೇ ಸಮಗ್ರ ವಚನ ಸಾಹಿತ್ಯ ಪರಿಶುದ್ಧಿಹೊಂದಿ ವಿಶ್ವವಿದ್ಯಾಲಯದ ಮುಖಾಂತರ ಪ್ರಕಟನೆ ಪಡೆಯಿತೆಂದು ಹೇಳಿದರೆ ಅತಿಶಯೋಕ್ತಿ ಆಗಲಾರದು.

ಪಂಡಿತ ನಾಗಭೂಷಣ ಶಾಸ್ತ್ರಿಗಳವರು ಹೆಚ್ಚು ಮಾತಾಡುವದಿಲ್ಲ. ಅವರ ದೃಷ್ಟಿಯಲ್ಲಿ ಮಾತು ಮುತ್ತು. ವ್ಯರ್ಥ ಮಾತುಗಳು ಅವರಿಂದ ಬರಲಾರವು. ಅವರಿಗೆ ಯಾವಾಗಲೂ ಸಮಾಜ ಸುಧಾರಣೆಯ ಮಾತುಬೇಕು; ಧರ್ಮ-ತತ್ವಗಳ ಚಿಂತನೆಬೇಕು. ಇಂತಹ ವಿಚಾರಗಳೇ ಹೆಚ್ಚಿದಾಗ ತಮ್ಮ ಸಂಸಾರವನ್ನೇ ಕುರಿತು ವಿಚಾರಮಾಡುವದು ಕಡಿಮೆಯಾಗುವದು ಸಹಜ. ಶಾಸ್ತ್ರಿಗಳವರು ತಮ್ಮ ಸ್ಥಿತಿಗತಿಯ ವಿಚಾರಮಾಡುವದೇ ಕಡಿಮೆ. ತಂದಿಕ್ಕುವ ಶಿವನಿಗೆ ಬಡತನವೆ ? ಎಂದು ಕೇಳಿಕೊಳ್ಳುವ ಸ್ವಭಾವ ಅವರದು. ಬೇಕುಬೇಡುಗಳನ್ನು ಕುರಿತು ಅವರು ಚಿಂತಿಸಿದ್ದೇ ಕಡಿಮೆ. ಮಕ್ಕಳು ಹೇಳಿದ್ದಕ್ಕೆ, ಮಾಡಿದ್ದಕ್ಕೆ ಸಹಿಹಾಕುವ ಬುದ್ಧಿ ಅವರದು. ಹೀಗಾಗಿಯೋ ಏನೋ ? ಅವರಿಗೆ ತಾಪತ್ರಯಗಳು ಸದಾ ಬೆನ್ನುಹತ್ತಿರುವದನ್ನೆ ಕಾಣುತ್ತೇವೆ, ಕೇಳುತ್ತೇವೆ. ಪಂಡಿತರಿಗೆ, ಸಾಹಿತಿಗಳಿಗೆ, ಕಲಾಕಾರರಿಗೆ ಬಡತನವೇ ಆಧಾರವಾಗಿರಲು ಕಾರಣ ಕಂಡವರಿಲ್ಲ. ಕಾರಣ ಹೊಳೆದರೂ ಕಾರ್ಯರೂಪಕ್ಕೆ ಅದನ್ನು ಇಳಿಸುವದು ಸಾಧ್ಯವಾಗಿಲ್ಲ. ಅಂತೆಯೇ ಅವರ ಪಾಲಿಗೆ ಅಪಾರ ಬವಣೆ, ಅಧಿಕ ಬಡತನ. ಪಂಡಿತ ನಾಗಭೂಷಣ ಶಾಸ್ತ್ರಿಗಳವರಿಗೆ ಇರುವ ಚಿಂತೆ ಯಾರಿಗೂ ಇರಲಿಕ್ಕಿಲ್ಲವೆನಿಸುತ್ತದೆ. ಆದರೂ ಅವರು ಬೊಜರಿಯಲಾರರು; ಬಂದದ್ದು ಬರಲಿ, ಮಹಾದೇವನ ಕರುಣವಿರಲಿ ಎಂದು ಅವರು ಸುಮ್ಮನೆ ಇರುತ್ತಾರೆ. ಸುಖ ಹಿಗ್ಗಿಸಬಹುದು, ದುಃಖ ಕುಗ್ಗಿಸಬಹುದು. ಸುಖ, ದುಃಖ-ಯಾವದೇ ಬರಲಿ; ಒಂದೇದನ್ನು ಅನುಭೋಗಿಸುವದು ಸ್ಥಿತಪ್ರಜ್ಞನ ಲಕ್ಷಣ. ಪಂ. ನಾಗಭೂಷಣ ಶಾಸ್ತ್ರಿಗಳವರು ಅಂತಹ ಸ್ಥಿತಿಯಲ್ಲಿರುವದನ್ನು ಕಾಣುತ್ತೇವೆ. ಆಧ್ಯಾತ್ಮಿಕ ಒಲವು ಇಲ್ಲದವರಿಗೆ ಅದೆಂತು ಬಂದೀತು ? ಹೀಗಾಗಿ ಪಂಡಿತ ನಾಗಭೂಷಣ ಶಾಸ್ತ್ರಿಗಳು ಇದ್ದೂ ಇಲ್ಲದಂತಿದ್ದಾರೆ. ಏನೂ ಇಲ್ಲದಿದ್ದರೂ ಇದ್ದವರಂತೆ ಇದ್ದಾರೆ. ಅಂತಹ ಮಹಾನುಭಾವರಿಗೆ ನಾವೆಲ್ಲ ನೀಡುವದೇನು ? ಒಣ ಪ್ರಶಸ್ತಿ, ಬಿಂಬದ ನುಡಿ. ಅವರಿಗೆ ನಿಜವಾಗಿ ಕರುಣೆದೋರಬೇಕಾದವನು ಪರಮಾತ್ಮ. ಆತನು ಕಣ್ಣುದೆರೆಯಲೆಂದೂ ಪಂಡಿತರು ಪಂಡಿತರ ಜೀವನ ಸಾಗಿಸಲೆಂದೂ ಹಾರೈಸುತ್ತೇನೆ.

★★

ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತಮಹೋತ್ಸವ ಒಳ್ಳೇ ವಿಜೃಂಭಣೆಯಿಂದ ನೆರವೇರಲೆಂದು ಪರಶಿವನಲ್ಲಿ ಅತ್ಯಂತ ಭಕ್ತಿಭಾವದಿಂದ ಬೇಡಿಕೊಳ್ಳುತ್ತೇನೆ.

—ಷಣ್ಮುಖಪ್ಪ ಬಸಮ್ಮಣ್ಣ ಕಮಲಾಪುರ
ಸರಕಾರಿ ಶಿಕ್ಷಕರು, ಐನಾಪುರ (ಗುಲಬರ್ಗಾ)
(ಸಾವಧಾನದಿಂದ)

# ನನ್ನ ವಿದ್ಯಾ ಗುರು

—ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳವರು

ಪರಮ ಶ್ರದ್ಧಾಳುಗಳೂ, ಆಚಾರ-ವಿಚಾರಗಳ ಸಮನ್ವಯ ಸಂಪನ್ನರೂ, ಶಾಸ್ತ್ರಾನುಭವಿಗಳೂ, ಸಮಾಜಸೇವಾ ಕಾಂಕ್ಷಿಗಳೂ, ಹಿತಮಿತಭಾಷಿಗಳೂ, ಶಿವ ಸಿದ್ಧಾಂತ ರತ್ನ ಮತ್ತು ದರ್ಶನ ವಿಶಾರದ ಬಿರುದಾಂಕಿತರೂ ಆದ ಪಂ. ನಾಗ ಭೂಷಣ ಶಾಸ್ತ್ರಿಗಳು ಶಾಸ್ತ್ರೀಮಠ ಅವರ ಅಮೃತೋತ್ಸವವನ್ನು ಪರಮಪೂಜ್ಯರಾದ ಶ್ರೀ ನಿ ಪ್ರ. ಮಹಾಂತಸ್ವಾಮಿಗಳು ಮುರುಘಾಮಠ ಧಾರವಾಡ ಅವರ ದಿವ್ಯ ಅಧ್ಯಕ್ಷತೆಯಲ್ಲಿ ಸಮಾಜ ಬಾಂಧವರು ನೇರವೇರಿಸುತ್ತಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು.

ನಮ್ಮ ಸಂಸ್ಕೃತಾಭ್ಯಾಸದ ಪ್ರಥಮ ವಿದ್ಯಾ ಗುರುಗಳಾದುದರಿಂದ ೧೯೩೦ ನೇ ಇಸ್ವಿಯಿಂದಲೇ ಶಾಸ್ತ್ರಿಗಳ ಪರಿಚಯ ನಮಗಿದೆ. ಶ್ರೀ ಶಾಸ್ತ್ರಿಗಳವರು ಬಾಲ್ಯ ದಿಂದಲೇ ತುಂಬು ಸರಳ ಜೀವಿಗಳೂ, ನಿಷ್ಕಲ್ಮಷ ಸ್ವಭಾವದವರೂ ಆದ.ದರಿಂದಲೇ ಲಿಂಗಪೂಜಾನಿಷ್ಠರೂ, ವಿಶಾಲ ಮನೋಭಾವದವರೂ, ಉದಾರಿಗಳೂ ಆದ ಪೂಜ್ಯ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳು ಹಾಲಕೆರೆ ಅವರ ಕೃಪಾಕಟಾಕ್ಷ ಶಾಸ್ತ್ರಿಗಳ ಮೇಲೆ ಬಿತ್ತು. ಅವರ ಆಶೀರ್ವಾದವನ್ನೇ ಪಡೆದು ಉಚ್ಚಶಾಸ್ತ್ರಾಧ್ಯಯನಕ್ಕಾಗಿ ಶ್ರೀಕ್ಷೇತ್ರ ಕಾಶಿಯ ಜಗದ್ಗುರು ಜಯದೇವ ವಾಡಿಯಲ್ಲಿ ಸಫಲ ವಿದ್ಯಾರ್ಥಿ ಜೀವನ ವನ್ನು ಸಾಗಿಸಿ ವೇದಾಂತಾದಿ ಶಾಸ್ತ್ರಗಳೊಡನೆ ಆಳವಾದ ಸಾಹಿತ್ಯಾಭ್ಯಾಸವನ್ನು ಮಾಡಿ ತಾಯ್ನಾಡಿಗೆ ಮರಳಿ ಬಂದಾಗ ಪೂಜ್ಯ ಅನ್ನದಾನ ಮಹಾಸ್ವಾಮಿಗಳವರು ಗದುಗಿನ ಹಡಗಲಿಮಠದಲ್ಲಿ ಸಂಸ್ಕೃತ ಪಾಠಶಾಲೆಯೊಂದನ್ನು ಶ್ರೀ ಶಾಸ್ತ್ರಿಗಳ ಅಧ್ಯಾ ಪಕತ್ವ ಹಾಗೂ ವ್ಯವಸ್ಥಾಪಕತ್ವದಲ್ಲಿ ಪ್ರಾರಂಭಿಸಿದರು.

ಪಾಠಶಾಲೆಯನ್ನು ಪ್ರಾರಂಭಿಸಿದ ತರುಣದಲ್ಲಿಯೇ ಶಾಸ್ತ್ರಿಗಳ ವಿದ್ವತ್ತು ಮತ್ತು ಪ್ರವಚನ ಪಟುತ್ವ ಮೊದಲಾದವುಗಳು ಗದುಗಿನ ಜನರ ಮನವನ್ನು ಆಪ್ತ

ಶೀಘ್ರವಾಗಿ ಸೆರೆಹಿಡಿದವು. ದಿನೇ ದಿನೇ ಶಾಲೆಯ ವಿದ್ಯಾರ್ಥಿಗಳು, ಸಂಸ್ಕೃತಾಭ್ಯಾಸಿಗಳಾದ ವಟುಗಳು (ಮರಿದೇವರು) ಇವರ ಪಾಂಡಿತ್ಯದಿಂದ ಆಕೃಷ್ಟರಾಗುತ್ತಿದ್ದರು.

ಶ್ರೀ ಕ್ಷೇತ್ರ ಕಪೋತ ಗಿರಿಯ ನಂದಿವೇರಿ ಮಠದ ನಮ್ಮ ಗುರುಗಳಾದ ಪೂಜ್ಯ ಶಂಕರಸ್ವಾಮಿಗಳು ಈ ವಿಷಯವನ್ನು ತಿಳಿದು ಶಾಸ್ತ್ರಿಗಳಿಗೆ ನಮ್ಮ ವಿಚಾರವನ್ನು ತಿಳಿಸಿದ್ದರು. ಆದುದರಿಂದಲೇ ಸಂಸ್ಕೃತಾಭ್ಯಾಸಕ್ಕಾಗಿ ನಮ್ಮನ್ನು ಪಂಡಿತ ಶಾಸ್ತ್ರಿಗಳ ಬಳಿಗೆ ಕಳುಹಿದರು. ಬಾಲಕನಾಗಿದ್ದರೂ ನಾನೋರ್ವನೇ ಶ್ರೀ ಶಾಸ್ತ್ರಿಗಳನ್ನು ಅವರ ಮನೆಯಲ್ಲಿ ಕಾಣಲು ಹೋದೆ. ಆಗ ಶಾಸ್ತ್ರಿಗಳು ಲಿಂಗಪೂಜೆಗೆ ಕುಳಿತಿದ್ದರು. ಅಲ್ಲಿ ನಮ್ಮನ್ನು ಕರೆದು ಪ್ರೀತಿ ವಾತ್ಸಲ್ಯದಿಂದ ಕಂಡು ತಪ್ಪದೇ ಪಾಠಶಾಲೆಗೆ ಬರಲು ಮತ್ತು ಚೆನ್ನಾಗಿ ಅಭ್ಯಾಸಮಾಡಲು ತಿಳಿಸಿದರು.

**ಸಫಲ ಅಧ್ಯಾಪಕರು :** ಯೋಗ್ಯ ಅಧ್ಯಾಪಕನಲ್ಲಿರ ಬೇಕಾದ ಸದ್ಗುಣಗಳನ್ನು ಅಳವಡಿಸಿಕೊಂಡ ಶಾಸ್ತ್ರಿಗಳು ಪ್ರತಿಯೊಬ್ಬ ವಿದ್ಯಾರ್ಥಿಗೂ ಸಮಾನ ಭಾವದಿಂದ ಪಾಠ ಪ್ರವಚನಗಳನ್ನು ಮಾಡುತ್ತಿದ್ದರು. ಜೀವನದ ಸಫಲತೆಗೆ ಬೇಕಾದ ಧರ್ಮ ಹಾಗೂ ಸಂಸ್ಕೃತಿಯ ಆಚರಣೆಯು ವಿದ್ಯಾರ್ಥಿಗಳಲ್ಲಿ ಬೆಳೆಯಲೆಂದು ಪ್ರಾರ್ಥನೆ, ಪೂಜೆ, ವಚನಗಳ ಕಂಠಪಾಠ ಸ್ಪರ್ಧೆ, ಪ್ರಭಾತ ಪೇರಿ ಮೊದಲಾದ ಚಟುವಟಿಕೆಗಳನ್ನು ಮಾಡಿಸುತ್ತಿದ್ದರು. ಗದಗಿನ ನಾಗರಿಕರಿಗೆ ಮತ್ತು ವಿದ್ಯಾರ್ಥಿಗಳಿಗೂ ಬೋಧೆಯಾಗುವಂತೆ ಸಾಯಂಕಾಲ ಪುರಾಣ ಪ್ರವಚನಗನ್ನು ತಾವೇ ಮಾಡುತ್ತಿದ್ದರು. ಶಾಸ್ತ್ರಿಗಳ ಪ್ರತಿಭೆ-ಪಾಂಡಿತ್ಯವನ್ನು ಗುರುತಿಸಿ ಅನೇಕ ಜನ ಪಂಡಿತರು, ಕವಿಗಳು, ಪೂಜ್ಯ ಸ್ವಾಮಿಗಳು ಹಾಗೂ ಜಿಜ್ಞಾಸುಗಳು ಅವರಲ್ಲಿ ಆಗಾಗ್ಗೆ ಬರುತ್ತಿದ್ದುದು ಈಗಲೂ ನಮ್ಮ ಸ್ಮೃತಿಪಟಲದಲ್ಲಿ ಅಚ್ಚಳಿಯದೇ ಉಳಿದಿದೆ. ಕನ್ನಡನಾಡಿನ ಖ್ಯಾತ ಕವಿಗಳಾದ ದ್ಯಾಂಪುರ ಚೆನ್ನಕವಿಗಳು, ಪಂಡಿತ ಚಂದ್ರಶೇಖರ ಶಾಸ್ತ್ರಿಗಳು, ಕಲಿಗಣನಾಥ ಶಾಸ್ತ್ರಿಗಳು, ಕರ್ಜಗಿ ಶಿವಯೋಗಪ್ಪ ಶೆಟ್ಟರು, ಹರ್ಡೇಕರ ಮಂಜಪ್ಪನವರು, ಬಳ್ಳಾರಿ ಗುರುಸಿದ್ದಪ್ಪನವರು ಇನ್ನೂ ಮೊದಲಾದವರು ಕೂಡಿ ಆಗಾಗ ವಿಚಾರ ವಿನಿಮಯ ಮಾಡುತ್ತಿದ್ದರು. ಕಾಶಿ ಕ್ಷೇತ್ರದಲ್ಲಿರುವಾಗಲೇ ತಮಗೆ ಅತ್ಯಂತ ಸ್ನೇಹಭಾಜನರು ಮತ್ತು ನಮ್ಮ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧ್ಯಕ್ಷರೂ ಅಭಿನವ ಅಲ್ಲಮರೂ ಆಗಿದ್ದ ಪೂಜ್ಯ ನಿ. ಪ್ರ. ಮಹಾದೇವಸ್ವಾಮಿಗಳು ಹಾಗೂ ಧಾರವಾಡದ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳು, ನವಿಲಗುಂದ ಮಹಾಸ್ವಾಮಿಗಳವರು ಇನ್ನೂ ಮುಂತಾದವರು ಶಾಸ್ತ್ರಿಗಳ ಕಾರ್ಯ ಕುಶಲತೆಯನ್ನು ಕಂಡು ಸಂತೋಷಭರಿತರಾಗಿದ್ದರು. ಶಾಸ್ತ್ರಿಗಳವರಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳು ಈಗ ಉನ್ನತ ಅಧಿಕಾರದಲ್ಲಿದ್ದಾರೆ. ಮತ್ತು ಸಾಹಿತಿಗಳೂ ಕವಿಗಳೂ ಆಗಿದ್ದಾರೆ. ಅಂಥವರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ

# ನನ್ನ ವಿದ್ಯಾ ಗುರು

—ಶ್ರೀ ನಿ. ಪ್ರ. ಶಿವಕುಮಾರಸ್ವಾಮಿಗಳವರು

ಪರಮ ಶ್ರದ್ಧಾಳುಗಳೂ, ಆಚಾರ-ವಿಚಾರಗಳ ಸಮನ್ವಯ ಸಂಪನ್ನರೂ, ಶಾಸ್ತ್ರಾನುಭವಿಗಳೂ, ಸಮಾಜಸೇವಾ ಕಾಂಕ್ಷಿಗಳೂ, ಹಿತಮಿತಭಾಷಿಗಳೂ, ಶಿವ ಸಿದ್ಧಾಂತ ರತ್ನ ಮತ್ತು ದರ್ಶನ ವಿಶಾರದ ಬಿರುದಾಂಕಿತರೂ ಆದ ಪಂ. ನಾಗ ಭೂಷಣ ಶಾಸ್ತ್ರಿಗಳು ಶಾಸ್ತ್ರೀಮಠ ಅವರ ಅಮೃತೋತ್ಸವವನ್ನು ಪರಮಪೂಜ್ಯರಾದ ಶ್ರೀ ನಿ ಪ್ರ. ಮಹಾಂತಸ್ವಾಮಿಗಳು ಮುರುಘಾಮಠ ಧಾರವಾಡ ಅವರ ದಿವ್ಯ ಅಧ್ಯಕ್ಷತೆಯಲ್ಲಿ ಸಮಾಜ ಬಾಂಧವರು ನೇರವೇರಿಸುತ್ತಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು.

ನಮ್ಮ ಸಂಸ್ಕೃತಾಭ್ಯಾಸದ ಪ್ರಥಮ ವಿದ್ಯಾ ಗುರುಗಳಾದುದರಿಂದ ೧೯೩೨ ನೇ ಇಸ್ವಿಯಿಂದಲೇ ಶಾಸ್ತ್ರಿಗಳ ಪರಿಚಯ ನಮಗಿದೆ. ಶ್ರೀ ಶಾಸ್ತ್ರಿಗಳವರು ಬಾಲ್ಯ ದಿಂದಲೇ ತುಂಬು ಸರಳ ಜೀವಿಗಳೂ, ನಿಷ್ಕಲ್ಮಷ ಸ್ವಭಾವದವರೂ ಆದ.ದರಿಂದಲೇ ಲಿಂಗಪೂಜಾನಿಷ್ಠರೂ, ವಿಶಾಲ ಮನೋಭಾವದವರೂ, ಉದಾರಿಗಳೂ ಆದ ಪೂಜ್ಯ ಶ್ರೀ ನಿ. ಪ್ರ. ಅನ್ನದಾನ ಮಹಾಸ್ವಾಮಿಗಳು ಹಾಲಕೆರೆ ಅವರ ಕೃಪಾಕಟಾಕ್ಷ ಶಾಸ್ತ್ರಿಗಳ ಮೇಲೆ ಬಿತ್ತು. ಅವರ ಆಶೀರ್ವಾದವನ್ನೇ ಪಡೆದು ಉಚ್ಚಶಾಸ್ತ್ರಾಧ್ಯಯನಕ್ಕಾಗಿ ಶ್ರೀಕ್ಷೇತ್ರ ಕಾಶಿಯ ಜಗದ್ಗುರು ಜಯದೇವ ವಾಡಿಯಲ್ಲಿ ಸಫಲ ವಿದ್ಯಾರ್ಥಿ ಜೀವನ ವನ್ನು ಸಾಗಿಸಿ ವೇದಾಂತಾದಿ ಶಾಸ್ತ್ರಗಳೊಡನೆ ಆಳವಾದ ಸಾಹಿತ್ಯಾಭ್ಯಾಸವನ್ನು ಮಾಡಿ ತಾಯ್ನಾಡಿಗೆ ಮರಳಿ ಬಂದಾಗ ಪೂಜ್ಯ ಅನ್ನದಾನ ಮಹಾಸ್ವಾಮಿಗಳವರು ಗದುಗಿನ ಹಡಗಲಿಮಠದಲ್ಲಿ ಸಂಸ್ಕೃತ ಪಾಠಶಾಲೆಯೊಂದನ್ನು ಶ್ರೀ ಶಾಸ್ತ್ರಿಗಳ ಅಧ್ಯಾಪಕತ್ವ ಹಾಗೂ ವ್ಯವಸ್ಥಾಪಕತ್ವದಲ್ಲಿ ಪ್ರಾರಂಭಿಸಿದರು.

ಪಾಠಶಾಲೆಯನ್ನು ಪ್ರಾರಂಭಿಸಿದ ತರುಣದಲ್ಲಿಯೇ ಶಾಸ್ತ್ರಿಗಳ ವಿದ್ವತ್ತು ಮತ್ತು ಪ್ರವಚನ ಪಟುತ್ವ ಮೊದಲಾದವುಗಳು ಗದುಗಿನ ಜನರ ಮನವನ್ನು ಆಕರ್ಷಿ

ಶೀಘ್ರವಾಗಿ ಸೆರೆಹಿಡಿದವು. ದಿನೇ ದಿನೇ ಶಾಲೆಯ ವಿದ್ಯಾರ್ಥಿಗಳು, ಸಂಸ್ಕೃತಾಭ್ಯಾಸಿಗಳಾದ ವಟುಗಳು (ಮರಿದೇವರು) ಇವರ ಪಾಂಡಿತ್ಯದಿಂದ ಆಕೃಷ್ಟರಾಗುತ್ತಿದ್ದರು.

ಶ್ರೀ ಕ್ಷೇತ್ರ ಕಪೋತ ಗಿರಿಯ ನಂದಿವೇರಿ ಮಠದ ನಮ್ಮ ಗುರುಗಳಾದ ಪೂಜ್ಯ ಶಂಕರಸ್ವಾಮಿಗಳು ಈ ವಿಷಯವನ್ನು ತಿಳಿದು ಶಾಸ್ತ್ರಿಗಳಿಗೆ ನಮ್ಮ ವಿಚಾರವನ್ನು ತಿಳಿಸಿದ್ದರು. ಆದ್ದರಿಂದಲೇ ಸಂಸ್ಕೃತಾಭ್ಯಾಸಕ್ಕಾಗಿ ನಮ್ಮನ್ನು ಪಂಡಿತ ಶಾಸ್ತ್ರಿಗಳ ಬಳಿಗೆ ಕಳುಹಿದರು. ಬಾಲಕನಾಗಿದ್ದರೂ ನಾನೋರ್ವನೇ ಶ್ರೀ ಶಾಸ್ತ್ರಿಗಳನ್ನು ಅವರ ಮನೆಯಲ್ಲಿ ಕಾಣಲು ಹೋದೆ. ಆಗ ಶಾಸ್ತ್ರಿಗಳು ಲಿಂಗಪೂಜೆಗೆ ಕುಳಿತಿದ್ದರು. ಅಲ್ಲಿ ನಮ್ಮನ್ನು ಕರೆದು ಪ್ರೀತಿ ವಾತ್ಸಲ್ಯದಿಂದ ಕಂಡು ತಪ್ಪದೇ ಪಾಠಶಾಲೆಗೆ ಬರಲು ಮತ್ತು ಚೆನ್ನಾಗಿ ಅಭ್ಯಾಸಮಾಡಲು ತಿಳಿಸಿದರು.

ಸಫಲ ಅಧ್ಯಾಪಕರು : ಯೋಗ್ಯ ಅಧ್ಯಾಪಕನಲ್ಲಿರ ಬೇಕಾದ ಸದ್ಗುಣಗಳನ್ನು ಅಳವಡಿಸಿಕೊಂಡ ಶಾಸ್ತ್ರಿಗಳು ಪ್ರತಿಯೊಬ್ಬ ವಿದ್ಯಾರ್ಥಿಗೂ ಸಮಾನ ಭಾವದಿಂದ ಪಾಠ ಪ್ರವಚನಗಳನ್ನು ಮಾಡುತ್ತಿದ್ದರು. ಜೀವನದ ಸಫಲತೆಗೆ ಬೇಕಾದ ಧರ್ಮ ಹಾಗೂ ಸಂಸ್ಕೃತಿಯ ಆಚರಣೆಯು ವಿದ್ಯಾರ್ಥಿಗಳಲ್ಲಿ ಬೆಳೆಯಲೆಂದು ಪ್ರಾರ್ಥನೆ, ಪೂಜೆ, ವಚನಗಳ ಕಂಠಪಾಠ ಸ್ಪರ್ಧೆ, ಪ್ರಭಾತ ಪೇರಿ ಮೊದಲಾದ ಚಟುವಟಿಕೆಗಳನ್ನು ಮಾಡಿಸುತ್ತಿದ್ದರು. ಗದಗಿನ ನಾಗರಿಕರಿಗೆ ಮತ್ತು ವಿದ್ಯಾರ್ಥಿಗಳಿಗೂ ಬೋಧೆಯಾಗುವಂತೆ ಸಾಯಂಕಾಲ ಪುರಾಣ ಪ್ರವಚನಗನ್ನು ತಾವೇ ಮಾಡುತ್ತಿದ್ದರು. ಶಾಸ್ತ್ರಿಗಳ ಪ್ರತಿಭೆ-ಪಾಂಡಿತ್ಯವನ್ನು ಗುರುತಿಸಿ ಅನೇಕ ಜನ ಪಂಡಿತರು, ಕವಿಗಳು, ಪೂಜ್ಯ ಸ್ವಾಮಿಗಳು ಹಾಗೂ ಜಿಜ್ಞಾಸುಗಳು ಅವರಲ್ಲಿ ಆಗಾಗ್ಗೆ ಬರುತ್ತಿದ್ದುದು ಈಗಲೂ ನಮ್ಮ ಸ್ಮೃತಿಪಟಲದಲ್ಲಿ ಅಚ್ಚಳಿಯದೇ ಉಳಿದಿದೆ. ಕನ್ನಡನಾಡಿನ ಖ್ಯಾತ ಕವಿಗಳಾದ ದ್ಯಾಂಪುರ ಚೆನ್ನಕವಿಗಳು, ಪಂಡಿತ ಚಂದ್ರಶೇಖರ ಶಾಸ್ತ್ರಿಗಳು, ಕಲಿಗಣನಾಥ ಶಾಸ್ತ್ರಿಗಳು, ಕರ್ಜಗಿ ಶಿವಯೋಗಪ್ಪ ಶೆಟ್ಟರು, ಹರ್ಡೇಕರ ಮಂಜಪ್ಪನವರು, ಬಳ್ಳಾರಿ ಗುರುಸಿದ್ದಪ್ಪನವರು ಇನ್ನೂ ಮೊದಲಾದವರು ಕೂಡಿ ಆಗಾಗ ವಿಚಾರ ವಿನಿಮಯ ಮಾಡುತ್ತಿದ್ದರು. ಕಾಶಿ ಕ್ಷೇತ್ರದಲ್ಲಿರುವಾಗಲೇ ತಮಗೆ ಅತ್ಯಂತ ಸ್ನೇಹಭಾಜನರು ಮತ್ತು ನಮ್ಮ ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಮಠಾಧ್ಯಕ್ಷರೂ ಅಭಿನವ ಅಲ್ಲಮರೂ ಆಗಿದ್ದ ಪೂಜ್ಯ ನಿ. ಪ್ರ. ಮಹಾದೇವಸ್ವಾಮಿಗಳು ಹಾಗೂ ಭಾರವಾಡದ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳು, ನವಿಲಗುಂದ ಮಹಾಸ್ವಾಮಿಗಳವರು ಇನ್ನೂ ಮುಂತಾದವರು ಶಾಸ್ತ್ರಿಗಳ ಕಾರ್ಯ ಕುಶಲತೆಯನ್ನು ಕಂಡು ಸಂತೋಷಭರಿತರಾಗಿದ್ದರು. ಶಾಸ್ತ್ರಿಗಳವರಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳು ಈಗ ಉನ್ನತ ಅಧಿಕಾರದಲ್ಲಿದ್ದಾರೆ. ಮತ್ತು ಸಾಹಿತಿಗಳೂ ಕವಿಗಳೂ ಆಗಿದ್ದಾರೆ. ಅಂಥವರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ

ಉಪಕುಲಪತಿಗಳಾದ ಡಾ॥ ಆರ್, ಸಿ. ಹಿರೇಮಠ, ಗದುಗಿನ ಶಿವಕವಿ ಬಸವರಾಜ ತಾಪ್ಪದ ಮೊದಲಾದವರ ಹೆಸರುಗಳನ್ನು ಇಲ್ಲಿ ಸೂಚಿಸಬಹುದಾಗಿದೆ. ಶಾಸ್ತ್ರಿಗಳ ವರಲ್ಲಿ ಅಧ್ಯಯನ ಮಾಡಿದ ಅನೇಕ ಮರಿದೇವರುಗಳು ಮಠಾಧಿಪತಿಗಳಾಗಿ ಸಮಾಜ ಸೇವಾ ನಿರತರಾಗಿರುವುದು ಶಾಸ್ತ್ರಿಗಳವರಿಗೆ ಸಂತೋಷವನ್ನುಂಟುಮಾಡದೇ ಇರ ಲಾರದು.

ಶ್ರೀ ಶಾಸ್ತ್ರಿಗಳಲ್ಲಿ ನಾವು ೩-೪ ವರ್ಷ ಅಭ್ಯಾಸಮಾಡಿ, ಕಲ್ಕತ್ತಾ ಸಂಸ್ಕೃತ ಅಸೋಶಿಯೇಶನ್ನಿನವರು ಏರ್ಪಡಿಸಿದ್ದ ಕಾವ್ಯ ಪರೀಕ್ಷೆ ಕಟ್ಟಲು ಹುಬ್ಬಳ್ಳಿ ಮೂರು ಸಾವಿರಮಠ ಮತ್ತು ಯಾದಗಿರಿ ಶಂಕರ ಕಾಲೇಜಿಗೆ ಹೋಗಿ ಕಾವ್ಯತೀರ್ಥ ಮತ್ತು ವೇದಾಂತ ವ್ಯಾಕರಣ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬಂದು ಶಾಸ್ತ್ರಿಗಳವರನ್ನು ಕಂಡಾಗ ಪರಮ ಸಂತೋಷದಿಂದ ನೀವು ಇನ್ನೂ ಹೆಚ್ಚಿನ ಅಭ್ಯಾಸಕ್ಕಾಗಿ ಹೋಗ ಬೇಕೆಂದು ಸೂಚಿಸಿದರು. ಪರಂತು ಆಸಮಯದಲ್ಲಿ ನಮಗೆ ಕಾಶಿಗೆ ಹೋಗುವದು ಕನಸಿನ ಮಾತಾಗಿತ್ತು. ಅವರ ಸಲಹೆಯಂತೆ ಪ್ರಯತ್ನಿಸಿದೆವು. ನಮ್ಮ ಗುರುಗಳ ಮತ್ತು ಕೆಲವು ಜನಗಳ ಮುಂದೆ ಈ ವಿಷಯವನ್ನಿಟ್ಟಾಗ ದೈವಸಂಕಲ್ಪದಿಂದ ಪ್ರೋತ್ಸಾಹ ದೊರೆಯಿತು. ಅಲ್ಪಾವಧಿಯಲ್ಲಿಯೇ ನಮ್ಮ ಕಾಶೀ ಯಾತ್ರೆಯ ಸಿದ್ಧತೆಯೂ ನಡೆಯಿತು. ಆ ಸಮಯದಲ್ಲಿ ಧಾರವಾಡ ಮುರ ಘಾಮಠದಲ್ಲಿ ಸ್ವಾಮಿಗಳವರು ಮುಕ್ಕಾಂ ಮಾಡಿದ್ದರು. ಅವರ ದರ್ಶನಕ್ಕಾಗಿ ನಾವು ಧಾರವಾಡಕ್ಕೆ ಹೋದೆವು. ಜಗದ್ಗುರುಗಳವರ ದರ್ಶನ ಪಡೆದು ನನ್ನ ಸಂಕಲ್ಪವನ್ನು ನಿವೇದಿಸಿ ಕೊಂಡಾಗ ಶ್ರೀ ಜಗದ್ಗುರುಗಳವರು ಅವಶ್ಯಕವಾದ ಪರೀಕ್ಷೆಮಾಡಿ ಕೃಪೆಗೈದು ಸಂತೋಷದಿಂದ ಶ್ರೀಕ್ಷೇತ್ರ ಕಾಶಿಗೆ ಹೋಗಲು ಅಪ್ಪಣೆ ಕೊಡಿಸಿದರು ಮತ್ತು ಜಯದೇವ ವಾಡಿಯಲ್ಲಿ ಇರುವಂತೆ ಜಯವಿಭವ ದೇವರು (ಅನಂತರ ಜಗದ್ಗುರು ಗಳಾದ) ಅವರಿಗೆ ಪತ್ರವನ್ನು ಕೊಟ್ಟು ಆಶೀರ್ವದಿಸಿದರು. ಪೂಜ್ಯ ಶ್ರೀ ಮೃತ್ಯುಂ- ಜಯ ಸ್ವಾಮಿಗಳೂ ಸಹ ಸಂತೋಷದಿಂದ ಆಶೀರ್ವದಿಸಿದರು.

ಆಗ ಗದುಗಿಗೆ ಬಂದು ಪುನಃ ಶಾಸ್ತ್ರಿಗಳವರನ್ನು ಕಂಡು ನಮ್ಮ ಪ್ರಯಾಣದ ವಿಷಯ ಸೂಚಿಸಿ ಕಾಶಿಯ ಮತ್ತು ಪಂಡಿತರ ಪರಿಚಯವನ್ನು ಕೇಳಿದಾಗ "ಶಿಷ್ಯಾದಿ ಚ್ಛೇತ್ ಪರಾಜಯಂ" ಎಂಬಂತೆ ಶಾಸ್ತ್ರಿಗಳು ಅವ್ಯಾಜಪ್ರೇಮದಿಂದಲೇ ಎಲ್ಲ ವಿಷಯ ಗಳ ಪರಿಚಯಮಾಡಿಕೊಟ್ಟರು.

**ವಿದ್ಯಾಪೀಠ ಸ್ಥಾಪಕರು :** ನಾವು ಕಾಶಿಗೆ ತೆರಳಿದ ನಂತರ ಗದುಗಿನಲ್ಲಿ ಅಖಿಲ ಭಾರತ ವೀರಶೈವ ವಿದ್ಯಾಪೀಠವೊಂದನ್ನು ಸ್ಥಾಪಿಸಿ ಅದಕ್ಕೆ ಬೇಕಾದ ರೂಪು ರೇಷೆಗಳನ್ನು ತಯಾರಿಸಿ ಕೆಲವು ಚಿಕ್ಕಚಿಕ್ಕ ಪಠ್ಯಪುಸ್ತಕಗಳನ್ನು ರಚಿಸಿ ಪರೀಕ್ಷೆಗಳ

ಮೂಲಕವಾಗಿ ವಚನಸಾಹಿತ್ಯ ಮತ್ತು ವೀರಶೈವ ತತ್ವಗಳನ್ನು ಪ್ರಚಾರಗೊಳಿಸುವಲ್ಲಿ ಶಾಸ್ತ್ರಿಗಳು ಬಹಳವಾಗಿ ಶ್ರಮಿಸಿದ್ದಾರೆ.

ನಾವು ಒಂದು ಸಲ ಕಾಶಿಯಿಂದ ಬೇಸಿಗೆ ರಜೆಯಲ್ಲಿ ಬಂದಾಗ ಎಂದಿನಂತೆ ಶಾಸ್ತ್ರಿಗಳನ್ನು ಕಾಣಲು ಗದುಗಿಗೆ ಹೋದಾಗ ವಿದ್ಯಾಪೀಠದ ಕೆಲವು ಪಠ್ಯಪುಸ್ತಕಗಳನ್ನು ಕೊಟ್ಟು ಕಾಶಿಯಲ್ಲಿಯೂ ಒಂದು ಕೇಂದ್ರವನ್ನು ಮಾಡಿ ಅಲ್ಲಿಯೂ ಪರೀಕ್ಷೆಗಳನ್ನು ನಡೆಸಬೇಕೆಂದು ಮಾರ್ಮಿಕವಾಗಿ ತಿಳಿಸಿದರು.

ಸಾವಧಾನ ಸಂಪಾದಕರು : ವಿದ್ಯಾಪೀಠವನ್ನು ಅತ್ಯಂತ ಯಶಸ್ವಿಯಾಗಿ ನಡೆಸುತ್ತಿರುವ ಸಮಯದಲ್ಲಿ ಪ್ರಜ್ಞಾಚಕ್ಷುಗಳಾದ ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳವರು ಶಾಸ್ತ್ರಿಗಳ ಕಾರ್ಯದಕ್ಷತೆ, ಧರ್ಮಾಭಿಮಾನ ಮೊದಲಾದವುಗಳನ್ನು ಗುರುತಿಸಿ ಅವರನ್ನು ಧಾರವಾಡಕ್ಕೆ ಬರಮಾಡಿಕೊಂಡು "ಸಾವಧಾನ"ವೆಂಬ ಪತ್ರಿಕೆಯನ್ನು ಪಂಡಿತ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೂ ಸಾವಧಾನ ಪತ್ರಿಕೆಯು ಅಖಿಲ ಭಾರತ ಶಿವಾನುಭವ ಸಂಸ್ಥೆಯ ಪಾಕ್ಷಿಕ ಪತ್ರಿಕೆಯಾಗಿ ಸಮಾಜದ ಜನಮನವನ್ನು ಹಸನಗೊಳಿಸುತ್ತ ಪೂಜ್ಯ ಮಹಾಂತಸ್ವಾಮಿಗಳ ಅಭಯ ದೃಷ್ಟಿಯಿಂದ ಯಶಸ್ವಿಯಾಗಿ ಮುಂದುವರೆಸುತ್ತಿರುವ ಮೂಲಕ ಶಾಸ್ತ್ರಿಗಳು ಸಮಾಜಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಪುರಾಣ-ಪ್ರವಚನ-ಭಾಷಣಗಳ ಮಾಧ್ಯಮದಿಂದ ಮತ್ತು ಗ್ರಂಥರಚನೆ, ಸಂಪಾದನೆ, ಲೇಖನ ಮೊದಲಾದವುಗಳಿಂದಲೂ ಶಾಸ್ತ್ರಿಗಳು ಬಹುಮುಖ ಪ್ರತಿಭೆಯನ್ನು ತೋರಿದ್ದಾರೆ. ಸಮಾಜಕ್ಕಾಗಿ ತಮ್ಮ ಜೀವನವನ್ನೇ ಸವೆಸಿದ್ದಾರೆಂದರೆ ತಪ್ಪಾಗಲಾರದು. ಕರ್ನಾಟಕ ವಿಶ್ವವಿದ್ಯಾನಿಲಯದ ಬಸವೇಶ್ವರ ಪೀಠದ ವಚನ ವಿಭಾಗದಲ್ಲಿ ಸೇವೆಸಲ್ಲಿಸಿರುವರು. ಒಟ್ಟಿನಲ್ಲಿ ಅವರ ಕಾರ್ಯದಕ್ಷತೆಯನ್ನು, ಪಾಂಡಿತ್ಯವನ್ನು ಲಿಪಿಬದ್ಧಮಾಡಲು ಈಗ ಸಮಯಾಭಾವದ ಮೂಲಕ ಅತೀ ಸಂಕ್ಷೇಪವಾಗಿ ನಾಲ್ಕು ಮಾತುಗಳಲ್ಲಿ ಮಾತ್ರ ವಿವರಿಸಲಾಗಿದೆ. ಶಾಸ್ತ್ರಿಗಳ ಪ್ರತಿಭೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಸರಕಾರವು ಸನ್ಮಾನಿಸಿ ಗೌರವಿಸಿರುವುದು ಸರ್ವಶ್ರುತವಾದುದು.

ನಿರಭಿಮಾನಿ, ನಿರಪೇಕ್ಷ ಬುದ್ಧಿಯುಳ್ಳ ಇಂತಹ ಪಂಡಿತರ ಅಮೃತೋತ್ಸವವನ್ನು ಆಚರಿಸುವುದು, ಅವರಿಗೆ ಸಮ್ಮಾನ ಸಲ್ಲಿಸುತ್ತಿರುವುದು ಮತ್ತು ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ತುಂಬಾ ಉಚಿತವಾಗಿದೆ. ಶ್ರೀ ಶಾಸ್ತ್ರಿಗಳು ಶತಮಾನೋತ್ಸವವನ್ನು ಕಂಡು ಇನ್ನೂ ಸಮಾಜಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸುವಂತಾಗಲೆಂದು ಹೃದಯ ತುಂಬಿ ಹರೈಸುತ್ತೇವೆ.

ಇತಿ ಶಿವಂ

# ಜ್ಞಾನಭೂಷಣ

—ಶ್ರೀ ಸಿದ್ಧರಾಮ ದೇವರು

"ಕನ್ನಡನಾಡು ಪುಣ್ಯದ ಬೀಡು" ಎಂಬ ಮಾತನ್ನು ನಾವು ಮೇಲಿಂದ ಮೇಲೆ ಕೇಳುತ್ತೇವೆ. ಈ ನಾಡು ಪುಣ್ಯದ ಬೀಡು ಎನಿಸಿಕೊಳ್ಳಲಿಕ್ಕೆ ಸಾಕಷ್ಟು ಹಿನ್ನೆಲೆ ಇದ್ದು ಕಾಣುವದರಿಂದ ಸುಲಭ ನುಡಿಯಲಿಕ್ಕೆ ಸಾಧ್ಯವಾಗಿದೆ. ನಮ್ಮ ಈ ನಾಡಿನಲ್ಲಿ ಎಷ್ಟೋ ಯೋಗಿಗಳೂ ತಪಸ್ವಿಗಳೂ, ಋಷಿಮುನಿಗಳೂ ಜನ್ಮವೆತ್ತಿದಂತೆ ಮಹಾ ಮಹಾ ಪಂಡಿತರೂ ಜನ್ಮವೆತ್ತಿದ್ದರಿಂದ ಮತ್ತಷ್ಟು ನಮ್ಮ ನಾಡಿಗೆ ಜೀವ ತುಂಬಿದ ಕೀರ್ತಿ ಪತಾಕೆ ಹಾರಲು ಸಾಧ್ಯವಾಗಿದೆ. ಇಂಥ ಕೀರ್ತಿ ಪತಾಕೆ ಸದಾ ಚೈತನ್ಯವುಳ್ಳದ್ದಾಗಿರಲಿ ಎಂಬ ಉದ್ದೇಶದಿಂದ ೭೫ ವರ್ಷಗಳ ಹಿಂದೆ ನಮ್ಮ ಈ ನಾಡು ಒಬ್ಬ ಮಹಾ ಪಂಡಿತರಿಗೆ ಜನ್ಮ ಕೊಟ್ಟಿತು. ಅವರೇ ನಮ್ಮ ಪಂಡಿತ ನಾಗಭೂಷಣಶಾಸ್ತ್ರಿಗಳು. ಜ್ಞಾನಭೂಷಣರಾಗಿದ್ದ ನಾಗಭೂಷಣರು ಅರ್ಥಪೂರ್ಣವಾಗಿರುವರು.

"ತುಂಬಿದ ಕೊಡ ತುಳುಕುವದಿಲ್ಲ" ಎಂಬ ಗಾದೆ ಮಾತು ಸತ್ಯವಾಗಲಿಕ್ಕೆ ಈ ಪಂಡಿತರೇ ಸಾಕ್ಷಿ. ಅಪಾರವಾದ ಜ್ಞಾನವನ್ನು ಪಡೆದರೂ ಕೂಡಾ ನೋಡುವರ ದೃಷ್ಟಿಗೆ ಸೌಮ್ಯವಾಗಿ ಕುಡು ಕೇಳಿದವರ ಪ್ರಶ್ನೆಗೆ ಸರಿಯಾದ ಉತ್ತರವನ್ನು ಸುಲಭವಾಗಿ ಕೊಟ್ಟು ಆನಂದ ಪಡಿಸುವ ಶಕ್ತಿ ಇವರಲ್ಲಿ ತುಂಬಿ ತುಳುಕುತ್ತದೆ. ಇಂಥ ಜನ ಎಲ್ಲ ಕಡೆಗೂ ಇರುವದು ಅಪರೂಪ. ಸ್ವಲ್ಪನ್ನು ತಿಳಿದು ಸರ್ವವನ್ನು ತಿಳಿದವರಂತೆ ಕಾ ಕಾ ಎಂದು ಕಾಗೆಯಂತೆ ಜಂಭಕೊಚ್ಚಿಕೊಳ್ಳುವ ಜನರೇ ಸಾಕಷ್ಟು. ಆದರೆ ಈ ಪಂಡಿತರು ಹಾಗಲ್ಲ "ಮಾತು ಬೆಳ್ಳಿ ಮೌನ ಬಂಗಾರ" ಎಂಬ ಮಾತಿಗೆ ಸರಿಯಾಗಿ ಹೊಂದಿಕೊಂಡು ನಡೆಯುತ್ತಾರೆ. ಪ್ರಾಣಿಗಳಲ್ಲಿ ಪವಿತ್ರ ಹಾಗು ಸಭ್ಯ ಪ್ರಾಣಿ ಆಕಳು.

ಇದು ತನ್ನ ಕರುವಿಗೆ ಹಾಲುಣಿಸಿ ಆನಂದ ಪಡಿಸುವಂತೆ, ಜ್ಞಾನದ ಹಸಿವಿನಿಂದ ಬಂದ ಎಷ್ಟೋ ಜನರಿಗೆ ಜ್ಞಾನ ದಾನ ಮಾಡಿದ ಕೀರ್ತಿ ಇವರಿಗೆ ಸಂಪೂರ್ಣವಾಗಿ ಸಲ್ಲುತ್ತದೆ. ಇವರ ಜ್ಞಾನ ದಾನ ಪಡೆದು ಧನ್ಯನಾದ ನಾನು ಇನ್ನುಳಿದ ದಾನಕ್ಕಿಂತ ಇವರು ನೀಡಿದ ಜ್ಞಾನದಾನವೇ ಶ್ರೇಷ್ಠವೆಂದು ಜಂಭಕೊಚ್ಚಿಕೊಳ್ಳಲಿಕ್ಕೆ ನನಗೆ ಹೆಮ್ಮೆ ಎನಿಸುತ್ತದೆ. ಸಾಕಷ್ಟು ಪ್ರತ್ಯಕ್ಷವಾಗಿ ಅನೇಕ ಗ್ರಂಥಗಳಿಂದ ಅವರ ಮಹಾಮೃತವನ್ನು ಉಂಡು ಆನಂದ ಪಟ್ಟ ವಾಚಕರಿಗೆ ಮಿತಿಯೇ ಇಲ್ಲ. ಇಷ್ಟು ಜನಪ್ರಿಯರಾದ ಪಂಡಿತರ ಕಾಶಿಯಲ್ಲಿ ಓದಿ ದೇಶದ ಸಂಪೂರ್ಣವಾದ ಇತಿಹಾಸವನ್ನೇ ಸ್ವಚ್ಛವಾಗಿ ತಿಳಿಸಿ ಹೇಳುವ ಅವಕಾಶವುಂಟು. ಧರ್ಮಪೀಠವಾದ ಶ್ರೀ ಮುರುಘಾಮಠದ ಆಸ್ಥಾನ ಪಂಡಿತ ರಂತಿರುವರು. ಕನ್ನಡ ನಾಡಿಗೇ ಅಚ್ಚುಮೆಚ್ಚಿನವರಾದ ನಮ್ಮ ಪಂಡಿತರು ನಮ್ಮೆಲ್ಲರಿಗೆ ಮಾರ್ಗದರ್ಶಕರಾಗಿ ನಮ್ಮನ್ನು ಬೆಳಕಿನತ್ತ ಒಯ್ಯಲಿಕ್ಕೆ ಆ ಪರಮ ಶಿವಯೋಗಿಯು ಇವರಿಗೆ ಆಯುರಾರೋಗ್ಯ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇನೆ. ಹಾಗೂ ಆರಾಧ್ಯಗುರು ಶ್ರೀ ಮಹಾಂತೇಶನ ಬೆಂಬಲ ಸದಾ ಅವರಿಗಿರಲೆಂದು ಆಶಿಸುತ್ತೇನೆ.



ಶ್ರೀ ಮೃತ್ಯುಂಜಯಪ್ಪಗಳು ಅಥಣಿ ಶ್ರೀ ಮಹಾಶಿವಯೋಗಿಗಳವರಂತೆ ಲೋಕಕಲ್ಯಾಣಕ್ಕಾಗಿ ಜನಜೀವನದ ಉದ್ಧಾರಕ್ಕಾಗಿ ತಮ್ಮ ಶಿವಜೀವನವನ್ನು ಸವೆಸಿದವರು.

೧೨ನೇ ಶತಮಾನದಲ್ಲಿ ಬಸವಾದಿ ಪ್ರಮಥರೂ ೧೫ನೆಯ ಶತಮಾನದಲ್ಲಿ ಶ್ರೀ ಸಿದ್ಧಲಿಂಗ ಶಿವಯೋಗಿಗಳೂ, ನೂರೊಂದು ವಿರಕ್ತರೂ ಕೂಡಿ ಬೆಳಕನ್ನು ಬೀರಿದಂತೆ ೨೦ನೇ ಶತಮಾನದಲ್ಲಿ ಶ್ರೀ ಮೃತ್ಯುಂಜಯ ಶ್ರೀಗಳು ಸಮಾಜದಲ್ಲಿ ಸಾಮೂಹಿಕ ಜ್ಞಾನ ಬೆಳಗಿದರು. ಶಿವಯೋಗಿಯ ಶಕ್ತಿಯನ್ನು ಎಳಕೊಂಡರು. ಜೀವನದ ಪರಮ ಧ್ಯೇಯವನ್ನು ಮುಟ್ಟಿದರು.

—ಪಂ ನಾಗಭೂಷಣ ಶಾಸ್ತ್ರಿಗಳವರು

[ಮುರುಘಾಮಠದಲ್ಲಿ ಶ್ರೀ ಮೃತ್ಯುಂಜಯಪ್ಪಗಳವರ ೨೧ನೆಯ ಶಿವಾನುಭವಾಷ್ಟಮಿಯ ಸಂದರ್ಭದಲ್ಲಿ ಇತ್ತ ಭಾಷಣದಿಂದ ಸಾವಧಾನ ೩೦-೪-೮೧]

# ಅನುಭಾವದ ಪುಷ್ಪ

--ಶ್ರೀ ಶಿವಾನಂದ ದೇವರು

ಸಪ್ತತ್ಯಬ್ದ ವರ್ಷಗಳ ದಿವ್ಯಸಮಯದಲಿ ನೀವು
ಮರೆಯಲಾಗದಂಥ ಸಾಹಿತ್ಯ ಸೇವೆಮಾಡಿ ತೋರಿಸಿದಿರಿ
ಶ್ರೀ ಮೃತ್ಯುಂಜಯಪ್ಪಗಳ ಕರ ಣೆಯಲಿ ವೃಕ್ಷವಾಗಿ
ಅನುಭಾವದ ಪುಷ್ಪವನು ಅರಳಿಸಿದಿರಿ, ||೧||

"ನಾಗಸಮುದ್ರ"ದಲ್ಲಿ ಪರ್ವತಯ್ಯನ ಜ್ಯೇಷ್ಠ ಪುತ್ರರಾಗಿ ಜನಿಸಿ
ಹಾಳಕೇರಿ ಶ್ರೀ ಅನ್ನದಾನ ಶಿವಯೋಗಿಗಳ ಕೃಪೆಗೆ ಪಾತ್ರರಾಗಿ
"ಶಿವಾದ್ವೈತ ಸಿದ್ಧಾಂತ ರತ್ನ" ಪಂಡಿತ ಪದವಿ ಗಳಿಸಿದಿರಿ.
ಸ್ತ್ರೀಯರ ಉದ್ಧಾರಕಾಗಿ ಅಕ್ಕನಬಳಗವನ್ನು ಸ್ಥಾಪಿಸಿದಿರಿ. ||೨||

ಜನಕಾಗಿ ಮನಕರಗಿ ಕಾರ್ಯಗೈದಿರಿ ನೀವು
"ಸಾವಧಾನ"ದ ಸಂಪಾದಕರಾಗಿ ಸೇವೆಸಲಿಸಿದಿರಿ ನೀವು
ಕಾಯಕವೇ ಕೈಲಾಸವೆಂದು ವಿಶ್ವವಿದ್ಯಾಲಯದಲ್ಲಿ
ವಚನ ವಾಙ್ಮಯ ಸಂಶೋಧನೆ ಕಾರ್ಯದಲ್ಲಿ ಪಳಗಿದಿರಿ ||೩||

ಪಂ. ನಾಗಭೂಷಣ ಶಾಸ್ತ್ರಿಗಳವರು ಜ್ಞಾನದ ಖಣಿಯಾಗಿ
ಸರಸ್ವತಿಯ ವಿದ್ಯಾಭಾಂಡಾರವನ್ನು ಸೂರೆಮಾಡಿದವರು
ಮೂವತ್ತಕ್ಕೂ ಮಿಕ್ಕಿ ಪುಸ್ತಕಗಳನ್ನು ಬರೆದವರು
ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡ ಕೀರ್ತಿ ಎತ್ತಿತೋರಿಸಿದವರು ||೪||

ಶ್ರೀಯುತರ ಸಪ್ತತ್ಯಬ್ದ ವರ್ಷದ ಅಮೃತ ಮಹೋತ್ಸವ
ಶ್ರೀ ಮಹಾಂತಪ್ಪಗಳವರ ನೇತೃತ್ವದಲ್ಲಿ ನಡೆಯುವದು ನಮಗೆ ಆನಂದ
ಶ್ರೀ ಮುರುಘೇಶನು ಶತಮಾತೋತ್ಸವ ಆಚರಿಸುವ ಸುಯೋಗ
ನಮಗೆ ತಂದುಕೊಡಲೆಂದು ಮನವಾರೆ ಹಾರೈಸುತ್ತೇವೆ ನಾವಿಂದು ||೫||

# ಶತಾಯು ಶಿವಕೃಪೆನೀಯಲಿ ಪಂಡಿತಮಣಿಗೆ

—ಚೆನ್ನಕವಿ, ಸೊಲ್ಲಾಪುರ

ಶತಾಯು ಶಿವಕೃಪೆಽಽನೀಯಲಿ ಪಂಡಿತಮಣಿಗೆಽಽ
ನಾಗಭೂಷಣ ವರ್ಯರಿಗೆ ॥ ಶತಾಯು ಶಿವಕೃಪೆ
ಸಂಗನಾಳ ಕರ್ನಾಟಕ ಗ್ರಾಮದಿ ಲಿಂಗಮ್ಮಾ ಪರ್ವತಯ್ಯನ ಒಡಲದಿ
ಮಂಗಲಶುಭ ನಕ್ಷತ್ರಭಾಗ್ಯದಿಽಽಽ ಜನಸಿ ವಂಶ ಬೆಳಗುವಗೆ ॥೧॥

ಅನ್ನದಾನಿ ಶಿವಯೋಗಿ ಕರುಣೆಗೆ ಮನ್ನಿಸಿ ಅಪ್ಪಣೆ ಪೋಗಿ ಕಾಶಿಗೆ
ಮಾನ್ಯ ಪದವಿ ಪಂಡಿತಗೆಽಽಽ ನ್ಯಾಯ ಸಾಹಿತ್ಯ ಚತುರರಿಗೆ ॥೨॥

ಪೇಳಿ ಸಿದ್ಧಾಂತ ಶಿಖಾಮಣಿ ಪ್ರವಚನ ಆಲಿಸಿ ಪಂಡಿತ ಜನವರ್ಣಿಸಿ ಗುಣ
ಕುಲಕೀರ್ತಿ ಸುಜ್ಞಾನಿ ಸಜ್ಜನಽಽಽ ಶಾಸ್ತ್ರ ಪಾರಂಗತರಿಗೆ ॥೩॥

ವೀರಶೈವ ಸದ್ಧರ್ಮ ಅಭಿಮಾನದಿ ಸಾರಿ ಶಿವಾನುಭವ ನಿಜತತ್ತ್ವವ
ಹಿರಿಮೆಯಿಂದ ಶಿವಶರಣರ ವಚನವಽಽಽ ಬೋಧಿಸಿ ಸಂತೈಸುವಗೆ ॥೪॥

ಗದುಗಿನ ಸಂಸ್ಕೃತ ಮಹಾವಿದ್ಯಾಲಯ ಕೇಂದ್ರ ಸ್ಥಾನ ಸದ್ಧರ್ಮ ಆಲಯ
ಪ್ರಾಧ್ಯಾಪಕ ಸಂಸ್ಕೃತ ಮಹೋದಯಽಽಽಪದ ಮಂಡಿತ ಭೂಷಿತಗೆ ॥೫॥

ಕಲಕತ್ತಾ ವಿದ್ಯಾಲಯ ಸಂಸ್ಕೃತ ಕಲಿಯಲು ಗಣನಿಮ್ಮಡಿಗೆ ಬರುವುತ
ಹಲವಾರು ತರಬೇತಿ ಪಡೆಯುತಽಽಽ ಅಧ್ಯಾಪಕ ಪ್ರವೀಣರಿಗೆ ॥೬॥

ಕಾಲೇಜ ಸಂಸ್ಕೃತ ಬೆಂಗಳೂರ ಮೈಸೂರ ಮೇಲ್ಪರೀಕ್ಷಕರಾಗಿ ಮಾನ್ಯವರ
ಶೀಲ ಸತ್ಯ ಪಥ ನ್ಯಾಯಸತ್ವರ ಕೀರ್ತಿವಂತ ಕುಶಲರಿಗೆ ॥೮॥

ವೀರಶೈವ ಮಹಾ ಪೀಠವ ಸ್ಥಾಪಿಸಿ ಭಾರತದೇಶದಿ ಗ್ರಂಥ ಪ್ರಕಟಿಸಿ
ಅರಿತು ಕಾರ್ಯ ವಿಸ್ತರಿಸಿ ವೇದಾಗಮಽಽ ಪೇಳುವಗೆ ॥೯॥

ಧಾರವಾಡ ಶಿವಯೋಗಿ ಮೃತ್ಯುಂಜಯ ಪರಮಶಿವಾನುಭವ ಕೃತಿ ಸಂಸ್ಥೆಯ
ನಿರುತದಿ ಲೇಖನ ಪ್ರಿಯ ಮುಖಪತ್ರದ ಅಭ್ಯುದಯಗೆ ॥೧೦॥

ಸಾವಧಾನ ಸಂಪಾದಕರಿಗೆ ಶಿವತತ್ವಾಮೃತ ಜೇರುವರಿಗೆ
ಸವಿನಯ ಶ್ರಮ ಸಲಿಸುವಗೆ ಜೀವನ ಮುಡಪಿಟ್ಟವಗೆ ॥೧೧॥

ವಿಶ್ವವಿದ್ಯಾಲಯ ಧಾರವಾಡಸ್ಥಲ ಸೇವಾ ವಾಙ್ಮಯ ಶಾಖಾಮಂಡಲ
ಶಿವಶರಣರ ವಚನಾಂಜಲಿ ಉಜ್ವಲಽಽಽ ಅನುಭಾವಿ ಆತ್ಮಿಯಗೆ ॥೧೨॥

ಸಪ್ತಕಾವ್ಯ ಸಂಕಾಪುರೊಡನೆ ಪ್ರಾಪ್ತಸಂಪುಟ ಗುರುಬಸವ ಕಾವ್ಯನೆ
ವ್ಯಾಪ್ತ ಕಾರ್ಯ ಸಾಯಕನೆ ಗ್ರಂಥಮಾಲೆ ಸೂತ್ರಕಗೆ ॥೧೩॥

ಅವನಿ ಶ್ರೇಷ್ಠ ಶ್ರೀ ಬಸವ ಪೀಠಕೆ ಅವಿರತ ಸೇವೆ ಪ್ರಸಾರ ಕಾರ್ಯಕೆ
ನವಚೇತನ ಜನಮನಕೆ ಜಾಗೃತ ತತ್ಪರನಿಗೆ ॥೧೪॥

ಭಾರತ ದರ್ಶನ ಮೀಮಾಂಸಕೃತಿ ವೀರಶೈವ ಮತ ತತ್ವ ಸಂಗತಿ
ಸಾರಷಟ್‌ಸ್ಥಲ ನೀತಿ ಜ್ಯೋತಿ ಚನ್ನವಚನ ಸಂಗ್ರಹಿಗೆ ॥೧೫॥

ಲೇಖಕ ಗ್ರಂಥ ಬಹುಆಚ್ಚಾಗಿ ಸಕಲ ಲೋಕ ಜನಮಾನ ಮೆಚ್ಚಾಗಿ
ಅಖಿಲ ವೀರಶೈವರು ಹರುಷಾಗಿ ಮೋದಾವಿಸಾಗರಗೆ ॥೧೬॥

ಮೂವತ್ತು ವರುಷದ ಸೇವೆ ನಿರಂತರ ಭಾವಿಸಿ ಘನ ಸರಕಾರ ಐದುನೂರ
ದ್ವಿಪೀ ಆಶೀರ್ವಾದ ಶ್ರೀ ಗುರುವರ ಮಾಸಿಕ ಸನ್ಮಾನಿತಗೆ ॥೧೭॥

ಅಖಿಲ ಕಾರ್ಯಗಳ ಸೇವೆ ಸ್ಮರಿಸಿ ಲೋಕರಾಷ್ಟ್ರ ಕನ್ನಡ ಎಚ್ಚರಿಸಿ ॥೧೮॥
ಶಾಲಾ ಸಂಸ್ಕೃತ ಚರಿತ ಪ್ರಕಟಿಸಿ ಪ್ರೇಮಿ ಗೌರವಿಸುವಗೆ

ಅಭಿನಂದನ ಈ ಅಮೃತ ಮಹೋತ್ಸವ ಶೋಭಿಸುವ ಸಭೆ ಮಂಟಪ
ಶುಭ ಸಮುಖಾನಂದವ ವೈಭವ ಗ್ರಂಥರೂಪ ಚರಿತನಿಗೆ ||೧೮||

ಆಗಮಿಸಿ ಬಹು ಪಂಡಿತರೂ ಜನವಾಗಿವೆ ಹೆಮ್ಮೆಯು ಕೀರ್ತಿ ಭಾಷಣ
ನಾಗಭೂಷಣರು ನಾಡಿಗೆ ಭೂಷಣ ಪ್ರಾರ್ಥಿಸಿ ಬೇಡುತ ಪ್ರಭುಗೆ ||೧೯||

ಚನ್ನಕವಿಗೆ ನಿಮ್ಮ ಚರಿತಾದರ್ಶವೆ ಎನ್ನಮೊರೆದ ನಿಮ್ಮ ದರ್ಶನ ಭಾಗ್ಯವೆ
ಮನ್ನಿಸಯ್ಯಾ ಗೀತಾರ್ಪಣ ಸೇವೆ ಅಮೃತ ಮಹೋತ್ಸವಗೆ ||೨೦||

ಶತಾಯು ಶಿವಕೃಪೆ ನೀಯಲಿ ಪಂಡಿತಮಣಿಗೆ,

ನಾಗಭೂಷಣ ಪಂಡಿತರಿಗೆ ದೀರ್ಘಾಯು ಪೂರೆ ಪ್ರಭೋ ಜ್ಞಾನಿಯಗೆ
ಶಿವನೇ ಸ್ತುತಿಪೆವು ನಿಮ್ಮಡಿಗೆ ಸ್ವಾಗತವು ಸಭೆ ಆಗಮರಿಗ ||ಪ||

ಆಸ್ಥಾನಿಕ ವಿದ್ವಾನವರಿಗೆ ಸಂಸ್ಕೃತ ಪದವಿ ಭೂಷಿತರಿಗೆ
ಶ್ರೇಷ್ಠ ವಿದ್ವಾಂಸ ವಿಖ್ಯಾತರಿಗೆ ||೧||

ಮೂವತ್ತು ವರುಷದ ಕಾರ್ಯೋನ್ನತಿಗೆ
ಸೇವೆ ವ್ರತಪಥ ಸಾಗುವರಿಗೆ ದಿವ್ಯ ಮಹೋತ್ಸವ ಅಮೃತಸ್ಯ ||೨||

ನಾಡಭೂಷಣ ಕನ್ನಡ ಅಭಿಮಾನಿಗೆ
ಗಡಿನಾಡಿನ ವಿದ್ಯಾಪತಿ ಮತಿಗೆ ಪಡೆದ ರಾಜ್ಯ ಸನ್ಮಾನಿತಗೆ ||೩||

ಕನ್ನಡಾಂಬೆ ಸಾಹಿತ್ಯ ಪುತ್ರಗೆ ಚೆನ್ನಬಸವ ವಚನ ಸಂಗ್ರಹಿಗೆ
ಚನ್ನಕವಿ ಬಿನ್ನವಿಸುವೆ ದೇವಗೆ ||೪||

● ●

ಕಾಲೇಜ ಸಂಸ್ಕೃತ ಬೆಂಗಳೂರ ಮೈಸೂರ ಮೇಲ್ಪರೀಕ್ಷಕರಾಗಿ ಮಾನ್ಯವರ
ಶೀಲ ಸತ್ಯ ಪಥ ನ್ಯಾಯಸತ್ವರ ಕೀರ್ತಿವಂತ ಕುಶಲರಿಗೆ ||೮||

ವೀರಶೈವ ಮಹಾ ಪೀಠವ ಸ್ಥಾಪಿಸಿ ಭಾರತದೇಶದಿ ಗ್ರಂಥ ಪ್ರಕಟಿಸಿ
ಅರಿತು ಕಾರ್ಯ ವಿಸ್ತರಿಸಿ ವೇದಾಗಮಽಽ ಪೇಳುವಗೆ ||೯||

ಧಾರವಾಡ ಶಿವಯೋಗಿ ಮೃತ್ಯುಂಜಯ ಪರಮಶಿವಾನುಭವ ಶ್ರುತಿ ಸಂಸ್ಥೆಯ
ನಿರುತದಿ ಲೇಖನ ಪ್ರಿಯ ಮುಖಪತ್ರದ ಅಭ್ಯುದಯಗೆ ||೧೦||

ಸಾವಧಾನ ಸಂಪಾದಕರಿಗೆ ಶಿವತತ್ವಾಮೃತ ಬೀರುವರಿಗೆ
ಸವಿನಯ ಶ್ರಮ ಸಲಿಸುವಗೆ ಜೀವನ ಮುಡಿಪಿಟ್ಟವಗೆ ||೧೧||

ವಿಶ್ವವಿದ್ಯಾಲಯ ಧಾರವಾಡಸ್ಥಲ ಸೇವಾ ವಾಙ್ಮಯ ಶಾಖಾಮಂಡಲ
ಶಿವಶರಣರ ವಚನಾಂಜಲಿ ಉಜ್ವಲಽಽಽ ಅನುಭಾವಿ ಆತ್ಮಿಯಗೆ ||೧೨||

ಸಪ್ತಕಾವ್ಯ ಸಂಕಾಪುರೊಡನೆ ಪ್ರಾಪ್ತಸಂಪುಟ ಗುರುಬಸವ ಕಾವ್ಯನೆ
ವ್ಯಾಪ್ತ ಕಾರ್ಯ ಸಾಯಕನೆ ಗ್ರಂಥಮಾಲೆ ಸೂತ್ರಕಗೆ ||೧೩||

ಆವನಿ ಶ್ರೇಷ್ಠ ಶ್ರೀ ಬಸವ ಪೀಠಕೆ ಅವಿರತ ಸೇವೆ ಪ್ರಸಾರ ಕಾರ್ಯಕೆ
ನವಚೇತನ ಜನಮನಕೆ ಜಾಗೃತ ತತ್ಪರನಿಗೆ ||೧೪||

ಭಾರತ ದರ್ಶನ ಮೀಮಾಂಸಕೃತಿ ವೀರಶೈವ ಮತ ತತ್ತ್ವಸಂಗತಿ
ಸಾರಷಟ್ಸ್ಥಲ ನೀತಿ ಜ್ಯೋತಿ ಚನ್ನವಚನ ಸಂಗ್ರಹಿಗೆ ||೧೫||

ಲೇಖಕ ಗ್ರಂಥ ಬಹುಳಚ್ಚಾಗಿ ಸಕಲ ಲೋಕ ಜನಮನ ಮೆಚ್ಚಾಗಿ
ಅಖಿಲ ವೀರಶೈವರು ಹರುಷಾಗಿ ಮೇಧಾವಿಸಾಗರಗೆ ||೧೬||

ಮೂವತ್ತು ವರುಷದ ಸೇವೆ ನಿರಂತರ ಭಾವಿಸಿ ಘನ ಸರಕಾರ ಐದುನೂರ
ದೈವೀ ಆಶೀರ್ವಾದ ಶ್ರೀ ಗುರುವರ ಮಾಸಿಕ ಸನ್ಮಾನಿತಗೆ ||೧೭||

ಅಖಿಲ ಕಾರ್ಯಗಳ ಸೇವೆ ಸ್ಮರಿಸಿ ಶ್ರೀಲೋಕರಾಜ್ಯ ಕನ್ನಡ ಎಚ್ಚರಿಸಿ
ಶಾಖಾ ಸಂಸ್ಕೃತ ಚರಿತ ಪ್ರಕಟಿಸಿ ಪ್ರೇಮಿ ಗೌರವಿಸುವಗೆ ||೧೮||

ಶತಾಯು ಶಿವಕೃಪೆನೀಯಲಿ ಪಂಡಿತಮಣಿಗೆ



ಅಭಿನಂದನ ಈ ಅಮೃತ ಮಹೋತ್ಸವ ಶೋಭಿಸುವ ಸಭೆ ಮಂಟಪ
ಶುಭ ಸಮುಚಿತಾನಂದವ ವೈಭವ ಗ್ರಂಥರೂಪ ಚರಿತನಿಗೆ ॥೧೮॥

ಆಗಮಿಸಿ ಬಹು ಪಂಡಿತರೂ ಜನವಾಗಿವೆ ಹೆಮ್ಮೆಯು ಕೀರ್ತಿ ಭಾಷಣ
ವಾಗಭೂಷಣರು ನಾಡಿಗೆ ಭೂಷಣ ಪ್ರಾರ್ಥಿಸಿ ಬೇಡುತ ಪ್ರಭುಗೆ ॥೧೯॥

ಚನ್ನಕವಿಗೆ ನಿಮ್ಮ ಚರಿತಾದರ್ಶವೆ ಎನ್ನಮೊರೆದ ನಿಮ್ಮ ದರ್ಶನ ಭಾಗ್ಯವೆ
ಮನ್ನಿಸಯ್ಯಾ ಗೀತಾರ್ಪಣ ಸೇವೆ ಅಮೃತ ಮಹೋತ್ಸವಗೆ ॥೨೦॥
ಶತಾಯು ಶಿವಕೃಪೆ ನೀಯಲಿ ಪಂಡಿತಮಣಿಗೆ.

ವಾಗಭೂಷಣ ಪಂಡಿತರಿಗೆ ದೀರ್ಘಾಯು ಪೊರೆ ಪ್ರಭೋ ಜ್ಞಾನಿಯಗೆ
ಶಿವನೇ ಸ್ತುತಿಪೆವು ನಿಮ್ಮಡಿಗೆ ಸ್ವಾಗತವು ಸಭೆ ಆಗಮರಿಗೆ ॥೭॥

ಆಸ್ಥಾನಿಕ ವಿದ್ವಾಂಸವರಿಗೆ ಸಂಸ್ಕೃತ ಪದವಿ ಭೂಷಿತರಿಗೆ
ಶ್ರೇಷ್ಠ ವಿದ್ವಾಂಸ ವಿಖ್ಯಾತರಿಗೆ ॥೧॥

ಮೂವತ್ತು ವರುಷದ ಕಾರ್ಯೋನ್ನತಿಗೆ
ಸೇವೆ ವ್ರತಪಥ ಸಾಗುವರಿಗೆ ದಿವ್ಯ ಮಹೋತ್ಸವ ಅಮೃತಸ್ಯ ॥೨॥

ನಾಡಭೂಷಣ ಕನ್ನಡ ಅಭಿಮಾನಿಗೆ
ಗಡಿನಾಡಿನ ವಿದ್ಯಾಪತಿ ಮತಿಗೆ ಪದದ ರಾಜ್ಯ ಸನ್ಮಾನಿತಗೆ ॥೩॥

ಕನ್ನಡಾಂಬೆ ಸಾಹಿತ್ಯ ಪುತ್ರಗೆ ಚನ್ನಬಸವ ವಚನ ಸಂಗ್ರಹಿಗೆ
ಚನ್ನಕವಿ ಬಿನ್ನವಿಸುವೆ ದೇವಗೆ ॥೪॥

# ಪಾಂಡಿತ್ಯದ ಪರ್ವತ ಪಂ. ನಾಗಭೂಷಣ

ಜಯಶ್ರೀ ಎಸ್. ಅಂಗಡಿ, ಎಂ. ಎ.

ಅದೇನು ಶಾಂತಿ, ಸಹನೆ, ಮಾತಿನ ಸ್ಪಷ್ಟತೆ, ಪ್ರತಿಯೊಂದು ಶಬ್ದಕ್ಕೂ ಅರ್ಥದ ಲಕ್ಷಣವನ್ನು ಸಮರ್ಥವಾಗಿ ಬಿಡಿಸಿ ತಿಳಿಸಿ ಹೇಳುವ ವಿನಯಶೀಲ ಶರಣರನ್ನು ಹೆತ್ತ ತಾಯಿತಂದೆಗಳು ಭಾಗ್ಯವಂತರು. ಅಷ್ಟೇ ಅಲ್ಲ, ಅವರ ಅನುಭಾವದ ನುಡಿಗಳನ್ನು ಕೇಳುವ ಅವಕಾಶವನ್ನು ಕರುಣಿಸಿದ ಮಹಾಂತದ ಸಂತತಿ ಎಲ್ಲ ಧನ್ಯ.

ತಂದೆ 'ಪರ್ವತರಾಜ', ತಾಯಿ 'ಲಿಂಗಮ್ಮ', ಬಾಳಸಂಗಾತಿಯಾಗಿ ಬಾಲ್ಯದಲ್ಲೇ ಸಖಿಯಾದವಳು 'ಶಿವಗಂಗಮ್ಮ'– ಎಂಥ ರೋಮಾಂಚಿತ ಹೆಸರುಗಳಿವು !! ಇದೀಗ ಎಪ್ಪತ್ತೇಳು ವರ್ಷ ತುಂಬಿದರೂ ಅದೇ ಮಾರ್ಗವನ್ನು ಹಿಡಿದು ಸಮಾಜ ಸೇವೆಗೈಯುತ್ತ, ತಾತ್ವಿಕ ವಿಚಾರ ಮಂಥನದಲ್ಲಿ ಸರ್ವಭಕ್ತರನ್ನು ಕಡೆದು ಬೆಣ್ಣೆಯನ್ನು ತಯಾರಿಸುವಂಥ, ಯೋಗ್ಯ ಮೂರ್ತಿಯನ್ನು ಮಾಡುವಂಥ ಸಾಮರ್ಥ್ಯ ಅವರಲ್ಲಿದೆ.

ನಾಗಭೂಷಣರು 'ಪರುಷಮಣಿ' ಇದ್ದಂತೆ ಎಂಥ ಕಬ್ಬಿಣದಿಂದ ಕೂಡಿದ ಜೀವಿಗಳನ್ನೂ ತಮ್ಮ ಅಮೋಘವಾಣಿಯೆಂಬ ಪರುಷವನ್ನು ತಗುಲಿಸಿ ಚೊಕ್ಕ ಚಿನ್ನದಂತೆ ಮಾಡುವ ಮಹಿಮಾನ್ವಿತರಿವರು. ಇಂಥ ಶಿವಯೋಗಿಗಳ ಶಿವಾನುಭವವನ್ನು ಕೇಳುವಂಥ ಭಾಗ್ಯ ನನಗೆ ದೊರೆತದ್ದು ಇದಾವ ಜನ್ಮದ ಪುಣ್ಯ ವಿಶೇಷವೋ ಕಾಣೆ!! ಧಾರವಾಡದ ಭಕ್ತರೆಲ್ಲ ಪಂ. ನಾಗಭೂಷಣಶಾಸ್ತ್ರಿಗಳಿಗೆ ಇಲಕಲ್ಲ ಶ್ರೀಮಠದಲ್ಲಿ ಒಂದು ತಿಂಗಳು ಮಾತ್ರ ಬಿಡುವು ಅಂತ ತಿಳಿದುಕೊಂಡಿರಬಹುದು. ಆದರೆ ಇಲ್ಲಿ ಅದಕ್ಕೆ ಅವಕಾಶವೇ ಇಲ್ಲ. ಯುಗ ಯುಗಗಳುರುಳಿದರೂ ಮಾಡಲಸಾಧ್ಯವಾಗುವಂಥ ಕೆಲಸದ ಭಾರವನ್ನು ಒಂದು ತಿಂಗಳಲ್ಲಿ ಮಾಡಿ ಮುಗಿಸುವಂಥ ಶಕ್ತಿ ಅವರಲ್ಲಿದೆ.

"ಪಂಡಿತ", "ಶಿವಾದ್ವೈತಸಿದ್ಧಾಂತ", "ಶಿವಸಿದ್ಧಾಂತ ಶಿರೋಮಣಿ", "ಶರಣ ಧರ್ಮಭಾಸ್ಕರ"–ಇಷ್ಟೆಲ್ಲ ಬಿರುದುಗಳನ್ನು ಪಡೆದರೂ ಅಹಂಕಾರದ ಸುಳಿವೂ ಅವರ ಹತ್ತಿರ ಇಲ್ಲ. ಸಣ್ಣ ಮಕ್ಕಳಿಂದ ಮುದುಕರವರೆಗೆ ಬೇಕಾದವರು ಬಂದರೂ "ಶರಣ ಬರ್ರಿ" ಅಂತಾ ಕರೆದು ಅವರ ಯೋಗಕ್ಷೇಮವನ್ನು ವಿಚಾರಿಸುತ್ತಾ ತಾತ್ವಿಕ ಪ್ರಪಂಚದತ್ತ ಕರೆದೊಯ್ದು ಅವರಲ್ಲಿ ಹಾಸ್ಯವನ್ನು ಹುಟ್ಟಿಸಿ ಮನಸ್ಸನ್ನು ಪ್ರಫುಲ್ಲಿತ ಗೊಳಿಸುತ್ತಾರೆ. ಇಂಥ ಗುರುವರ್ಯರು ಇಂದಿನ ಕಾಲದಲ್ಲಿ ಸಿಕ್ಕುವುದು ಬಹಳ ಕಷ್ಟ. ಹೇಗೆ ರೇಣುಕಾಚಾರ್ಯರು ಶಿಷ್ಯ ಅಗಸ್ತ್ಯನನ್ನು ಹುಡುಕುತ್ತ ಬಂದು ತತ್ವೋಪದೇಶವನ್ನು ಮಾಡಿ ಉದ್ಧರಿಸಿದರೋ ಹಾಗೆ ಶಿಷ್ಯರಿದ್ದಲ್ಲಿಗೇ ತಾವು ಬಂದು ಉದ್ಧಾರ ಮಾಡುವಂಥ ಮಹಾನ್ ಶಕ್ತಿಯನ್ನು ಮಹಾಂತೇಶ ಅವರಿಗೆ ಕರುಣಿಸಿದ್ದಾನೆ. ಸಮಗ್ರ ಹತ್ತು-ಹನ್ನೊಂದು ವರುಷಗಳಿಂದ ಅವರ ಪುಣ್ಯ ಪ್ರವಚನವನ್ನು ಆಲಿಸುವ ಭಾಗ್ಯ ಇಲಕಲ್ಲ ಭಕ್ತರಿಗೆ ಲಭ್ಯವಾಗಿದೆ. ಆದರೆ ಇಷ್ಟುದಿನ ಕಲಿಯುವ, ಪರೀಕ್ಷಾ ದೃಷ್ಟಿಯಿಂದ ಅಭ್ಯಾಸ ಮಾಡುವ ಕಾಲದಲ್ಲಿ ನನಗೆ ಕೇಳಲಾಗಿರಲಿಲ್ಲ. ಈ ವರ್ಷ ಯಾವ ಬಂಧನಗಳೂ ಇಲ್ಲದೇ ಪುಣ್ಯಶ್ರವಣ ಮಾಡುವಂಥ ಭಾಗ್ಯ ನನಗೆ ಸಿಕ್ಕಿದ್ದು ದೊಡ್ಡದು.

ಶ್ರಾವಣ ಮಾಸದಲಿ ಪಂ. ನಾಗಭೂಷಣರು
ಸಿದ್ಧಾಂತ ಶಿಖಾಮಣಿಯ ಸಾರವನು । ಅರುಹುತಾರ
ಎಳಿ ಎಳಿಯಾಗಿ ಬಿಡಿಸಿ ಹೇಳ್ತಾರ ॥೧॥
ಇಷ್ಟಲಿಂಗದ ಗುಟ್ಟು ಮನಮುಟ್ಟುವಂತ್ಹೇಳಿ
ಜಂಗಮದ ಮೂಲ ಶೀಲವ । ತಿಳಿಸುತಾರ
ಅದಕೇಳಿ ಭಕ್ತರೆಲ್ಲ ನಲಿಯುತಾರ ॥೨॥
ಜಗದೊಳಗ ಹೊರಗ ತುಂಬಿ ಬಿಂಬಿಸುತತ್ತ್ವ
ಜಂಗಮವೆಂದು ತಿಳಿಸ್ಯಾರ । ತಾಯವ್ವ
ಭಕ್ತರ ಮೂಢ ಕಲ್ಪನೆಯ ಅಳಿಸ್ಯಾರ ॥೩॥
ಆತ್ಮದರಿವೆ ಗುರು ಅದ್ರಾಚಾರವೇ ಲಿಂಗ
ಕೂಟಾನಂದವೇ ಜಂಗಮವೆಂದು । ತಿಳಿಸ್ಯಾರ
ಗುರುಲಿಂಗಜಂಗಮದಮೃತವನುಣಿಸ್ಯಾರ ॥೪॥
ಅಷ್ಟಾವರಣವೇ ಅಂಗ ಪಂಚಾಚಾರವೇ ಪ್ರಾಣ
ಷಟ್‌ಸ್ಥಲವೇ ಆತ್ಮವೆಂದೆಲ್ಲ । ಹೇಳ್ಯಾರ
ಇಂತಾದವನೇ ವೀರಶೈವನೆಂದು ತಿಳಿಸ್ಯಾರ ॥೫॥

xvi

ನಾಗಭೂಷಣರೆಂಬ ಗುರುವೆನಗೆ ಸಿಕ್ಕಿದ
ಗುರು ಮಹಿಮೆಯನೆಂತು ಪೇಳಲಿ । ಪಡೆದವ್ವ
ಗುರುವಿನ ಪಾದಕ್ಕೆ ಮಣಿದೇನು ॥೧॥
ಗುರುವೆ ನಿನ್ನಾಶೀರ್ವಾದದ ವಾಣಿಯು
ನನ್ನ ಜೀವನವ ಬೆಳಗಲಿ । ನಿನ್ನಯ
ಅಂತಃಕರುಣೆ ಎನ್ನ ಮೇಲಿರಲಿ ॥೨॥

ಅವರ ಹತ್ತಿರ ಮಾತನಾಡುತ್ತ ಕುಳಿತರೆ ಹೇಗೆ ಹೊತ್ತು ಹೋಗುವುದೋ ತಿಳಿಯುವುದಿಲ್ಲ. ಆ ಮಾತುಗಳೆಲ್ಲ ಹೊತ್ತು ಹೋಗದ ಪ್ರಂಡರಾಲಿಪ ಹರಟೆ ಆಗದೆ, ಸಾತ್ವಿಕ ಸವಿಯುವ ತತ್ತ್ವಗಳ ರಸದೂಟವಾಗಿದೆ. ಕೇವಲ ತತ್ತ್ವವಷ್ಟೇ ಅಲ್ಲ ಜೀವನಾನುಭವ, ವೇದ, ಆಗಮ, ಉಪನಿಷತ್ತು, ಗೀತೆ, ದಾರ್ಶನಿಕರ ವಿಚಾರಗಳು, ಶಿವಶರಣರ ವಚನಗಳು, ಅನುಭಾವಿಗಳ ವಿಚಾರಗಳು, ಇಂದಿನ ಸಮಾಜದ ವಾತಾವರಣಕ್ಕಾಗಿ ಬಹಳ ಖಿನ್ನರಾಗಿ ನುಡಿದು ವೇದನೆಯನ್ನುಂಟುಮಾಡಿಕೊಳ್ಳುತ್ತಾರೆ. ಇಂದು ಈ ವಿಚಾರ ಎಷ್ಟು ಜನರಿಗೆ ಬರಲು ಸಾಧ್ಯ ? ಬೇರೆ ವಿಚಾರ ತಗೆದುಕೊಂಡು ನಾನೇನಮಾಡಬೇಕಾಗಿದೆ. ನಾನೊಂದು ಸುಖವಾಗಿದ್ದೇನೆ ಸಾಕು ಎನ್ನುವವರೋ ಬಹಳ. ಮನೋವಿಕಾರವನ್ನೇ ಕೇಂದ್ರವಾಗಿಟ್ಟುಕೊಂಡು ಸೃಷ್ಟಿಯಾಗುವ ಸಾಹಿತ್ಯದ ಬಗ್ಗೆಯೂ ತುಂಬಾ ಕಳಕಳಿಯ ಭಾವನೆ. ಮನೋವಿಕಾಸಕ್ಕಾಗಿ ಹೋರಾಟವಲ್ಲಿಯೂ ಇಲ್ಲವಲ್ಲವೆಂಬ ವ್ಯಥೆ.

ದೊಡ್ಡವರ ಹತ್ತಿರವೇ ಕಚ್ಚಾಟವೆನ್ನುವದು ಹೆಚ್ಚಾಗಿರುತ್ತದೆನ್ನುವದಕ್ಕೆ ಪಂ. ನಾಗಭೂಷಣರು ಸಾಕಷ್ಟು ತಮಗಾದ ಅನುಭವಗಳನ್ನು ಹೇಳಿದರು. ನಮ್ಮ ಧರ್ಮ ಯಾವುದು ? ಯಾವ ರೀತಿಯಲ್ಲಿ ನಮ್ಮ ಜೀವನವನ್ನು ಸಾಗಿಸಿ ಸಾರ್ಥಕ ಮಾಡಿಕೊಳ್ಳಬೇಕೆನ್ನುವ ವಿಚಾರವೆ ಇಲ್ಲ. ಹುಟ್ಟೀವಿ ಅನ್ನುವದಕ್ಕೆ ಬದುಕಬಾರದು. ಆ ಬದುಕಿಗೊಂದು ಸಾರ್ಥಕತೆಯನ್ನು ತಂದು ಕೊಡಬೇಕು.

ನಾಗಭೂಷಣ ಶಾಸ್ತ್ರಿಗಳು ತುಂಬಿದಕೊಡ ಇದ್ದಂತೆ, ಇಲ್ಲಿ ತುಂಬಿರುವಂತಹದು ಅಪಾರವಾದ ಪಾಂಡಿತ್ಯದ ಹೊನಲು, ಶಿವಯೋಗದ ರಹಸ್ಯ, ಆ ಶಿವಜ್ಞಾನ ರಹಸ್ಯವನ್ನು ತಿಳಿಯಾಗಿ, ಎಳೆ ಎಳೆಯಾಗಿ ಪಾಮರರೆಲ್ಲರಿಗೂ ತಿಳಿಸುವಂದದಲ್ಲಿ ಹೇಳುವ ಕೌಶಲ್ಯ ಅವರಲ್ಲಿ ಕರಗತವಾಗಿದೆ. ನಾವು ಮಾಡುವ ಪ್ರತಿಯೊಂದು ಕಾರ್ಯದಲ್ಲೂ ಶಿವಭಾವ ಸದ್ಭಾವನೆ ನೆಲೆಯಾಗಿರಬೇಕು. ಇಲ್ಲದಿದ್ದರೆ ಬಹುತೊಂದರೆಯಾಗುತ್ತದೆನ್ನುವುದನ್ನು ನಾವು ತಗೆದುಕೊಳ್ಳುವ ಪ್ರಸಾದದಿಂದ ಹಿಡಿದು ಕೊನೆಗಳಿಗೆಯಲ್ಲಿ, ಜೀವನ

ಯಾತ್ರೆಯ ಅಂತ್ಯದಲ್ಲಿ ಯಾವ ರೀತಿ ನಮ್ಮ ಮುಕ್ತಿ ಇರುತ್ತದೆಯೋ ಆ ರೀ . ಗತಿ ಯಾಗುವುದೆಂದು ಹೇಳುತ್ತಾರೆ. ಬಿಡುವಿಲ್ಲದಂತೆ ನಾನು ನಿಮಗೆ ತೊಂದರೆ ಕೊಟ್ಟೆ ಅಂತ ಅಂದ್ರೆ ಅವ್ರೇನು ಹೇಳಿದ್ರು ಅಂದ್ರೇ ಇಲ್ಲಮ್ಮಾ ನಾನು ಇಲ್ಲಿ–ವರೆಗೂ ಯಾರಜೊತೆಗೂ ಮಾತಾಡಿಲ್ಲ ಅಂದ್ರು ನಿಮ್ಮ ಜೊತೆ ಮಾತಾಡಿದಷ್ಟು ಮಾತಾಡಿಲ್ಲ. ನಮ್ಮ ಆಯುಷ್ಯದಲ್ಲಿ ಹೆಚ್ಚು ಯಾರ ಜೋಡಿ ಇಷ್ಟು ಹೃದಯಬಿಚ್ಚಿ ಮಾತಾಡಿವಿ ಅಂದ್ರು ನಿಮ್ಮ ಹತ್ರನ. ಹೃದಯವಂ ಕೆ ನಿಮ್ಮಲ್ಲಿದ್ದು ಹೃದಯತೆರೆದು ಕೇಳುವಂಥ ಮನೋಭಾವ ನಿಮ್ಮಲ್ಲಿರುವರಿಂದ ನಾವು ಬಾಯಿತೆರೆದು ಮಾತಾಡಿದ್ವಿ. ಯಾರರ ಕೇಳಿದ್ರೂ ಸಹಿತ, ಹಿಂಗ್ರುಪಾ ಇಲಕಲ್ಲಾಗ ಜಯಶ್ರೀ ಅಂಗಡಿ ಅಂತ ಒಬ್ರು ಇದ್ರು ಅವರ ಜೋಡಿ ಬಾಳ ಮಾತಾಡೀ ಅನ್ನುವಷ್ಟರ ಮಟ್ಟಿಗೆ ಮಾತಾಡಿದ್ರು. ಅಷ್ಟೇ ಅಲ್ಲ ನಿಮ್ಮ ಸದ್ಭಾವನೆಯ ಆಶೀರ್ವಾದ ನಮ್ಮ ತಲೆ ಮೇಲಿರಲಿ, ನಿಮ್ಮಂಥ ಪುಣ್ಯಾತ್ಮರ ದರ್ಶನ ಭಾಗ್ಯ ನಮಗಾಗ್ತೈತಿ ಅಂದ್ರು ನಾವ ಭಾಗ್ಯವಂತರು ಅಂತ ನನಗ ಅಂದ್ರು.

ಜ್ಞಾನ ದಾಹವಿದು ಬೆಂಬಿಡದೆ ಓಡಿಸಿಕೊಂಡು ಬರಲು
ತೆರೆದಿತ್ತು ಬಾಗಿಲು ಬಾಗಿತ್ತು ತಲೆ ಸದುವಿನಯದೊಲು ॥
ಇಂತಪ್ಪ ಮೇರು ಮೂರುತಿಯ ಕಂಡು ನಾ ಮೂಕಳಾಗಲು
ಶಿವನ ದರುಶನಭಾಗ್ಯವ ಪಡೆದೆನೆಂದೆ ಹರುಷದೊಲು ॥
ಗುರುವಿನ ನಿರ್ಮಲಾಂತಃಕರುಣೆಯಿಂದ
ಹೊಮ್ಮಿತು ಎನ್ನಲಿ ಶುಭೋದಯ.
ಗುರುತ್ವವೇ ಇಲ್ಲದ ಇಂದಿನ ಗುರು ನುಡಿಯಬಹುದೇ
ಶಿಷ್ಯಗೆ ನಿಮ್ಮ ಸದ್ಭಾವನೆಯ ಆಶೀರ್ವಾದ
ನನ್ನ ತಲೆಯ ಮೇಲಿರಲಿ ಎಂದು ?
ಇದಕೆ ಏನ ಹೇಳಲಿ ನಾ, ಏನ ಮಾಡಲಿ ನಾ,
ಎಂತು ಪೊಗಳಲಿ ನಾ, ನಾಗಭೂಷಣರ ಮಹಿಮೆಯ.
ಭಕ್ತಿಯಾವೇಶದಲಿ ಭಕ್ತಿಭಂಡಾರಿ ಬಸವನು
ಶರಣೆಂದ ಹರಳಯ್ಯನ ಶರಣೆಗೆ ಪ್ರೀತಿಯಾಗಿ
ಶರಣು ಶರಣಾರ್ಥಿ ಹರಮೂರ್ತಿ ಹರಳಯ್ಯನವರೆ
ಎಂದುಚ್ಚರಿಸಲು ಹರಳಯ್ಯನಂತರಂಗದಿ ಹೊಯ್ದಾಟ
ನಡೆದು ಸತಿಯೊಡಗೂಡಿ ಚಮ್ಮಾವುಗೆಯನರ್ಪಿಸ
ಬಂದು, ಹರಳಯ್ಯ ಮಧುವೆಯ್ಯರ ನೆಂಟಸ್ತನಕ್ಕೆ

ಕಾರಣವಾಗಿ ಕಲ್ಯಾಣ ಕ್ರಾಂತಿ ಕಹಳೆ ಊದಿತು.
ಆದರೆ ನನ್ನ ಮನೋಮಂದಿರದಲ್ಲಿ ಕ್ರಾಂತಿಯ ಕಹಳೆ
ಅಲ್ಲ ಜ್ಞಾನ ಜ್ಯೋತಿ ಬೆಳಗಿದೆ.

ಅವರ ವಾಣಿಯ ರಸದೂಟವನ್ನು ಮಾಡಿದವರಿಗೆ ಇದರ ಅರ್ಥವಾಗುತ್ತದೆ. ಒಂದು ತಿಂಗಳಲ್ಲಿ ಅವರಿಂದ ಪಡೆದ ಜ್ಞಾನ ಸಂಪತ್ತಿನ ವಿಚಾರವನ್ನು ಬಿಡದೇ ಹೇಳ ಬೇಕೆಂದ್ರೆ ಒಂದು ದೊಡ್ಡ ಪುಸ್ತಕವೇ ಆಗಬಹುದು. ದೊಡ್ಡವರ ಗುಣವನ್ನು ಬರೆದಿಡಲು ಎಷ್ಟು ಹಾಳೆಗಳಾದ್ರೂ ಸಾಲುವದಿಲ್ಲ. ಇದೇ ಹಾಳೆಯ ಬಗ್ಗೆ ಮಾತು ಬಂದಾಗ ಒಂದು ಮಾತು ಹೇಳಿದ್ರು. ನೆನಪಿನ ಶಕ್ತಿ ಈಗ ಕಡಿಮೆಯಾಗಿದೆ. ಅದಕ್ಕೆ ಹಾಳೆ ಬಂದಿದೆ, ಮೊದಲೆಲ್ಲಿ ಹಾಳೆ ಇತ್ತು ! ಅಂದ್ರು. ಅದೇನೇ ಇರಲಿ. ಪಾಂಡಿತ್ಯದ ಪರ್ವತವನ್ನು ಹಾಳೆಯಲ್ಲಿ ಹಿಡಿದಿರಿಸಲು ಸಾಧ್ಯವಿಲ್ಲ. ಇಂಥ ಮಹಿಮರ ಕೃಪಾಶೀರ್ವಾದಕ್ಕೆ ಪಾತ್ರಳಾದ ಈ ಜನ್ಮವೇ ಧನ್ಯ ಎಂದಿಷ್ಟನ್ನು ಮಾತ್ರ ಹೇಳಬಲ್ಲೆ.

೧೯೩೩ ರಲ್ಲಿ ದೇಹಸ್ವಾಸ್ಥ್ಯ ಕೆಡದಿದಾಗ ಒಂದ್ಸಾರೆ ಕನಸಿನಲ್ಲಿ ಕೈಲಾಸ ! ಕೈಲಾಸ !! ಕೈಲಾಸ !!! ಅನ್ನುತ್ತಾ ಮೇಲು ಮೇಲಕ್ಕೆ ಹೊರಟರಂತೆ. ನಡುವೆ ಒಬ್ಬ ಬಂದು ತಡೆದು ಎಲ್ಲಿಗೆ ಹೊರಟೆ ? ಎಂದು ಕೇಳಿದಾಗ್ಲೂ ಕೈಲಾಸ ! ಕೈಲಾಸ ಎಂತಲೇ ಅಂದರಂತೆ, ಆಗ ಆದ ಕುದರಿ ತರ್ತೀನಿ ಅಲ್ಲೀತನ ಇಲ್ಲೇ ಇರು ಅಂತ ಹೇಳಿ ಹೊರಟು ಹೋದಾವ ಇನ್ನೂ ವರೆಗೂ ಕುದುರೆ ಕಳಿಸಿಲ್ಲ. ಯಾವಾಗ ಕುದುರೆ ಬರ್ತದೊ ಅಂತ ಕಾಯ್ಕೊಂತ ಕುಳಿತೇವಿ ಎಂದು ಹೇಳಿದರಷ್ಟೇ ಅಲ್ಲ ಅವತ್ತು ದೇಹಾ ರೋಗ್ಯ ಕೆಟ್ಟದ್ದು ಅವತ್ತಿಗೇ ಮುಗಿದು ಹೋಯಿತು.

ಇನ್ನೂ ಎಷ್ಟೋ ಅವರಿಂದ ನಾನು ತಿಳಿದುಕೊಳ್ಳಬೇಕಾಗಿತ್ತು. ಆದರೆ ಶ್ರಾವಣ ಣವೇ ಮುಗಿತು. ತಿಳಿಯಬೇಕಾದ್ದನ್ನು ತಿಳಿವಾಗಿ ತಿಳಿಸಿಕೊಡುವ, ವಿನಯ ದಿಂದ ಕಾಡುಗಲ್ಲಿಗೂ ಸಂಸ್ಕಾರಕೊಟ್ಟು ಮೂರ್ತಿಯನ್ನಾಗಿ ಮಾಡುವಂಥ ಪಂ. ನಾಗಭೂಷಣಶಾಸ್ತ್ರಿಗಳ ವಾಣಿಯನ್ನು ನಾವುಗಳೆಲ್ಲ ಮತ್ತೆಮತ್ತೆ ಮತ್ತೆ ಕೇಳು ವಂಥ ಭಾಗ್ಯವನ್ನು ದೊರಕಿಸುವಂತಾಗಲಿ ಎಂದು ವಿಜಯೀಶನಲ್ಲಿ ಮತ್ತೊಮ್ಮೆ ಪ್ರಾರ್ಥಿಸುವೆ. ವಿಜಯೀಶ ಅವರಿಗೆ ಆ ಕರುಣೆಯನ್ನು ಒಂದನೆಯ ಸಾರೆ ೧೯೩೮ ರಲ್ಲಿ ಬಂದಾಗಲೇ ಕರುಣಿಸಿದ್ದಾನೆ. ಅವರಿಗೆ ಬಿಸಿಲಿನ ತಾಪವಾಗ್ತಾ ಇರುವಾಗ ಬಸವನ ಗುಡಿಯಲ್ಲಿ ಕುಳ್ಳಿರಿಸಿ ತಂಪಾದ ಪಾನೀಯವನ್ನು ಕೊಟ್ಟು ಅವರನ್ನು ಆಶೀರ್ವದಿಸಿ ಅನುಗ್ರಹಿಸಿದ್ದಾನೆಂದ ಮೇಲೆ 'ಶತಾಯುಷ್ಯ'ವನ್ನು ಕರುಣಿಸದೇ ಇರುವನೇ ?



# ನೂರೆಂಟು ವಚನಗಳ ಸಂಗ್ರಹ-
# ಒಂದು ಸಮಾಲೋಕನ

ಡಾ॥ ಬಿ. ವ್ಹಿ. ಶಿರೂರ

ಕಲ್ಯಾಣಕ್ರಾಂತಿಯ ನಂತರ ಗುಪ್ತಗಾಮಿನಿಯಾಗಿದ್ದ ವಚನಸಾಹಿತ್ಯ ಪ್ರವಾಹವನ್ನು ಹರಿಗಡಿದು ಜಲಾಶಯ ನಿರ್ಮಿಸಿ ಕನ್ನಡ ಸಾಹಿತ್ಯೋದ್ಯಾನದ ಹಿರಿಮೆ ಹೆಚ್ಚಿಸುವ ಕಾರ್ಯ ಕೈಗೂಡಿದುದು ೧೫ ನೆಯ ಶತಮಾನದಲ್ಲಿ ನೂರೊಂದು ವಿರಕ್ತರ ಅಧ್ವರ್ಯವಾಗಿ ನಿಂತ ತೋಂಟದ ಸಿದ್ಧಲಿಂಗಯತಿ, ಅಲ್ಲಮಪ್ರಭುವಿನಂತೆ ನಿರಂಜನ ಮೂರ್ತಿಯಾಗಿ, ಬಸವಣ್ಣನಂತೆ ವೀರಶೈವ ಸಂಘಟಕನಾಗಿ, ಚೆನ್ನಬಸವಣ್ಣನಂತೆ ಷಟ್‌ಸ್ಥಲಜ್ಞಾನ ಚಕ್ರವರ್ತಿಯಾಗಿ ಕಲ್ಯಾಣಕ್ರಾಂತಿಯ ಶಿವಶರಣರ ಎಲ್ಲ ಗುಣಗಳನ್ನು ಇಡಿಯಾಗಿ ಒಳಗೊಂಡು ಬೆಳಗಿದವನು. ನಿರಂಜನ ಗಣೇಶ್ವರನ ಅವತಾರವೆಂದು ಚೆನ್ನಬಸವ ಪುರಾಣದಿಂದ ಹೊಗಳಿಸಿಕೊಳ್ಳಲ್ಪಟ್ಟಿರುವ ಈತನು ಹುಟ್ಟು ಬೆಳವಣಿಗೆಗಳಲ್ಲಿ, ಆಚಾರ ವಿಚಾರಗಳಲ್ಲಿ ಹೆಚ್ಚಾಗಿ ಪ್ರಭುದೇವನನ್ನು ಹೋಲುತ್ತಾನೆ. ನಡೆನುಡಿ ನೆರಳಿಲ್ಲದ ಆತನ ಹೆಜ್ಜೆಯ ಗುರುತುಗಳು ಆತನ ಷಟ್‌ಸ್ಥಲಜ್ಞಾನ ಸಾರಾಮೃತದಲ್ಲಿ ಮೂಡಿನಿಂತಿವೆ.

ವೀರಶೈವ ತತ್ತ್ವಜ್ಞಾನಾಮೃತದ ಸುಳಿವಶಾಸನದಂತಿದ್ದ ಜಂಗಮಜ್ಞಾನ ಕೋಶವೆನ್ನಿಸಿದ್ದ ತೋಂಟದ ಸಿದ್ಧಲಿಂಗಶಿವಯೋಗಿಗಳ ಆ ಕೃತಿ ವೀರಶೈವ ಸಾಹಿತ್ಯೇತಿಹಾಸದಲ್ಲೊಂದು ಆಚಾರ್ಯ ಕೃತಿ. ವೀರಶೈವಧರ್ಮಕ್ಕೊಂದು ಒಳ್ಳೆಯ ಕೈಪಿಡಿ. ಅದರ ಮುಖ್ಯವಸ್ತು ತತ್ತ್ವ ವಿವೇಚನೆ. ಆದರೂ ಸಾಹಿತ್ಯದ ಸವಿಯನ್ನು ಪರಿಮಿತವಾಗಿ ಒಳಗೊಂಡು ಬಂದಿರುವ ಉತ್ಕೃಷ್ಟ ಕೃತಿ. ಶಿವಾನುಭವಿಗಳಾದ, ಷಟ್‌ಸ್ಥಲೋದ್ಧಾರಕರಾದ ತೋಂಟದ ಸಿದ್ಧಲಿಂಗಶಿವಯೋಗಿಗಳು 'ಷಟ್‌ಸ್ಥಲಶಾಸ್ತ್ರವಕ್ಕೆ ಬಲ್ಲಿದರಾಗಿ, ಭಕ್ತನಿಂದ ಮೊದಲ್ಗೊಂಡು ಐಕ್ಯನವರೆಗೆ ಸಾಧಿಸಬಹುದಾದ ಸಿದ್ಧಿಯನ್ನೂ, ಪರಿಣಾಮವನ್ನೂ' ಸೊಗಸಾದ ನುಡಿಗಡಣಗಳ ಮೂಲಕ ಹಿಡಿದಿಟ್ಟಿದ್ದಾರೆ.

ತೋಂಟದಾರ್ಯರ ಬೆಡಗಿನ ವಚನಕ್ಕೆ ಟೀಕೆ ಬರೆದ ಸೋಮಶೇಖರ ಶಿವಯೋಗಿಯು ಪ್ರಮುಖರು. ಅವರು ಬರೆದಿರುವ ಟೀಕೆಗಳು ಪಾಂಡಿತ್ಯದ ಭಾರದಿಂದ ವೀರಶೈವ ಪಾರಿಭಾಷಿಕ ಪದಗಳಿಂದ, ಕಬ್ಬಿಣದ ಕಡಲೆಯಂತಹ ಹಳಗನ್ನಡ ಶಬ್ದಗಳಿಂದ ಸಾಮಾನ್ಯರಿಗೆ ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಿದಂತಾಗುತ್ತದೆ. ವಚನಗಳಿಗೆ ಎಂಥ ಟೀಕೆ ಇರಬೇಕು ಎಂಬುದಕ್ಕೆ ನಿದರ್ಶನವೆನ್ನುವಂತೆ,

ತೋಂಟದ ಸಿದ್ಧಲಿಂಗಯತಿಗಳ ಅನುಭವಾಮೃತವನ್ನು ಸುಲಿದ ಬಾಳೆಯ ಹಣ್ಣಿನಂದದಿ. ಹೊಸಗನ್ನಡದಲ್ಲಿ ಸುಲಭೀಕರಿಸಿ ಇತ್ತಿದ್ದಾರೆ ಪಂಡಿತ ನಾಗಭೂಷಣ ಶಾಸ್ತ್ರಿಗಳವರು.

ತೋಂಟದ ಸಿದ್ಧಲಿಂಗಶಿವಯೋಗಿಯ ಬಗೆಗೆ ಪಂ. ನಾಗಭೂಷಣಶಾಸ್ತ್ರಿಗಳವರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. "ಮಹಾನುಭಾವಿಗಳಲ್ಲಿ ಶ್ರೀ ಜಗದ್ಗುರು ಸಿದ್ಧಲಿಂಗಶಿವಯೋಗಿಗಳಿಗೆ ವಿಶಿಷ್ಟಸ್ಥಾನವುಂಟು. ಅವರೀಗ ವ್ಯಕ್ತಿಯಾಗಿಲ್ಲ, ಮಹಾತತ್ತ್ವ ಮೂರ್ತಿಗಳೇ ಆಗಿರುವರು. ಅವರ ಸೇವೆಯೆಂದರೆ ತತ್ತ್ವಾನುಭೂತಿಯ ಚಿಂತನೆ. ಹಾಗು ಅವನ್ನು ಪಡೆಯಲು ನಡೆಸಿದ ಪ್ರಯತ್ನ ವಿಶೇಷವು. ಅವರ ಅನುಗ್ರಹವೆಂದರೆ ಆ ತತ್ತ್ವಾನುಭೂತಿಯಿಂದುಂಟಾಗುವ ಪರಮ ಸುಖದ ಲಾಭವು ಈ ಮೂರು ಮಾತುಗಳನ್ನು ಸದಾ ಎಚ್ಚರದಿಂದ ಸ್ಮೃತಿಪಟಲದಲ್ಲಿಟ್ಟುಕೊಂಡವರೇ ಸಿದ್ಧಲಿಂಗನ ಪರಮಭಕ್ತರಾಗಬಲ್ಲರು." (ನೂರೆಂಟು ವಚನಗಳ ಸಂಗ್ರಹ ನಾಲ್ಕುಮಾತುಗಳು ಪುಟ vii–viii) ಆ ನಿಷ್ಠೆಯಿಂದಲೇ ಈ ಕೃತಿ ರಚನೆಗೊಂಡು ಬಂದಿರುವುದರಿಂದ ಇದಕ್ಕೊಂದು ವಿಶಿಷ್ಟ ಬೆಲೆ ಇದೆ.

ಈ ಕೃತಿಗೆ ಮುನ್ನುಡಿಯನ್ನು ಬರೆಯುತ್ತ ಡಾ. ಆರ್. ಸಿ. ಹಿರೇಮಠರವರು ಪಂಡಿತ ನಾಗಭೂಷಣ ಶಾಸ್ತ್ರಿಗಳವರು ವೀರಶೈವ ದರ್ಶನವನ್ನು ಅರಿತು, ಆಚರಣೆಗೆ ತಂದ ಪುಣ್ಯಪುರುಷರು. ವಚನ ಸಾಹಿತ್ಯದಲ್ಲಿ ಅವರದು ಸಿದ್ಧಹಸ್ತ. ತೋಂಟದ ಸಿದ್ಧಲಿಂಗೇಶ್ವರ ವಚನಗಳನ್ನು ಬಹುಸೂಕ್ಷ್ಮವಾಗಿ ತಮ್ಮ ದೃಷ್ಟಿಯಿಂದ ಅಭ್ಯಸಿಸಿರುವರು. ಅವರ ಅನುಭವದ ಹಿನ್ನೆಲೆಯಲ್ಲಿ ಷಟ್ಸ್ಥಲಜ್ಞಾನಸಾರಾಮೃತ ಸಂಗ್ರಹ ಸಿದ್ಧವಾಗಿರುವುದು ಸೂಕ್ತವಾದುದು. ವಚನಗಳನ್ನು ಆಯ್ದು ಹೊಂದಿಸಿರುವುದು. ಕೋದ ಮಣಿಗೂ ಸೂತ್ರದಂತಿದೆ. ಸಮಗ್ರ ಸಿದ್ಧಾಂತ ಕರಿಯು ಕನ್ನಡಿಯಲ್ಲಿ ಅಡಗಿದಂತಾಗಿದೆ. ಶಾಸ್ತ್ರಿಗಳ ಅನುಭಾವ ವಿಮರ್ಶನ ಶಕ್ತಿಗೆ ಎತ್ತಿಹಿಡಿದ ಪತಾಕೆಯಂತಿದೆ. ಈ ಸಾರಸಂಗ್ರಹ. ಪ್ರತಿವಚನಕ್ಕೂ ಅವರು ಕೊಟ್ಟಿರುವ ವ್ಯಾಖ್ಯಾನ ಸ್ಪಷ್ಟವಾಗಿದೆ, ಉಚಿತವಾಗಿದ. ಶಾಸ್ತ್ರಸಮ್ಮತವಾಗಿದೆ." ಎಂದು ಹೇಳಿರುವ ಮಾತುಗಳು ಈ ಕೃತಿಯ ಸಮಗ್ರ ವಿಮರ್ಶೆಯ ಸೊಗಸಾದ ನುಡಿಗಳಾಗಿವೆ.

ಇಲ್ಲಿ ಶ್ರೀ ಶಾಸ್ತ್ರಿಗಳವರು ೧೦೮ ವಚನಗಳನ್ನು ಆಯ್ದುಕೊಳ್ಳುವಲ್ಲಿಯೇ ತಮ್ಮ ಸೂಕ್ಷ್ಮಗ್ರಾಹಿ ವ್ಯಕಿತ್ವವನ್ನು ತೋರಿದ್ದಾರೆ. ಎಷ್ಟೋ ವಚನಗಳ ಮೂಲಕ ತೋಂಟದಾರ್ಯರ ಇಡೀ ವ್ಯಕ್ತಿತ್ವ ಬೆಳಕು ಕಾಣುವಂತೆ ಮಾಡಿರುವುದು ಪಂಡಿತ ನಾಗಭೂಷಣಶಾಸ್ತ್ರಿಗಳವರ ಪ್ರಭೆತಿಯ ದ್ಯೋತಕ.

---

# ವಂದನ

—ಶ್ರೀ ಚೆನ್ನವೀರ ಕಣವಿ

ಮುಗಿಲಿನ ಜಗುಲಿಗೆ ಭೂಮಿಯನೆತ್ತುವ
ಸೂರ್ಯ-ಚಂದ್ರ ಸಮದೃಷ್ಟಿ ನಮೋ;
ಹಗಲಿರುಳಿಗೆ ನೊಗ ಹೂಡಿ ರೂಢಿ ಹದ-
ಗೊಳಿಸುವ ಬದುಕಿನ ಕೆಳಗೆ ನಮೋ.

ಕತ್ತಲೆ-ಮೂಡಿ ನಕ್ಷತ್ರ ಹೊಳೆವ ಬಾ-
ನೆತ್ತರ ಕರುಣೆಯ ಕಾಂತಿ ನಮೋ;
ತಂಗಾಳಿಗೆ ಸುಮ ಸೌರಭವರಳಿಸಿ
ಹೊರಳುವ ಬೆಳಗಿನ ಕಾಂತಿ ನಮೋ.

ಗುಡುಗು-ಮಿಂಚು-ಮಳೆಗಾಳಿ ಓಲಗವ-
ಗೈವ ನಿರ್ಮಲಾಗಸವೆ ನಮೋ;
ಎಲ್ಲ ಅಲ್ಲ-ಕಲ್ಲೋಲದಲ್ಲು ಕೈ-
ಗೂಡಿ ಬಂಧ ಸಂಬಂಧ ನಮೋ.

ಬಿಸಿಲು ಸೋಸಿ ಬೆಳುದಿಂಗಳಿಸೆವ
ಸರ್ವಾಂಗ ಸುಖದ ಸಂತೃಪ್ತಿ ನಮೋ;
ನವೋದಯ:ದ ನವರಸದ ಜೀವ ನಸು-
ನಗುವ ಬಗೆಯ ಚಿತ್ಕಳೆಗೆ ನಮೋ.

○ ○

# ಆಗಮೋಕ್ತ ಮತೋತ್ಕರ್ಷಕಾರಕ ಮಹಾತ್ಮಾ ಬಸವಣ್ಣ

—ಪಂ. ನಾಗಭೂಷಣ ಶಾಸ್ತ್ರಿಗಳವರು

**ಆಗಮೋಕ್ತ ಪ್ರಭೇದಗಳು :**

ಆಗಮ ಎಂದರೆ ಶೈವಾಗಮಗಳೆಂದೇ ಸುಪ್ರಸಿದ್ಧ. ಶೈವಾಗಮಗಳಿಗೆ ದಿವ್ಯಾಗಮಗಳೆಂದೂ ಹೆಸರು. ಇವು ಇಪ್ಪತ್ತೆಂಟು ಇರುತ್ತವೆ. ಈ ಇಪ್ಪತ್ತೆಂಟು ಶೈವಾಗಮಗಳ ಉಲ್ಲೇಖವು ಕಂಚಿಯ ಗುಡಿಯಲ್ಲಿರುವ ಶಾಸನದಲ್ಲಿ ಬರುತ್ತದೆ ಆ ಶಾಸನದ ಕಾಲವು ಕ್ರಿ. ಶ. ೫ನೆಯ ಶತಮಾನ. ಇದರಿಂದ ಇಪ್ಪತ್ತೆಂಟು ಆಗಮಗಳು ಆಗಲೇ ಅಸ್ತಿತ್ವದಲ್ಲಿದ್ದವು ಎಂದು ಸ್ಪಷ್ಟವಾಗುತ್ತದೆ. ಮಹಾಭಾರತದಲ್ಲಿ ಕೂಡ ಆಗಮಗಳ ಉಲ್ಲೇಖವಿದೆ ಎಂದು ಅನುಶಾಸನ ಪರ್ವತವನ್ನು ಉದ್ಧರಿಸಿ ತೋರಿಸಿರುತ್ತಾರೆ ಪಂಡಿತರು. ಆಗಮಗಳು ಇಪ್ಪತ್ತೆಂಟೇ ಆದರೂ ಉಪಾಗಮಗಳು ಅಸಂಖ್ಯವಾಗಿವೆ. "ಕಾಮಿಕ ಮೊದಲಾಗಿ ವಾತುಲ ಕಡೆಯಾಗಿ ೨೮ ದಿವ್ಯ ತಂತ್ರಗಳು ಸಿದ್ಧಾಂತರೂಪದವುಗಳಾಗಿರುತ್ತವೆ. ಅವುಗಳಲ್ಲಿ ಜ್ಞಾನ, ಜ್ಞೇಯ, ಅನುಷ್ಠೇಯ, ಅಧಿಕಾರಿ, ಸಾಧನ, ಸಾಧ್ಯಗಳೆಂಬ ಷಟ್ ಪದಾರ್ಥಗಳ ಬೋಧವೇ ಮುಖ್ಯವಾಗಿರುವುದು... ಆಯಾ ಆಗಮಗಳು ಇಷ್ಟೇ ಶ್ಲೋಕಗಳುಳ್ಳವಾಗಿರುವುವೆಂದು ಊಹಿಸಲಿಕ್ಕೂ ಕೂಡ ಶಕ್ಯವಿಲ್ಲ" ಎಂದು ಶಂಭುಲಿಂಗ ಶಿವಾಚಾರ್ಯರು ಆಗಮ ಪರಿಜ್ಞಾನವೆಂಬ ಗ್ರಂಥದಲ್ಲಿ ಬರೆಯುತ್ತಾರೆ. ಆಗಮಗಳಲ್ಲಿ ಹೇಳಿದ ಶೈವ ಮತವು ವೇದ ಪೂರ್ವಕಾಲದ ಮತವೆಂದು ಪ್ರಾಚ್ಯವಸ್ತು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಕ್ರಿ.ಶ. ಪೂರ್ವ ಸಾವಿರಾರು ವರ್ಷಗಳ ಕಾಲ ಶೈವ ಧರ್ಮವು ಭಾರತದಾದ್ಯಂತ ವ್ಯಾಪಿಸಿದಂತೆ ಕಂಡು ಬರುತ್ತದೆ. ವೇದಗಳಲ್ಲಿ

ಬ್ರಾಹ್ಮಣಗಳಲ್ಲಿ, ಉಪನಿಷತ್ತುಗಳಲ್ಲಿ ಶೈವಮತದ ಉತ್ಕರ್ಷವಾದುದನ್ನು ಪಂಡಿತರು ಗುರುತಿಸುತ್ತಿದ್ದಾರೆ. ಸಿದ್ಧಾಂತ ಶಿಖಾಮಣಿಯು ಇದೇ ಅಭಿಪ್ರಾಯವನ್ನು ವ್ಯಕ್ತ ಪಡಿಸುತ್ತದೆ. ಸುದೀರ್ಘವಾದ ಈ ಶೈವಮತದ ಚರಿತ್ರೆಯಲ್ಲಿ ಅನೇಕ ಪ್ರಭೇದಗಳು ಉಂಟು. ಬ್ರಹ್ಮಸೂತ್ರ ಆಂಗ್ಲಭಾಷಾಂತರ ಗ್ರಂಥದಲ್ಲಿ ಅಡಿಟಿಪ್ಪಣಿಯಲ್ಲಿ ಡಾ. ಎಸ್. ರಾಧಾಕೃಷ್ಣನ್ ವಾತುಲಾಗಮವನ್ನು ಉದ್ಧರಿಸಿ ಶೈವ ಪ್ರಭೇದಗಳನ್ನು ಗುರುತಿಸಿದ್ದಾರೆ. ವಾತುಲಾಗಮದ ಆ ಮಂತ್ರವು ಹೀಗಿದೆ :

ಶೈವಂ ಚತುರ್ವಿಧಂ ಜ್ಞೇಯಂ ಸಮಾಸಾಚ್ಛೃಣು ಷಣ್ಮುಖ ।
ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾಕ್ರಮಂ ॥

ಅಂದರೆ, ಶೈವವು ಸಾಮಾನ್ಯ, ಮಿಶ್ರ, ಶುದ್ಧ ಹಾಗೂ ವೀರ ಎಂದು ಅನುಕ್ರಮವಾಗಿ ನಾಲ್ಕು ತೆರನಾಗಿರುತ್ತದೆಯೆಂದು ಇದರಿಂದ ಕಂಡುಬರುತ್ತದೆ. ಈ ಮಾತು ಕ್ರಮವಿಕಾಸಸೂಚಕವೇ ಎಂದು ಪ್ರಶ್ನಿಸಿದಾಗ, ಹೌದು ಎಂದೇ ಆಗಮದ ಉತ್ತರ. ಹಾಗಾದರೆ ವೀರಶೈವವು ಶೈವದ ಕೊನೆಯ ಘಟ್ಟ. ವೀರ ಶೈವವು ಆಗಮಾಂತವೆಂದು ಹೇಳಿದುದರ ಅರ್ಥವಿದು. ವೇದಾಂತವೆಂದರೆ, ವೇದದಲ್ಲಿಯ ವಿಚಾರೋತ್ತಮತೆ ಅಥವಾ ತಾತ್ವಿಕಭಾಗ ಎಂದು ಅರ್ಥವಾಗುವಂತೆ, ಆಗಮಾಂತವೆಂದರೆ ಆಗಮ ವಿಚಾರೋತ್ತಮ ಭಾಗ ಅಥವಾ ತತ್ತ್ವವಿಚಾರ ಭಾಗ ಎಂದು ಕಂಡುಬರುವುದು. ಆಗಮದ ಚರಿತ್ರೆಯಲ್ಲಿ ವೀರಶೈವದ ಚರಿತ್ರೆ ಸೇರಿಕೊಂಡಿದೆ. ಶೈವ ಧರ್ಮದ ಬೆಳವಣಿಗೆಯಲ್ಲಿ ಆಗಮ ಮತಗಳು ಯಾವ ಯಾವ ಕಾಲದಲ್ಲಿ ಹುಟ್ಟಿಕೊಂಡವು ಎಂದು ಹೇಳುವುದು ಕಠಿಣವಾಗಿರುತ್ತದೆ. ಇಲ್ಲಿಯವರೆಗೆ ನಡೆದ ಸಂಶೋಧನೆಯು ಈ ನಿಟ್ಟಿನಲ್ಲಿ ಯಾವ ಪರಿಹಾರವನ್ನೂ ಸೂಚಿಸುವುದಿಲ್ಲ, ಆದರ ಸಂಶೋಧನೆ ಕೂಡ ತೀರ, ಅತಿ ತೀರ ಕೊಂಚವಾಗಿರುತ್ತದೆ. ಪಂಡಿತರು ಈ ಕ್ಷೇತ್ರ ಸಂಶೋಧನೆಯತ್ತ ಗಮನ ಹರಿಸಬೇಕು. ಭಾರತದ ಧಾರ್ಮಿಕ ಸಮಗ್ರ ಚರಿತ್ರ ನಿರ್ಮಾಣಕ್ಕಾಗಿ ಆಗಮೋಕ್ತವಾದ "ವೀರಶೈವ" ಎಂಬ ಆಗಮ ಪ್ರಭೇದ ಮತವು ಕ್ರಿಸ್ತ ಶಕ ಹನ್ನೊಂದನೆಯ ಶತಮಾನದಲ್ಲಿ ಇದ್ದಿತೆಂದು ಶಾಸನೋಕ್ತ ಶಿವಶರಣರ ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ಕರ್ನಾಟಕ ದೇಶ ಮತ್ತು ಆಂಧ್ರ ದೇಶಗಳಲ್ಲಿದ್ದವರು. ಡಾ. ಶ್ರೀಕಂಠಶಾಸ್ತ್ರಿಗಳು ತಿಳಿಸುವ ಭಾಷ್ಯಕಾರರ, ವೃತ್ತಿಕಾರರ, ಕಾರಿಕಾ ಕಾರರ ಹೆಸರುಗಳು, ಪದ್ಮಣಾಂಕ ಕವಿಯು ತಿಳಿಸುವ ಪ್ರಕರಣ, ವ್ಯಾಖ್ಯಾನ, ವೃತ್ತಿಗಳನ್ನು ಬರೆದವರಲ್ಲಿ ಕೆಲವರು ಹನ್ನೆರಡನೆಯ ಶತಮಾನಕ್ಕಿಂತಲೂ ಪೂರ್ವದವರೆಂದು ಕಂಡುಬರುತ್ತದೆ. ಈ ಕಾಲದಲ್ಲಿ ಕರ್ನಾಟಕದಲ್ಲಿ ಕಲ್ಯಾಣದ ಚಾಲುಕ್ಯರು ಭಾರತದ ಬಹುಭಾಗವನ್ನು ತಮ್ಮ ಆಡಳಿತೆಗೆ ಸೇರಿಸಿಕೊಂಡದ್ದು

ಚರಿತ್ರೆಯಿಂದ ತಿಳಿದುಬರುತ್ತದೆ. ಆಗ ಭಾರತದಾದ್ಯಂತ ಶೈವ ಮತದ ಉತ್ಕರ್ಷ ವಾಗಿದ್ದುದನ್ನು ಚರಿತ್ರಕಾರರು ತಿಳಿಸುತ್ತಾರೆ.

ವೀರಶೈವ ಶಬ್ದವಿಚಾರ

ವೀರಶೈವ ಶಬ್ದದಲ್ಲಿ 'ವೀರ' ಹಾಗೂ 'ಶೈವ' ಎಂಬ ಎರಡು ಪದಗಳುಂಟು. ಶೈವ ಪದಕ್ಕೆ ವೀರ ಎಂಬ ವಿಶೇಷಣ ಸೇರಿ ವೀರಶೈವ ಎಂಬ ಸಮಸ್ತಪದವಾಗಿದೆ. ಇದು ಶಿವನಲ್ಲಿ ವೀರತ್ವಭಾವವುಳ್ಳವನು ವೀರಶೈವನೆಂದು ತೋರಿಸುತ್ತದೆ. ಆಗಮಗಳು ವೀರಶೈವ ಶಬ್ದದ ವಿವರಣೆಯನ್ನು ಕೊಡುತ್ತವೆ. ಪಾರಮೇಶ್ವರಾಗಮವು ಹೀಗೆ ಹೇಳುತ್ತದೆ;

ಯಥಾ ವೀರೋ ರಣೇ ಶೂರೋ ವೀರಶೈವ ಮತೇ ತಥಾ ।
ಭಕ್ತ್ಯಾ ವೀರೋ ನ ವೈರೇಣ ನ ಬಲೇನ ಚ ಕಾರ್ಯತಃ ॥

ಶೂರನು ರಣದಲ್ಲಿ ವೀರತ್ವವನ್ನು ಮೆರೆಯುವಂತೆ ಭಕ್ತಿಯಲ್ಲಿ ವೀರತ್ವವನ್ನು ವೀರಶೈವನು ಮೆರೆಯುವನು. ಅವನದು ವೈರದಲ್ಲಿಯಾಗಲಿ, ಬಲದಲ್ಲಿಯಾಗಲಿ ವೀರತ್ವವಲ್ಲ ಎಂದು ಆಗಮ ಹೇಳುವಾಗ ಭಕ್ತಿಪ್ರಧಾನವಾದ ಮತಧರ್ಮವೆಂದು ಬೇರೆ ಹೇಳಬೇಕಾಗಿಲ್ಲ. ಆಗಮೋಕ್ತವಾದ ಈ ಭಕ್ತಿವೀರತ್ವವನ್ನು ಮೆರೆಯುವ ವೀರಶೈವದ ಚರಿತ್ರೆಯಲ್ಲಿ ಒಂದು ಘಟ್ಟ ಕಂಡುಬರುತ್ತದೆ. ಅದು ಹನ್ನೆರಡನೆಯ ಶತಮಾನ. ಶೈವಮತವು ಆಗಲೇ ತಿಳಿಸಿದಂತೆ, ಭಾರತಾದಾದ್ಯಂತ ಪ್ರಭಾವಯುತವಾಗಿ ಪಸರಿಸಿತ್ತು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ಗುಜರಾಥದಿಂದ ಬಂಗಾಲದ ವರೆಗೆ ಹಬ್ಬಿದ ಈ ಮತದ ಅವಾಂತರ ಭೇದವಾದ ವೀರಶೈವದ ಮಹಾಮೇಧಾವಿಗಳು. ಕೂಡಿದ ಹನ್ನೊಂದನೆಯ ಶತಮಾನದಲ್ಲಿ ಭಾರತ ದೇಶದಲ್ಲಿ ಅತ್ಯಂತ ಸುಪ್ರಸಿದ್ಧವಾದ ಕಲ್ಯಾಣ ಪಟ್ಟಣ ಈ ರಾಜ್ಯದಲ್ಲಿಯ ಗುಲಬರ್ಗಾ ಜಿಲ್ಲೆಗೆ ಸೇರಿದ, ಅದು ಸಾಂಸ್ಕೃತಿಕ ಮತ್ತು ರಾಜಕೀಯ ಕೇಂದ್ರವಾಗಿತ್ತು. ಇಲ್ಲಿ ಶರಣರು ಉಜ್ವಲ ಪ್ರಭಾಯುತರಾಗಿ ಕಾರ್ಯೋನ್ಮುಖರಾಗಿದ್ದರು. ಅವರಲ್ಲಿ ಸುಪ್ರಸಿದ್ಧರಾದವರೆಂದರೆ ದಣ್ಣಾಯಕನಾದ ಕೊಂಡಗುಳಿ ಕೇಸಿರಾಜ,ರೇವಣಸಿದ್ಧ ದಾಸಿಮಾರ್ಯ ಮುಂತಾದವರು ಇವರುಗೈದ ಕೃತಿಯಿಂದ ಹೊಸಯುಗದ–ಸಾಂಸ್ಕೃತಿಕ ಹೊಸಯುಗದ–ಅರುಣೋದಯವಾಗಿತ್ತು. ಹನ್ನೆರಡನೆಯ ಶತಮಾನವು ಆ ಹೊಸ ಮನ್ವಂತರದ ಪ್ರಸವಕಾಲವಾಯಿತು.

ಹನ್ನೆರಡನೆಯ ಶತಮಾನದ ವೀರಶೈವ ಮಹಾತ್ಮರಲ್ಲಿ ಬಸವಣ್ಣ, ಚೆನ್ನ-ಬಸವಣ್ಣನವರು ಹಿರಿಯದಣ್ಣಾಯಕ ಮತ್ತು ಚಿಕ್ಕದಾಯಣ್ಣಕರಾಗಿ, ಕಲೂಚಲರ

ಅರಸರು ಕಲ್ಯಾಣದ ರಾಜಸತ್ತೆಯನ್ನು ತಮ್ಮ ಕೈಗೆ ಅದೇ ತಾನೇ ತಕ್ಕೊಂಡ ಸಮಯದಲ್ಲಿ ದೊರೆ ಬಿಜ್ಜಳನಲ್ಲಿ ಕೆಲಸಮಾಡುತ್ತಿದ್ದರು. ಕಲ್ಯಾಣದ ಚಾಲುಕ್ಯರ ಮಗಳ ಮಗನಾದ ಬಿಜ್ಜಳನು ತನ್ನ ತಂಗಿಯನ್ನು ಮಹಾನುಭಾವಿ ಬಸವಣ್ಣನವರಿಗೆ ಕೊಟ್ಟು ಭಾವನಾಗಿದ್ದನು. ಬಸವಣ್ಣನವರು ಉದ್ದಾಮ ರಾಜಕಾರಣಿಯಾಗಿದ್ದಂತೆ ಪ್ರಥಮ ದರ್ಜೆಯ ಶಿವಾನುಭಾವಿಗಳೂ ಆಗಿದ್ದರು. ಡಾ. ಆರ್. ಡಿ. ರಾನಡೆಯವರು ಬಸವಣ್ಣನವರನ್ನು Pathway to God in Kannada Literature ಎಂಬ ಗ್ರಂಥದಲ್ಲಿ ತತ್ತ್ವಜ್ಞಾನಿ ಪ್ಲೇಟೋ ಎಂಬವನಿಗೆ ಹೋಲಿಸಿದ್ದು ಈ ಮಾತಿಗೆ ಸಾಕ್ಷಿಯಾಗಿದೆ. ಬಸವಣ್ಣನವರ ಸೋದರಳಿಯ ಚೆನ್ನಬಸವಣ್ಣನವರೂ ಬಸವಣ್ಣನವರಂತೆ ಪ್ರಥಮ ದರ್ಜೆಯ ಶಿವಾನುಭಾವಿಗಳು. ಇವರು ಕಲ್ಯಾಣದಲ್ಲಿ ಕೈಕೊಂಡ ಅನುಭಾವ ಪ್ರಸಾರದ ಪರಿಣಾಮದಿಂದ ಭಾರತದ ನಾನಾ ಭಾಗಗಳಿಂದ ಅನುಭಾವಿಗಳು ಸೇರಿಕೊಂಡರು. ಇವರಲ್ಲಿ ಕಾಶ್ಮೀರದ ದೊರೆ ಮಹಾದೇವ ಸತಿ ಹಾಗೂ ಸಹೋದರಿ ಸಹಿತ ಬಂದರು, ಅವರು ಕಲ್ಯಾಣಕ್ಕೆ ಬಂದ ಮೇಲೆ ಮೋಳಿಗೆ ಮಾರುವ ಕಾಯಕ ಕೈಕೊಂಡು ಮೋಳಿಗೆ ಮಾರಯ್ಯನೆಂದು ಸುಪ್ರಸಿದ್ಧನಾದ ಇವನಂತೆ ಬಂದ ಅನೇಕರಲ್ಲಿ ಬನವಾಸಿ ದೇಶದಿಂದ ಅಲ್ಲಮಪ್ರಭು, ಅಕ್ಕಮಹಾದೇವಿಯರು, ಸೊಲ್ಲಾಪುರದಿಂದ ಬಂದ ಸಿದ್ಧರಾಮದೇವರು ಸುಪ್ರಸಿದ್ಧರು. ಇವರು ತಮ್ಮ ಅನುಭಾವ ವಿಷಯವನ್ನು ಸಾಮಾಜಿಕ, ಆರ್ಥಿಕ ವಿಚಾರಗಳನ್ನು ವಚನರೂಪದಲ್ಲ ಅಂದರೆ ಚಿಕ್ಕ ಚಿಕ್ಕ ಮಾತಿನ ರೂಪದಲ್ಲಿ ಬರೆದರು. ಅದು ವಚನಸಾಹಿತ್ಯವೆಂದು ಪ್ರಸಿದ್ಧವಾಯಿತು. ಇವರು ಅಂದು ಕೈಕೊಂಡ ಕಾರ್ಯಗಳಲ್ಲಿ ಜಾತೀಯ ನಿರ್ಮೂಲನವೂ ಒಂದು ಮಹಾಕಾರ್ಯವಾಗಿದೆ. ೨೦ನೆಯ ಶತಮಾನದಲ್ಲಿ ಗಾಂಧೀಜಿಯವರು ಉಚ್ಚಕುಲದವರ ಹಾಗೂ ಹರಿಜನ ಹುಡುಗಿಗೆ ಲಗ್ನ ಮಾಡಿಸಿದಂತೆ ಈಗ ಎಂಟ ನೂರು ವರ್ಷಗಳ ಹಿಂದೆ ಮಹಾತ್ಮಾ ಬಸವಣ್ಣನವರು ಅವರಿಗೆ ವೀರಶೈವ ದೀಕ್ಷೆ ಕೊಟ್ಟು ಲಗ್ನ ಮಾಡಿದ್ದು ಜಾತೀಯತೆಯ ನಿರ್ಮೂಲನದ ಪ್ರಥಮ ಘಟನೆ. ಭಾರತೀಯ ಚರಿತ್ರೆಯಲ್ಲಿ ಸ್ತ್ರೀ–ಪುರುಷರಲ್ಲಿ ಸಮಾನತೆಯನ್ನು ಅನುಷ್ಠಾನಕ್ಕೆ ತಂದ ಮಹಾನುಭಾವಿಗಳಿವರು. ಕಾಯಕದಲ್ಲಿ ಹಿರಿ–ಕಿರಿದೆಂಬುದಿಲ್ಲೆಂಬುದನ್ನು ತೋರಿಸಿದವರಿವರು. ಡೋಹರ ಕಕ್ಕಯ್ಯನ ಪ್ರಸಾದಕ್ಕಾಗಿ ಬಸವಣ್ಣನವರು ತಪಿಸಿದರೆಂದರೆ ಇಂದಿನ ಜನಾಂಗದ ಕಣ್ಣು ಕುಕ್ಕಿಸುವಂಥ ಘಟನೆ. ಎಲ್ಲರೂ ಸೇರಿ ದುಡಿಯೋಣ, ಎಲ್ಲರೂ ಸೇರಿ ಹಂಚಿಕೊಳ್ಳೋಣ, ಎಲ್ಲರೂ ನೆಮ್ಮದಿಯಿಂದ, ಸ್ವಾತಂತ್ರ್ಯದಿಂದ ಬದುಕೋಣ ಎಂಬ ಆದರ್ಶದಿಂದ ಈ ಮಹಾನುಭಾವಿಗಳು ಅವರ ಮುಂದಾಳುವಾದ ಮಹಾತ್ಮಾ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಜನ

ಜೀವನವನ್ನು ಎಚ್ಚರಿಸಿದರು. ಈ ಪ್ರತಿಯೊಂದು ಘಟನೆಯು ವೀರತ್ವವನ್ನು ತೋರಿಸುತ್ತದೆ. ಇದು ವೀರಶೈವದ ಪ್ರತಿಷ್ಠಾಪನೆ. ಬಸವಣ್ಣನವರು ಈ ಕಾರ್ಯವನ್ನು ಮಾಡಿ ಆಗಮವನ್ನು ಉದ್ಧರಿಸಿದರು. ಇವರೆಲ್ಲರು ಶಿವಶರಣರು.

ವೀರಶೈವ ಮತದ ಭಕ್ತಿ, ವಿಶ್ವವಿಚಾರಗಳು ತುಂಬಾ ಉದ್ಬೋಧಕವಾಗಿರುತ್ತವೆ. ಹನ್ನೆರಡನೆಯ ಶತಮಾನದ ಪೂರ್ವದಲ್ಲಿ ನಡೆದ ಶೈವಮತದ ಬೆಳವಣಿಗೆ, ವೈಷ್ಣವ ಮತ್ತು ಶಾಕ್ತ ಮತದ ಬೆಳವಣಿಗೆಯಿಂದ ಅಲ್ಲಿ ತೋರುವ ಭಕ್ತಿಯ ಬೆಳವಣಿಗೆಯ ಹಿನ್ನೆಲೆಯಲ್ಲಿ ವೀರಶೈವ ಮತದ ಭಕ್ತಿಯ ಬೆಳವಣಿಗೆಯು ತುಂಬಾ ಮಹತ್ವಪೂರ್ಣವಾದುದಾಗಿರುತ್ತದೆ. ನವ ವಿಧ ಭಕ್ತಿಯ ಹಲವಾರು ಛಾಯೆಗಳು ಬಸವಾದಿ ಪ್ರಮಥರ ವಚನಗಳಲ್ಲಿ ಕಂಡುಬರುತ್ತವೆ. ಲಿಂಗ(ದೇವರು), ಅಂಗ (ಜೀವ)ರ ಸಾಮರಸ್ಯವೇ ಇಲ್ಲಿಯ ಭಕ್ತಿಯ ಫಲ. ಭಕ್ತಿಯೆಂದರೆ ಸಮರಸ ಸಿದ್ಧಿ, ಭಕ್ತಿಯೇ ದೇವರು ಎಂಬ ವಿಚಾರದಲ್ಲಿ ಪರಿಪೂರ್ಣವಾಗುವುದು. ಇದು ಭಕ್ತಿಯ ಪರಮ ಲಕ್ಷಣವಾಗಿರುತ್ತದೆ. ಇದರ ಎರಡು ರೂಪಗಳನ್ನು ಬಸವಣ್ಣನವರ ವಚನದಲ್ಲಿ ಕಾಣುತ್ತೇವೆ. (೧) ದೇವಲೋಕ ಮರ್ತ್ಯಲೋಕವೆಂಬ ಸೀಮೆಯುಳ್ಳನ್ನಕ್ಕ ಕೇವಲ ಶರಣನಾಗಲರಿಯ !' ಸತ್ತು ಬೆರಸಿಹೆನೆಂದರೆ ಕಬ್ಬಿನ ತುದಿಯ ಮೆಲೆದಂತೆ ! ಕೂಡಲ ಸಂಗಮದೇವ!' ಎಂಬುದು ಭಕ್ತಿಯ ದೃಷ್ಟಿಯಿಂದ ಪ್ರಪಂಚ ನೋಡಿ ದೇವಲೋಕ ಮರ್ತ್ಯಲೋಕ ಎಂಬೆರಡು ಬೇರೆ ಬೇರೆ ಎಂದು ತಿಳಿದವನು ಭಕ್ತನಲ್ಲ. ಆ ಭಕ್ತನು ಸತ್ತು ದೇವರಲ್ಲಿ ಸೇರಿದನು ಎನ್ನುವವನಿಗೆ ಮುಕ್ತಿಯಿಲ್ಲ ಎಂಬ ವಿಚಾರವನ್ನಿಲ್ಲಿ ನೋಡುತ್ತೇವೆ. ಪ್ರಪಂಚ ಮಾಯೆಯಲ್ಲ. ಸಂಸಾರ ನೀರಸವಲ್ಲ. ಅದನ್ನು ಬಿಟ್ಟು ಓಡಿ ಹೋಗಬೇಕಾಗಿಲ್ಲ. ಇದು ಅದರ ಮಥಿತಾರ್ಥ. ಆದುದರಿಂದ ಭಕ್ತನ ತಾತ್ವಿಕ ದೃಷ್ಟಿಯನ್ನಿಲ್ಲಿ ನೋಡಬಹುದು. ಇದರಿಂದ ಜೀವನದ ದೃಷ್ಟಿಕೋನದಲ್ಲಿ ಹೊಸತಿರುವು ಉಂಟಾದಂತಾಗಿದೆ. ಇದು ಬಸವಣ್ಣನವರ ಭಕ್ತಿದರ್ಶನದ ಸರ್ವೋತ್ತಮ ಫಲ. ದ್ವೈತ ದೃಷ್ಟಿಯಿಂದ ಕೂಡ ನೋಡಿದ ದಾರ್ಶನಿಕರಂತೆ ಶಿವಭಕ್ತ ಭಂಡಾರಿ ಬಸವಣ್ಣನವರು ನೋಡಿದ ರೀತಿ ಕೂಡ ಅಷ್ಟೇ ಮಹತ್ವಪೂರ್ಣವಾದುದು. ಗಮನಾರ್ಹವಾದುದು ಆಗಿರುತ್ತದೆ. ಅದ್ವೈತಭಕ್ತಿಯತ್ತ ಹೊರಳಿಸಿದ ದ್ವೈತ ಭಕ್ತಿಯನ್ನು, ಈ ವಚನದಲ್ಲಿ ನೋಡಬಹುದು:

ಸ್ವರ್ಗಲೋಕ ಮರ್ತ್ಯಲೋಕ ಬೇರಿಲ್ಲ ಕಾಣಿರೋ
ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ,
ಆಚಾರವೇ ಸ್ವರ್ಗ ಅನಾಚಾರವೇ ನರಕ
ಕೂಡಲ ಸಂಗಮದೇವಾ ನೀವೇ ಪ್ರಮಾಣ,

ಇಲ್ಲಿ ನೈತಿಕ ದೃಷ್ಟಿಯಿಂದ ನೋಡಿದ ಬಸವಣ್ಣನವರು ಭಕ್ತಿಯಲ್ಲಿ ಪಾರಮಾರ್ಥ ಪ್ರಪಂಚಗಳು ಅಲ್ಲಿ ಇಲ್ಲಿ ಎಂದು ಜನರನ್ನು ಆಕಾಶ ಹಾಗು ಭೂಮಿಗಳತ್ತ ನೋಡ ಹಚ್ಚಿದವರಲ್ಲ. ನಮ್ಮಲ್ಲಿಯೇ ಆ ಎರಡು ಉಂಟು. ಅದನ್ನು ನಾವು ಸಿದ್ಧಿಸಬೇಕು. ಇದು ಆಚಾರದಿಂದ ಸಾಧ್ಯವೆಂದು ಬಸವಣ್ಣನವರು ಹೇಳುತ್ತಾರೆ. ಇದು ಬಸವಣ್ಣನವರು ಸಾಧಿಸಿದ ದಾರ್ಶನಿಕ ಸಿದ್ದಿ. ಇದರಿಂದ ಜೀವನದಲ್ಲಿ ಆತ್ಮನಲ್ಲಿಯಂತೆಯೆ ವಿಶ್ವಾಸ ಬೆಳೆಸುವ ದರ್ಶನ ಬಸವಣ್ಣನವರದು. ವ್ಯವಹಾರ ಮತ್ತು ಪರಮಾರ್ಥಗಳ ಸಾಮರಸ್ಯವನ್ನು ನಾವಿಲ್ಲಿ ನೋಡುತ್ತೇವೆ.

ಬಸವಣ್ಣನವರು ಆಗಮ ಮತದ ಸರ್ವೋತ್ಕೃಷ್ಟ ಫಲವಾಗಿ ಆ ನಂದಾದೀವಿಗೆಯು ಪ್ರಶಾಂತವಾಗಿ ಪ್ರಕಾಶಮಾನವಾಗಿ ನಿರಂತರ ಬೆಳಗುವಂತೆ ಮಾಡಿದರು. ಅವರನ್ನು ಪಾಶ್ಚಿಮಾತ್ಯರು ಮಾರ್ಟಿನ್ ಲ್ಯೂಥರಿಗೆ ಹೋಲಿಸುತ್ತಾರೆ. ಬಸವಣ್ಣನವರು ಗಾಂಧೀಜಿಯಂತೆ ಹರಿಜನೋದ್ಧಾರ ಮಾಡಿದರೆಂದು ಅವರನ್ನು ಈ ವಿಚಾರ ಪ್ರಯೋಗಾಮಿಗಳೆಂದು ಹೇಳುತ್ತಾರೆ. ಆರ್ಥಿಕ ಕ್ಷೇತ್ರದಲ್ಲಿ ಸಾಮಾಜಿಕ ಕ್ಷೇತ್ರದಲ್ಲಿ ಗೈದ ಕ್ರಾಂತಿಯಿಂದ ಬಸವಣ್ಣನವರ ತತ್ತ್ವವನ್ನು ಕಾರ್ಲ ಮಾರ್ಕ್ಸ್‌ತತ್ತ್ವಜ್ಞಾನಕ್ಕೆ ಹೋಲಿಸುತ್ತಾರೆ. ಸಾಹಿತ್ಯದಲ್ಲಿ ಹೊಸ ಯುಗ ಪ್ರವರ್ತಕ ಬಸವಣ್ಣನೆಂದು ಹೇಳುತ್ತಾರೆ. ಬಸವಣ್ಣನವರ ಜೀವನ ಸಂದೇಶವು ಆಧುನಿಕ ಪ್ರಪಂಚಕ್ಕೆ ತುಂಬಾ ಉಪಯುಕ್ತವಿದೆ. ಮಾನವ ಕುಲ ಒಂದು ಎಂಬ ಬುದ್ಧಿಯಿಂದ ನಾವೆಲ್ಲ ಒಂದು ಎಂಬ ಘೋಷಣೆ ಮಾಡಿದರು ಬಸವಣ್ಣ. ಅವರು ತಿಳಿಸುವ ವಿಧಿ ಹೀಗಿದೆ:

"ಇವನಾರವ ಇವನಾರವ ಇವನಾರವನೆನ್ನದಿರಯ್ಯ
ಇವ ನಮ್ಮವ ಇವ ನಮ್ಮವನೆಂದೆನಿಸಯ್ಯ

ಎಂಬ ಬಂಧು ಭಾವ ಬೋಧೆಯೊಡನೆ ಈ ಆಗಮ ಪರಂಪರೆಯ ಉಚ್ಚ ಸಂಪ್ರದಾಯ ಮೆರೆದುದನ್ನತ್ತಿ ತೋರಿಸಿ ಈ ಲೇಖನ ಮುಗಿಸುತ್ತೇನೆ.

"ಪ್ರೇಮವಿದ್ದಲ್ಲಿ ತ್ಯಾಗವಿರಲೇಬೇಕು. ತ್ಯಾಗವಿದ್ದಲ್ಲಿ ಪ್ರೇಮವಿರುತ್ತದೆ. ಅಂಥವರಲ್ಲಿ ಸ್ವಕರ್ತವ್ಯನಿಷ್ಠೆ ಇರುತ್ತದೆ."

—ಪಂ. ನಾಗಭೂಷಣ ಶಾಸ್ತ್ರಿಗಳವರು

(ಸಾವಧಾನ, ೧೫-೧೨-೭೯)

ಶಿವಭಕ್ತನು ಆಚರಿಸಬೇಕಾದ ಗಣಾಚಾರದ ಸ್ವರೂಪವು ನಿರೂಪಿಸಲ್ಪಟ್ಟಿದೆ. ಆದರೆ "ಯಾರಾದರೂ ಶಿವನಿಂದೆಯನ್ನು ಮಾಡುತ್ತಿದ್ದರೆ ಆ ನಿಂದಕನನ್ನು ಶಿವಭಕ್ತನಾದವನು ಸಂಹರಿಸಬೇಕು. ಅಥವಾ ಆ ಸ್ಥಾನವನ್ನಾದರೂ ತ್ಯಜಿಸಬೇಕು." ಇದು ಗಣಾಚಾರ ಸ್ವರೂಪ.

ಸಿದ್ಧಾಂತ ಶಿಖಾಮಣಿಯ ಮೇಲಿನ ಈ ಶ್ಲೋಕಕ್ಕೆ ಟೀಕೆಯನ್ನು ಬರೆಯುವಾಗ ಮರಿತೋಂಟದಾರ್ಯರು ಈ ಗಣಾಚಾರಕ್ಕೆ "ಶ್ರೀ ವೀರಭದ್ರ" ಮತ್ತು "ಶ್ರೀ ಬಸವೇಶ್ವರ" ಇವರಿಬ್ಬರನ್ನು ದೃಷ್ಟಾಂತವಾಗಿ ಉದಾಹರಿಸಿದ್ದಾರೆ. ಅಂದರೆ ದಕ್ಷಬ್ರಹ್ಮನು ಶಿವನಿಗೆ ಅಪಮಾನಕರವಾದ ಯಜ್ಞವನ್ನು ಮಾಡುತ್ತಿರುವಾಗ ಶ್ರೀ ವೀರಭದ್ರನು ಅಲ್ಲಿಗೆ ಹೋಗಿ ದಕ್ಷಬ್ರಹ್ಮನನ್ನು ಸಂಹರಿಸಿದನು. ಅದರಂತೆ ಕಲ್ಯಾಣ ಕ್ರಾಂತಿಯ ಸಮಯದಲ್ಲಿ ಅಲ್ಲಿಯ ಶಿವಭಕ್ತರಿಗೆ ಪ್ರಾಣಾಪಾಯ ಬಂದೊದಗಿದಾಗ ಶ್ರೀ ಬಸವೇಶ್ವರರು ಕಲ್ಯಾಣವನ್ನು ತ್ಯಜಿಸಿ ಕೂಡಲಸಂಗಮಕ್ಕೆ ಹೋಗಿ ಅಲ್ಲಿಯೇ ಐಕ್ಯರಾದರೆಂಬ ಇತಿಹಾಸವಿದೆ. ಹೀಗೆ ಗಣಾಚಾರವನ್ನು ತಿಳಿಸುವದರ ಸಲುವಾಗಿ ಮರಿತೋಂಟದಾರ್ಯರು ಅವತರಣಿಕೆಯಲ್ಲಿ ಶ್ರೀ ವೀರಭದ್ರ ಮತ್ತು ಶ್ರೀ ಬಸವೇಶ್ವರರ ಹೆಸರುಗಳನ್ನು ಉಲ್ಲೇಖಿಸಿದ್ದಾರೆ, ಹೀಗೆ ಸಿದ್ಧಾಂತ ಶಿಖಾಮಣಿಯಲ್ಲಿ ಬಂದ ಶ್ರೀ ಬಸವೇಶ್ವರರ ಉಲ್ಲೇಖ ಮೂಲ ಗ್ರಂಥಕಾರನಿಂದ ಬರೆಯಲ್ಪಟ್ಟದ್ದೋ ಅಥವಾ ಟೀಕಾಕಾರರಿಂದ ಬರೆಯಲ್ಪಟ್ಟದ್ದೋ ಎಂಬ ವಿಷಯವನ್ನು ಕೂಲಂಕಷವಾಗಿ ವಿಚಾರಿಸದೆ ದಾಸಗುಪ್ತರು ಈ ಗ್ರಂಥವನ್ನು ಶ್ರೀ ಬಸವೇಶ್ವರರ ನಂತರ ಕೃತಿಯೆಂದೂ, ೧೩ನೆಯ ಶತಮಾನದ್ದೆಂದೂ ಬರೆದುದು ಪ್ರಮಾದಪೂರ್ಣವು, ಪ್ರಮಾಣಶೂನ್ಯವು ಆಗಿದೆ. ಇದಲ್ಲದೆ ಇವರ ಪ್ರಮಾದವೆಂದರೆ ಬಸವೇಶ್ವರರ ಜೀವನದ ಬಗ್ಗೆ ಬರೆಯುವಾಗ ಬಸವೇಶ್ವರರು ತಮ್ಮ ಬಾಲ್ಯಾವಸ್ಥೆಯಲ್ಲಿಯೇ ಬಾಗೇವಾಡಿಯಿಂದ ಕಲ್ಯಾಣಕ್ಕೆ ಹೋದರೆಂದು ಹೇಳಿ ಕಲ್ಯಾಣವೆಂದರೆ ಬೀದರ ಜಿಲ್ಲೆಯ ಕಲ್ಯಾಣವೆಂದು ಹೇಳಿದ್ದಾರೆ.[1] ಇದು ಇವರ ಐತಿಹಾಸಿಕತೆಯ ಅವಿಚಾರವನ್ನು ವ್ಯಕ್ತಪಡಿಸುತ್ತದೆ.

ಇನ್ನು ಶರಣರ ವಚನ ಸಾಹಿತ್ಯದತ್ತ ದೃಷ್ಟಿಬೀರಿದಾಗ ಶ್ರೀ ಬಸವೇಶ್ವರ ತಮ್ಮ ವಚನದಲ್ಲಿ ಸಿದ್ಧಾಂತ ಶಿಖಾಮಣಿಯ ಶ್ಲೋಕವನ್ನು ಪ್ರಮಾಣ ರೂಪವಾಗಿ ಉದಾಹರಿಸಿದ್ದನ್ನು ನಾವು ಕಾಣುತ್ತೇವೆ.

---

1 From his native place Bagewadi, he went to Kalyan near Bombay, at a comparatively young age, when Bijjala was regining there as king (A. D. 1157-67).

ನೀನೊಲಿಯಿತ್ತೆ ಪುಣ್ಯ; ನೀನೊಲ್ಲದುದೆ ಪಾಪ, ।
ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ.
ನೀನೊಲಿದವನೆ ನಿಮ್ಮನರಿವನು,
ಪ್ರಸಾದಾದ್ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥
ನೀನೊಲಿದವನೆ ಧನ್ಯ, ಜಗಕ್ಕೆ ಪಾವನ, ಕೂಡಲಸಂಗಮದೇವಾ.

(ಬಸವಣ್ಣನವರ ವಚನಗಳು, ನಂ. ೫೦೫, ಕ.ವಿ.ವಿ.ಪ್ರ.)

ಬಸವೇಶ್ವರರ ವಚನದಲ್ಲಿ ಈ ಸಂಸ್ಕೃತ ಶ್ಲೋಕ ಸಿದ್ಧಾಂತ ಶಿಖಾಮಣಿಯ ೯ನೆಯ ಪರಿಚ್ಛೇದದ ೧೧ನೆಯ ಶ್ಲೋಕವಾಗಿದೆ. ಇದರಿಂದ ಶ್ರೀ ಬಸವೇಶ್ವರರಿಗಿಂತಲೂ ಪೂರ್ವದಲ್ಲಿಯೇ ಈ ಗ್ರಂಥ ಪ್ರಾಮಾಣಿಕವೂ, ಮಾರ್ಗದರ್ಶಕವೂ ಆಗಿತ್ತೆಂಬುದಕ್ಕೆ ಅವರ ವಚನವೇ ಪ್ರಮಾಣವೆಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ.[1]

ಯದ್ಯಪಿ ಶ್ರೀ ಬಸವೇಶ್ವರರು ಮೇಲಿನ ವಚನದಲ್ಲಿ ಸಿದ್ಧಾಂತ ಶಿಖಾಮಣಿಯ ಹೆಸರನ್ನು ತೆಗೆದುಕೊಂಡಿಲ್ಲವಾದರೂ ಶ್ಲೋಕದ ಆಧಾರದಿಂದ ಇದು ಸಿದ್ಧಾಂತ ಶಿಖಾಮಣಿಯದೆಂದು ನಿರ್ಣಯಿಸುವಲ್ಲಿ ವಿಮರ್ಶಕರಿಗೆ ಆದಾವ ತೊಂದರೆಯೂ ಇಲ್ಲ.

ಇದಲ್ಲದೆ ಕೆಲಜನರು ತಾಳೆಗರಿಯ ಸಿದ್ಧಾಂತ ಶಿಖಾಮಣಿಯ ಪ್ರತಿಗಳ ಪ್ರಾರಂಭದಲ್ಲಿ "ಶ್ರೀ ಗುರು ಬಸವಲಿಂಗಾಯನಮಃ" ಎಂದು ಇರುವದನ್ನು ನೋಡಿ ಇದಿಪ್ಪರಿಂದಲೇ ಈ ಗ್ರಂಥವು ಬಸವೇಶ್ವರರ ನಂತರದ್ದು ಎಂಬ ಶುಷ್ಕ ತರ್ಕವನ್ನು ಮಾಡುವದುಂಟು. ಆದರೆ ಈ ತರ್ಕ ಸ್ವೀಕಾರಾರ್ಹವಲ್ಲ ಏಕೆಂದರೆ ಉಪಲಬ್ಧವಿರುವ ತಾಳೆಗರಿಯ ಎಲ್ಲ ಪ್ರತಿಗಳ ಪ್ರಾರಂಬದಲ್ಲಿ ಶ್ರೀ ಗುರು ಬಸವಲಿಂಗಾಯ ನಮಃ ಎಂದು ಇದ್ದಿದ್ದರೆ ಒಂದು ಪಕ್ಷಕ್ಕೆ "ತುಷ್ಯತುದುರ್ಜನನ್ಯಾಯ'' ದಿಂದ ಒಪ್ಪಬಹುದಾಗಿತ್ತು. ಆದರೆ ಸಧ್ಯ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರ ಮತ್ತು "ಕನ್ನಡ ಅನುಸಂಧಾನ ಸಂಸ್ಥಾನ"ದಲ್ಲಿಯ ಸಿದ್ಧಾಂತ ಶಿಖಾಮಣಿಯ ತಾಳೆಗರಿಯ ಹಸ್ತಪ್ರತಿಗಳಲ್ಲಿ ಕೇವಲ ಎರಡು ಪ್ರತಿಗಳ

---

೧. "ಮಣಿಮುಕುರ ಪ್ರಭೆ." ಸಂ. ಪಂಚಾಕ್ಷರಿ ಹಿರೇಮಠ ೧೯೭೬ ಪುಟ ೧೩, ಲೇ. ಪ್ರೊ. ಟಿ. ಸುಂದರೇಶನ್.

ಪ್ರಾರಂಭದಲ್ಲಿ ಮಾತ್ರ ಶ್ರೀಗುರು ಬಸವಲಿಂಗಾಯನಮಃ ಎಂದು ಇದ್ದರೂ[1] ಉಳಿದ ಪ್ರತಿಗಳಲ್ಲಿ "ಶ್ರೀಗುರು ರೇವಣಸಿದ್ಧಾಯನಮಃ"[2] "ಶ್ರೀಗುರು ನಿರಂಜನ ಸಂಗಮಾಯನಮಃ" "ಶ್ರೀ ಸಿದ್ಧಲಿಂಗೇಶ್ವರಾಯನಮಃ"[3] "ಶ್ರೀ ಕಾಳಹಸ್ತೀಶ್ವರಾಯನಮಃ"[4] "ಶ್ರೀ ಗುರುನಾಥಾಯನಮಃ[5] ಎಂದು ಇವೆ. ಈ ಮೇಲಿನ ಒಕ್ಕಣಿಕೆಗಳಿಂದ ತಿಳಿದುಬರುವದೇನಂದರೆ ಅನಂತರದ ಲಿಪಿಕಾರರು ತಮ್ಮ ತಮ್ಮ ಇಷ್ಟದೇವತೆಯನ್ನು ಸ್ಮರಿಸಿರುವರೆಂಬುದು ತಿಳಿಯುವದೇ ವಿನಃ ಮೂಲ್ಯಗ್ರಂಥಕಾರನಾದ ಶ್ರೀ ಶಿವಯೋಗಿ ಶಿವಾಚಾರ್ಯರಿಂದ ಬರೆದವುಗಳಲ್ಲವೆಂಬುದು ವಿದ್ವಾಂಸರಿಗೆ ತಿಳಿಯದಿರಲಾರದು.

ಇನ್ನು ಕೆಲವರು ಸಿದ್ಧಾಂತ ಶಿಖಾಮಣಿಯಲ್ಲಿ "ಮಾಟ" ಎಂಬ ಶಬ್ದದ ಪ್ರಯೋಗವಾಗಿರುವದರಿಂದ "ಮಾಟ-ಕೂಟ" ಈ ಶಬ್ದಗಳು ಕನ್ನಡ ಶಬ್ದಗಳು, ಮೇಲಾಗಿ ಶರಣರು ತಮ್ಮ ವಚನಗಳಲ್ಲಿ ಇವುಗಳನ್ನು ಬಳಸಿಕೊಂಡಿದ್ದಾರೆ. ಅಂದ ಬಳಿಕ ಶರಣರಿಂದ ಬಳಸಲ್ಪಟ್ಟ ಈ ಶಬ್ದಗಳು ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿರುವದರಿಂದ ಈ ಗ್ರಂಥ ಶರಣರ ಕಾಲದ ನಂತರದ್ದೆಂದು ಅಭಿಪ್ರಾಯ. ಆದರೆ ಮಾಟ— ಮಾಡು ಎಂಬ ಅರ್ಥವುಳ್ಳ ಈ ಶಬ್ದವು ಮೂಲ ಸಿದ್ಧಾಂತ ಶಿಖಾಮಣಿಯಲ್ಲಿ ಎಲ್ಲಿಯೂ ಪ್ರಯುಕ್ತವಾಗಿಲ್ಲ ಕಿಂತು ೯ನೆಯ ಪರಿಚ್ಛೇದದಲ್ಲಿ ಸೋಪಾಧಿ, ನಿರೂಪಾಧಿ ಮತ್ತು ಸಹಜದಾನ ಎಂಬ ಮೂರು ಪ್ರಕಾರದ ದಾನಮಾಡುವ ಪದ್ಧತಿಯು ಉಕ್ತವಾಗಿದ್ದು ಆ ಶ್ಲೋಕಗಳ ಟೀಕೆಯನ್ನು ಬರೆಯುವಾಗ ಶ್ರೀ ಮರಿತೋಂಟದಾರ್ಯರು (ಸು. ೧೭೮೦) ಈ ಮೂರು ಪ್ರಕಾರದ ದಾನಗಳಿಗೆ ಸೋಪಾಧಿಮಾಟ ನಿರುಪಾಧಿಮಾಟ ಮತ್ತು ಸಹಜಮಾಟ ಎಂಬ ಪದವನ್ನು ಪ್ರಯೋಗಿಸಿದ್ದಾರೆ.[6] ಕಾರಣ ಈ ಮಾಟ ಎಂಬ ಪದವು ಟೀಕಾಕಾರನ ಅವತರಣಿಕೆಯಲ್ಲಿದೆಯೇ ವಿನಃ ಮೂಲ ಗ್ರಂಥದಲ್ಲಿ ಇಲ್ಲವೆಂಬುದು ವಿದ್ವಾಂಸರಿಗೆ ಅಗೋಚರವೇನಲ್ಲ.

---

೧. ಅ. ನಂ. ೯೪— ಕನ್ನಡ ಅನುಸಂಧಾನ ಸಂಸ್ಥಾನ ಕ. ವಿ. ವಿ.ಧಾರವಾಡ.
ಬ ನಂ. ೧೫೬೦—ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಬಂಡಾರ ಕ.ವಿ. ವಿ ಧಾ.
೨ ಅ. ನಂ. ೧೫೦೭ ,, ,, ,, ,, ,, ,,
೩. ಅ ನಂ. ೨೩೪೧ ,, ,, ,, ,, ,, ,,
೪. ಅ. ಸಂ. ೨೪೬೮ ,, ,, ,, ,, ,, ,,
೫. ಅ ನಂ. ೨೩೭೭ ,, ,, ,, ,, ,, ,,
೬. ಸಿದ್ಧಾಂತ ಶಿಖಾಮಣಿ— ವಾರದ ಪ್ರಕಾಶನ ಸೋಲಾಪೂರ, ೧೯೦೫, ಪರಿಚ್ಛೇದ ೯. ಶ್ಲೋಕ ೧-೫, ಪುಟ ೧೬೧-೧೬೨

ಇದಲ್ಲದೇ ದೇವರ ದಾಸಿಮಯ್ಯ, ಶ್ರೀ ಬಸವೇಶ್ವರ, ಅಕ್ಕಮಹಾದೇವಿ, ಪ್ರಭುದೇವ ಇವರೆಲ್ಲರ ಮೇಲೆ ಸಿದ್ಧಾಂತ ಶಿಖಾಮಣಿಯು ತನ್ನ ಪ್ರಭಾವವನ್ನು ಬೀರಿರುವದಾಗಿ ಶ್ರೀ ಜ. ಚ. ನಿ. ಯವರು ಉದಾಹರಣಸಹಿತವಾಗಿ ಪ್ರಸ್ಥಾಪಿಸಿದ್ದಾರೆ.[1] ಈ ಎಲ್ಲ ದೃಷ್ಟಿಗಳಿಂದ ಈ ಗ್ರಂಥವು ಶರಣರಿಗಿಂತ ಪೂರ್ವದಲ್ಲಿಯೇ ಪ್ರಸಿದ್ಧವಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅಲ್ಲದೇ ಶ್ರೀಪತಿ ಪಂಡಿತರು ಶ್ರೀಕರ ಭಾಷ್ಯದಲ್ಲಿ ಈ ಗ್ರಂಥದ ಶ್ಲೋಕಗಳನ್ನು ಗ್ರಂಥನಾಮ ನಿರ್ದೇಶ ಪೂರ್ವಕವಾಗಿ ಉದಾಹರಿಸಿದ್ದರಿಂದ ಇದು ಶ್ರೀ ಪತಿ ಪಂಡಿತರ ಕಾಲಕ್ಕಾಗಲೇ ಪ್ರಾಮಾಣಿಕ ಗ್ರಂಥವಾಗಿತ್ತೆಂಬುದರಲ್ಲಿ ವಿವಾದವೇನಿಲ್ಲ. ಶ್ರೀಪತಿ ಪಂಡಿತರ ಕಾಲವನ್ನು ವಿದ್ವಾಂಸರನೇಕರು ೧೦೯೦ ಎಂದು ಈಗಾಗಲೇ ನಿರ್ಣಯಿಸಿದಾರ್ದೆ.[2]

ಇನ್ನು ಜಿ. ಮರುಳಸಿದ್ಧಯ್ಯ ಎಂಬವರು "ಪ್ರಬುದ್ಧ ಕರ್ನಾಟಕ"ದ ಸಂಪುಟ ೫೮, ಸಂಚಿಕೆ ೧ (೧೯೭೯) ರಲ್ಲಿ "ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ " ಎಂಬ ಲೇಖನವನ್ನು ಬರೆದ ವೀರಶೈವ ಸಂಸ್ಕೃತ ಗ್ರಂಥಗಳ ಕಾಲವನ್ನು ನಿರೂಪಿಸುತ್ತ, ೩೭ ನೇಯ ಪುಟದಲ್ಲಿ ಶ್ರೀಪತಿ ಪಂಡಿತರ ಕಾಲವನ್ನು ೧೧೬೦ ಎಂದೂ, ೩೯ ನೆಯ ಪುಟದಲ್ಲಿ ಅವರ ಕಾಲವನ್ನೇ ೧೦೨೦ ಎಂದೂ ಬರೆದಿದ್ದಾರೆ. ಒಂದೇ ಲೇಖನದಲ್ಲಿ ಒಬ್ಬ ಗ್ರಂಥಕಾರರ ಕಾಲವನ್ನು ಭಿನ್ನ ಭಿನ್ನವಾಗಿ ಹೇಳುವದು ಅಸಮಂಜಸ, ಇದಲ್ಲದೆ ಇದೇ ಲೇಖನ ೩೭ ನೆಯ ಪುಟದಲ್ಲಿ ಸಿದ್ಧಾಂತ ಶಿಖಾಮಣಿಯ ಕಾಲವನ್ನು ೧೩೦೦ ಎಂದು ಬರೆದಿದ್ದಾರೆ. ಶ್ರೀಪತಿ ಪಂಡಿತಾರಾಧ್ಯರಿಗಿಂತಲೂ ಪೂರ್ವದ ಸಿದ್ಧಾಂತ ಶಿಖಾಮಣಿಯ ಕಾಲವನ್ನು ೧೩೦೦ ಎಂದೂ, ನಂತರದ ಶ್ರೀಕರ ಭಾಷ್ಯದ ಕಾಲವನ್ನು ೧೧೬೦ ಅಥವಾ ೧೦೨೦ ಎಂದೂ ಬರೆಯುವದು ಪೂರ್ವಪರ ವಿಪರೀತವಾಗಿದೆ ಎಂಬುದು ಅವರಿಗೆ ಹೇಗೆ ತಿಳಿಯಲಿಲ್ಲವೋ ?

ಇನ್ನಷ್ಟು ಮುಂದೆ ಹೋಗಿ ವಿಚಾರಿಸಲಾಗಿ "ಶ್ರೀಕರ ಭಾಷ್ಯ "ಕ್ಕಿಂತಲೂ ಪೂರ್ವದ್ದಾದ "ಶ್ರೀಕಂಠ ಭಾಷ್ಯ" (ಸು.೧೦ ನೆಯ ಶತಮಾನ)ದ ಚತುರ್ಥ ಅಧ್ಯಾಯ ಚತುರ್ಥ ಪಾದದ "ಅವಿಭಾಗೇನ ದೃಷ್ಟತ್ವಾತ್" ಎಂಬ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ಸಿದ್ಧಾಂತ ಶಿಖಾಮಣಿಯ ೯ ನೆಯ ಪರಿಚ್ಛೇದದ ೧೪ ನೆಯ ಶ್ಲೋಕದ "ಮುಕ್ತಃ ಶಿವಸಮೋಭವೇತ್" ಎಂಬ ಅಂಶವನ್ನು ಶ್ರೀಕಂಠ ಶಿವಾಚಾರ್ಯರು ಉದ

---

೧. (ಅ) ಭಾರತೀಯ ದರ್ಶನ. ಲೇ ಆಚಾರ್ಯ ಬಲದೇವ ಉಪಾಧ್ಯಾಯ. ೧೯೬೬. ಚೌಖಂಬಾ ಓರಿಯಂಟಾಲಿಯಾ ಪು. ವಾರಣಾಸಿ. ಪುಟ.೪೭೯

(ಬ) ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ ಲೇ. ಪಂ. ಕಾಶೀನಾಥ ಶಾಸ್ತ್ರಿ ಪಂಚಾಚಾರ್ಯ ಇಲೆಕ್ಟ್ರಿಕ ಪ್ರೆಸ. ಮೈಸೂರು.

೨. ಮಣಿಮುಕುರ ಪ್ರಭೆ. ಸಂ. ಪಂಚಾಕ್ಷರಿ ಹಿರೇಮಠ ೧೯೭೬, ಪುಟ. ೬೨೭.

ಪ್ರಾರಂಭದಲ್ಲಿ ಮಾತ್ರ ಶ್ರೀಗುರು ಬಸವಲಿಂಗಾಯನಮಃ ಎಂದು ಇದ್ದರೂ[1] ಉಳಿದ ಪ್ರತಿಗಳಲ್ಲಿ "ಶ್ರೀಗುರು ರೇವಣಸಿದ್ಧಾಯನಮಃ"[2] "ಶ್ರೀಗುರು ನಿರಂಜನ ಸಂಗಮಾಯನಮಃ" "ಶ್ರೀ ಸಿದ್ಧಲಿಂಗೇಶ್ವರಾಯನಮಃ"[3] "ಶ್ರೀ ಕಾಳಹಸ್ತೀಶ್ವರಾಯನಮಃ"[4] "ಶ್ರೀ ಗುರುನಾಥಾಯನಮಃ[5] ಎಂದು ಇವೆ. ಈ ಮೇಲಿನ ಒಕ್ಕಣಿಕೆಗಳಿಂದ ತಿಳಿದುಬರುವದೇನಂದರೆ ಅನಂತರದ ಲಿಪಿಕಾರರು ತಮ್ಮ ತಮ್ಮ ಇಷ್ಟ ದೇವತೆಯನ್ನು ಸ್ಮರಿಸಿರುವರೆಂಬುದು ತಿಳಿಯುವದೇ ವಿನಃ ಮೂಲಗ್ರಂಥಕಾರನಾದ ಶ್ರೀ ಶಿವಯೋಗಿ ಶಿವಾಚಾರ್ಯರಿಂದ ಬರೆದವುಗಳಲ್ಲವೆಂಬುದು ವಿದ್ವಾಂಸರಿಗೆ ತಿಳಿಯದಿರಲಾರದು.

ಇನ್ನು ಕೆಲವರು ಸಿದ್ಧಾಂತ ಶಿಖಾಮಣಿಯಲ್ಲಿ "ಮಾಟ" ಎಂಬ ಶಬ್ದದ ಪ್ರಯೋಗವಾಗಿರುವದರಿಂದ "ಮಾಟ–ಕೂಟ" ಈ ಶಬ್ದಗಳು ಕನ್ನಡ ಶಬ್ದಗಳು, ಮೇಲಾಗಿ ಶರಣರು ತಮ್ಮ ವಚನಗಳಲ್ಲಿ ಇವುಗಳನ್ನು ಬಳಸಿಕೊಂಡಿದ್ದಾರೆ. ಅಂದ ಬಳಿಕ ಶರಣರಿಂದ ಬಳಸಲ್ಪಟ್ಟ ಈ ಶಬ್ದಗಳು ಸಿದ್ಧಾಂತ ಶಿಖಾಮಣಿಯಲ್ಲಿ ಬಂದಿರುವದರಿಂದ ಈ ಗ್ರಂಥ ಶರಣರ ಕಾಲದ ನಂತರದ್ದೆಂದು ಅಭಿಪ್ರಾಯ. ಆದರೆ ಮಾಟ— ಮಾಡು ಎಂಬ ಅರ್ಥವುಳ್ಳ ಈ ಶಬ್ದವು ಮೂಲ ಸಿದ್ಧಾಂತ ಶಿಖಾಮಣಿಯಲ್ಲಿ ಎಲ್ಲಿಯೂ ಪ್ರಯುಕ್ತವಾಗಿಲ್ಲ ಕಿಂತು ೯ನೆಯ ಪರಿಚ್ಛೇದದಲ್ಲಿ ಸೋಪಾಧಿ, ನಿರೂಪಾಧಿ ಮತ್ತು ಸಹಜದಾನ ಎಂಬ ಮೂರು ಪ್ರಕಾರದ ದಾನಮಾಡುವ ಪದ್ಧತಿಯು ಉಕ್ತವಾಗಿದ್ದು ಆ ಶ್ಲೋಕಗಳ ಟೀಕೆಯನ್ನು ಬರೆಯುವಾಗ ಶ್ರೀ ಮರಿತೋಂಟದಾರ್ಯರು (ಸು. ೧೭೮೦) ಈ ಮೂರು ಪ್ರಕಾರದ ದಾನಗಳಿಗೆ ಸೋಪಾಧಿಮಾಟ ನಿರುಪಾಧಿಮಾಟ ಮತ್ತು ಸಹಜಮಾಟ ಎಂಬ ಪದವನ್ನು ಪ್ರಯೋಗಿಸಿದ್ದಾರೆ.[6] ಕಾರಣ ಈ ಮಾಟ ಎಂಬ ಪದವು ಟೀಕಾಕಾರನ ಅವತರಣಿಕೆಯಲ್ಲಿದೆಯೇ ವಿನಃ ಮೂಲ ಗ್ರಂಥದಲ್ಲಿ ಇಲ್ಲವೆಂಬುದು ವಿದ್ವಾಂಸರಿಗೆ ಅಗೋಚರವೇನಲ್ಲ.

---

೧. ಅ. ನಂ. ೯೪— ಕನ್ನಡ ಅನುಸಂಧಾನ ಸಂಸ್ಥಾನ ಕ. ವಿ. ವಿ. ಧಾರವಾಡ.
ಬ ನಂ. ೧೫೬೦—ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಬಂಡಾರ ಕ. ವಿ. ವಿ ದಾ.

೨ ಅ. ನಂ. ೧೫೦೭ ,, ,, ,, ,, ,, ,,

೩. ಅ ನಂ. ೨೩೪೧ ,, ,, ,, ,, ,, ,,

೪. ಅ. ನಂ. ೨೪೬೮ ,, ,, ,, ,, ,, ,,

೫. ಅ ನಂ. ೨೩೭೭ ,, ,, ,, ,, ,, ,,

೬. ಸಿದ್ಧಾಂತ ಶಿಖಾಮಣಿ— ವಾರದ ಪ್ರಕಾಶನ ಸೋಲಾಪೂರ, ೧೯೦೫, ಪರಿಚ್ಛೇದ ೯. ಶ್ಲೋಕ ೧–೫, ಪುಟ ೧೬೧–೧೬೨

ಇದಲ್ಲದೇ ದೇವರ ದಾಸಿಮಯ್ಯ, ಶ್ರೀ ಬಸವೇಶ್ವರ, ಅಕ್ಕಮಹಾದೇವಿ, ಪ್ರಭುದೇವ ಇವರೆಲ್ಲರ ಮೇಲೆ ಸಿದ್ಧಾಂತ ಶಿಖಾಮಣಿಯು ತನ್ನ ಪ್ರಭಾವವನ್ನು ಬೀರಿರುವದಾಗಿ ಶ್ರೀ ಜ. ಚ. ನಿ. ಯವರು ಉದಾಹರಣಸಹಿತವಾಗಿ ಪ್ರಸ್ಥಾಪಿಸಿದ್ದಾರೆ.[1] ಈ ಎಲ್ಲ ದೃಷ್ಟಿಗಳಿಂದ ಈ ಗ್ರಂಥವು ಶರಣರಿಗಿಂತ ಪೂರ್ವದಲ್ಲಿಯೇ ಪ್ರಸಿದ್ಧವಾಗಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅಲ್ಲದೇ ಶ್ರೀಪತಿ ಪಂಡಿತರು ಶ್ರೀಕರ ಭಾಷ್ಯದಲ್ಲಿ ಈ ಗ್ರಂಥದ ಶ್ಲೋಕಗಳನ್ನು ಗ್ರಂಥನಾಮ ನಿರ್ದೇಶ ಪೂರ್ವಕವಾಗಿ ಉದಾಹರಿಸಿದ್ದರಿಂದ ಇದು ಶ್ರೀ ಪತಿ ಪಂಡಿತರ ಕಾಲಕ್ಕಾಗಲೇ ಪ್ರಾಮಾಣಿಕ ಗ್ರಂಥವಾಗಿತ್ತೆಂಬುದರಲ್ಲಿ ವಿವಾದವೇನಿಲ್ಲ. ಶ್ರೀಪತಿ ಪಂಡಿತರ ಕಾಲವನ್ನು ವಿದ್ವಾಂಸರನೇಕರು ೧೦೯೦ ಎಂದು ಈಗಾಗಲೇ ನಿರ್ಣಯಿಸಿದಾರ್ದೆ.[2]

ಇನ್ನು ಜಿ. ಮರುಳಸಿದ್ಧಯ್ಯ ಎಂಬವರು "ಪ್ರಬುದ್ಧ ಕರ್ನಾಟಕ"ದ ಸಂಪುಟ ೫೪, ಸಂಚಿಕೆ ೧ (೧೯೭೯) ರಲ್ಲಿ "ಸಂಸ್ಕೃತದಲ್ಲಿ ವೀರಶೈವ ಸಾಹಿತ್ಯ" ಎಂಬ ಲೇಖನವನ್ನು ಬರೆದ ವೀರಶೈವ ಸಂಸ್ಕೃತ ಗ್ರಂಥಗಳ ಕಾಲವನ್ನು ನಿರೂಪಿಸುತ್ತ, ೩೭ ನೇಯ ಪುಟದಲ್ಲಿ ಶ್ರೀಪತಿ ಪಂಡಿತರ ಕಾಲವನ್ನು ೧೧೬೦ ಎಂದೂ, ೩೯ ನೆಯ ಪುಟದಲ್ಲಿ ಅವರ ಕಾಲವನ್ನೇ ೧೦೨೦ ಎಂದೂ ಬರೆದಿದ್ದಾರೆ. ಒಂದೇ ಲೇಖನದಲ್ಲಿ ಒಬ್ಬ ಗ್ರಂಥಕಾರರ ಕಾಲವನ್ನು ಭಿನ್ನ ಭಿನ್ನವಾಗಿ ಹೇಳುವದು ಅಸಮಂಜಸ, ಇದಲ್ಲದೆ ಇದೇ ಲೇಖನ ೩೭ ನೆಯ ಪುಟದಲ್ಲಿ ಸಿದ್ಧಾಂತ ಶಿಖಾಮಣಿಯ ಕಾಲವನ್ನು ೧೩೦೦ ಎಂದು ಬರೆದಿದ್ದಾರೆ. ಶ್ರೀಪತಿ ಪಂಡಿತಾರಾಧ್ಯರಿಗಿಂತಲೂ ಪೂರ್ವದ ಸಿದ್ಧಾಂತ ಶಿಖಾಮಣಿಯ ಕಾಲವನ್ನು ೧೩೦೦ ಎಂದೂ, ನಂತರದ ಶ್ರೀಕರ ಭಾಷ್ಯದ ಕಾಲವನ್ನು ೧೧೬೦ ಅಥವಾ ೧೦೨೦ ಎಂದೂ ಬರೆಯುವದು ಪೂರ್ವಪರ ವಿಪರೀತವಾಗಿದೆ ಎಂಬುದು ಅವರಿಗೆ ಹೇಗೆ ತಾನೆ ತಿಳಿಯಲಿಲ್ಲವೋ ?

ಇನ್ನಷ್ಟು ಮುಂದೆ ಹೋಗಿ ವಿಚಾರಿಸಲಾಗಿ "ಶ್ರೀಕರ ಭಾಷ್ಯ"ಕ್ಕಿಂತಲೂ ಪೂರ್ವದ್ದಾದ "ಶ್ರೀಕಂಠ ಭಾಷ್ಯ" (ಸು.೧೦ ನೆಯ ಶತಮಾನ)ದ ಚತುರ್ಥ ಅಧ್ಯಾಯ ಚತುರ್ಥ ಪಾದದ "ಅವಿಭಾಗೇನ ದೃಷ್ಟತ್ವಾತ್" ಎಂಬ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ ಸಿದ್ಧಾಂತ ಶಿಖಾಮಣಿಯ ೯ ನೆಯ ಪರಿಚ್ಛೇದದ ೧೪ ನೆಯ ಶ್ಲೋಕದ "ಮುಕ್ತಃ ಶಿವಸಮೋಭವೇತ್" ಎಂಬ ಅಂಶವನ್ನು ಶ್ರೀಕಂಠ ಶಿವಾಚಾರ್ಯರು ಉದ

---

೧. (ಅ) ಭಾರತೀಯ ದರ್ಶನ. ಲೇ ಆಚಾರ್ಯ ಬಲದೇವ ಉಪಾಧ್ಯಾಯ. ೧೯೭೬. ಚೌಖಂಬಾ ಓರಿಯಂಟಾಲಿಯಾ ಪ್ರ. ವಾರಣಾಸಿ. ಪುಟ. ೪೮೯

(ಬ) ಶ್ರೀಪತಿ ಪಂಡಿತಾರಾಧ್ಯರ ಕಾಲನಿರ್ಣಯ ಲೇ. ಪಂ. ಕಾಶೀನಾಥ ಶಾಸ್ತ್ರಿ ಪಂಚಾಚಾರ್ಯ ಇಲೆಕ್ಟ್ರಿಕ ಪ್ರೆಸ. ಮೈಸೂರು.

೨. ಮಣಿಮುಕುರ ಪ್ರಭೆ. ಸಂ. ಪಂಚಾಕ್ಷರಿ ಹಿರೇಮಠ ೧೯೭೬, ಪುಟ. ೬೨೭.

ಹೇಸಿದ್ದಾರೆ. ಇದರಿಂದ ಸಿದ್ಧಾಂತ ಶಿಖಾಮಣಿಯು ೧೦ ನೆಯ ಶತಮಾನದಲ್ಲಿಯೇ ಪ್ರಸಿದ್ಧವಾಗಿದ್ದು ವಿದ್ವದಾದರವನ್ನು ಪಡೆದಿತ್ತೆಂಬುದಕ್ಕೆ ಶ್ರೀಕಂಠ, ಶ್ರೀಕರ ಭಾಷ್ಯಗಳೇ ಸಾಕ್ಷಿಯಾಗಿವೆ.

ಇನ್ನು ಎಂ. ಜಿ. ನಂಜುಂಡಾರಾಧ್ಯರು ಈ ಗ್ರಂಥದ ಆಂತರಿಕ ಪ್ರಸಂಗಗಳ ಮೇಲಿಂದ ಇದು ಕ್ರಿ.ಶ. ಸು. ೮ ನೇಯ ಶತಮಾನದ್ದೆಂದು ಅಭಿಪ್ರಾಯ ಪಡುತ್ತಾರೆ. ಶಿವಯೋಗಿ ಶಿವಾಚಾರ್ಯರ ಕಾಲಕ್ಕೆ ಭೌದ್ಧಮತದ ಪ್ರಚಾರ ಪ್ರಬಲವಾಗಿತ್ತು. ಶಿವಯೋಗಿ ಶಿವಾಚಾರ್ಯರು ಭೌದ್ಧವೇ ಮೊದಲಾದ ಪ್ರತಿ ಸಿದ್ಧಾಂತಗಳೆಂಬ ಕತ್ತಲೆಯನ್ನು ಹೋಗಲಾಡಿಸಲು ತಮ್ಮನ್ನು ಸೂರ್ಯನನ್ನಾಗಿ ಹೇಳಿಕೊಂಡಿದ್ದಾರೆ. (ಸಿದ್ಧಾಂತ ಶಿಖಾಮಣಿ ಪರಿ.೧ ಶ್ಲೋ. ೨೩ ). ಇದಲ್ಲದೇ ಗುರುವಂಶ ಕಾವ್ಯ,'ಶಿವತತ್ತ ರತ್ನಾಕರಗಳಲ್ಲಿ ಬರುವ, 'ರೇವಣಸಿದ್ಧರು ಆದಿಶಂಕರರಿಗೆ ಚಂದ್ರಮೌಳೀಶ್ವರ ಲಿಂಗ ಪ್ರಧಾನ ಮಾಡಿದ ವಿಷಯ ಶಿವಯೋಗಿ ಶಿವಾಚಾರ್ಯರಿಗೆ ತಿಳಿದಿಲ್ಲ. ಇಲ್ಲವಾದರೆ ಈಶಾನಮುನಿ, ಬೊಮ್ಮರಸ ಮುಂತಾದವರು ಬರೆದ ರೇಣುಕ ವಿಜಯಾದಿ ಗ್ರಂಥಗಳಲ್ಲಿಯ ಅನೇಕ ಪವಾಡಗಳ ಕತೆಗಳನ್ನು ಸಿದ್ಧಾಂತಶಿಖಾಮಣಿಯಲ್ಲಿ ಉಲ್ಲೇಖಿಸಬಹುದಾಗಿತ್ತು, ಆದ್ದರಿಂದ ಶಿವಯೋಗಿ ಶಿವಾಚಾರ್ಯರು ಆದಿ ಶಂಕರರಿಗಿಂತ ಪೂರ್ವದವರು ಎಂಬಲ್ಲಿ ಯಾವ ಸಂದೇಹವೂ ಇಲ್ಲ ಎನ್ನುವದು ನಂಜುಂಡಾರಾಧ್ಯರ ಊಹೆ.

ಇದರಂತೆ ಡಾ.ಜ.ಚ.ನಿ. ಯವರು ರೇಣುಕರೇ ಬೇರೆ ರೇವಣಸಿದ್ಧರೇ ಬೇರೆಯೆಂದು ತರ್ಕಬದ್ಧವಾಗಿ ಪ್ರತಿಪಾದಿಸಿದ್ದಾರೆ.

ಈ ಎಲ್ಲ ದೃಷ್ಟಿಕೋನಗಳಿಂದ ವಿಚಾರಿಸಲಾಗಿ ಶಿವಯೋಗಿ ಶಿವಾಚಾರ್ಯರು ರೇವಣಸಿದ್ಧರಿಗಿಂತಲೂ ಪೂರ್ವದವರು ಮತ್ತು ಅವರ ಕೃತಿಯಾದ ಸಿದ್ಧಾಂತ ಶಿಖಾಮಣಿಯು ಇಂದಿಗೆ ಸುಮಾರು ೧೨೦೦ ವರ್ಷಗಳ ಪೂರ್ವದಲ್ಲಿ ರಚಿತವಾಗಿರಲಿಕ್ಕೆ ಸಾಕೆಂದು ವಿಮರ್ಶಕರು ಸಹಜವಾಗಿ ಒಪ್ಪಬಹುದಾಗಿದೆ. ಈ ವಿಷಯವಾಗಿ ಇನ್ನು ಸಂಶೋಧನೆಯು ಅತ್ಯಾವಶ್ಯಕವಾದ್ದರಿಂದ ಮುಂದಿನ ವಿಮರ್ಶಕರಿಗವ ಕಾಶವನ್ನಿತ್ತು ವಿರಮಿಸುತ್ತೇವೆ.

ವೀರಶೈವ ಧರ್ಮದ ವಿದ್ವದ್ವರೇಣ್ಯರಾದ ಪಂ. ಶ್ರೀ ನಾಗಭೂಷಣ ಶಾಸ್ತ್ರಿಗಳ ಅಮೃತ ಮಹೋತ್ಸವದ ಈ ಶುಭಸಂದರ್ಭದಲ್ಲಿ ವಿಮರ್ಶಾತ್ಮಕವಾದ ಈ ಅಲ್ಪ ಲೇಖನವನ್ನು ಪೂಜ್ಯ ಶಾಸ್ತ್ರಿಗಳಿಗೆ ಸಮರ್ಪಿಸಿ ಅಭಿನಂದಿಸುತ್ತೇವೆ.

ಇದರಂತೆ ಶ್ರೀ ಶಾಸ್ತ್ರಿಗಳ ವಜ್ರಮಹೋತ್ಸವ ಮತ್ತು ಶತಮಾನೋತ್ಸವಗಳು ನೆರವೇರಿ ಅವರ ಆದರ್ಶವು ವೀರಶೈವದ ವಿದ್ವಾಂಸರಿಗೆಲ್ಲ ಮಾರ್ಗದರ್ಶಕವಾಗಲೆಂದು ಶ್ರೀ ಕಾಶೀ ವಿಶ್ವನಾಥ ಅನ್ನಪೂರ್ಣೆಯರಲ್ಲಿ ಅನನ್ಯೋನವಾಗಿ ಪ್ರಾರ್ಥಿಸುತ್ತೇವೆ.

೦ ೦

# ಜಪರಹಸ್ಯ

ಡಾ. ಶ್ರೀ. ಷ. ಬ್ರ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು

ಜಗತ್ತಿನ ಎಲ್ಲ ಧರ್ಮಗಳಲ್ಲಿ ಜಪಸಾಧನೆಯ ಉಲ್ಲೇಖ ಉಂಟು. ಈ ಜಪ ಸಾಧನೆಯು ಭಿನ್ನ ಭಿನ್ನ ಧರ್ಮಗಳಲ್ಲಿ ಭಿನ್ನ ಭಿನ್ನವಾಗಿದೆ. ಪ್ರಾಚೀನ ಕಾಲದಿಂದಲೂ ಮಹಾತ್ಮರು ಇದನ್ನು ಒಂದು ಆಧ್ಯಾತ್ಮಿಕ ವಿಜ್ಞಾನವೆಂದು ಪರಿಗಣಿಸಿದ್ದಾರೆ. ಜಪದಲ್ಲಿ ನಾಮ ಜಪ ಮತ್ತು ಮಂತ್ರ ಜಪ ಎಂದು ಎರಡು ವಿಧಾನ ಉಂಟು, ಇದರಲ್ಲಿ ನಾಮಜಪದ ಅಧಿಕಾರ ಸಾಮಾನ್ಯತಃ ಸರ್ವರಿಗೂ ಇದ್ದರೂ ಮಂತ್ರಜಪದ ಅಧಿಕಾರ ಎಲ್ಲರಿಗೂ ಇರುವದಿಲ್ಲ. ಆದರೆ ಗುರುವಿನಿಂದ ಉಪದೇಶ ಪಡೆದ ಅಧಿಕಾರಿಗಳಿಗೆ ಮಾತ್ರವಿದೆ. ಈ ಮಂತ್ರ ಜಪವನ್ನು ಸಾರಲು ಪ್ರಶಾಂತವಾದ ಪರ್ವತ ಅಥವಾ ನದೀತೀರಾದಿಗಳು ನಿರ್ದೇಶಿಸಲ್ಪಟ್ಟಿರುತ್ತವೆ.

ಮಂತ್ರವು ಮಾತೃಕೆಗಳ ಸಮಷ್ಟಿಯಿಂದ ಉಟಾಗುತ್ತದೆ. ಅಖಂಡ ಪ್ರಕಾಶದಿಂದ ಸ್ಫುರಿತವಾಗುವ ತತ್ತ್ವವೇ ಮಹಾಶಕ್ತಿ. ಸೃಷ್ಟ್ಯುನ್ಮುಖ ಮಹಾಶಕ್ತಿಯು ಯಾವಾಗಲೂ ದೇಶ ಕಾಲಗಳ ಸಂಬಂಧ ವಿಲ್ಲದೇ ನಿರಂತರ ಹರಿದಾಡುತ್ತಿರುತ್ತದೆ. ಇವುಗಳ ಸ್ಫುರಿತ ಬಿಂದುಗಳೇ ಮಾತೃಕೆಗಳು. ಈ ಬಿಂದುಗಳ ಸಮಷ್ಟಿಯೇ ಅಖಂಡತ್ವ. ವ್ಯಷ್ಟಿ ಮಿಶ್ರಣವೇ ಅನಂತ ಪ್ರಕಾರದ ಮಂತ್ರಗಳು. ಆ ಮಂತ್ರಗಳು ಸ್ವರೂಪವೇ ದೇವಿ ದೇವತೆಯರು. ಪ್ರತಿಯೊಂದು ಸೃಷ್ಟಿಗೆ ಮಾತೃಕೆಗಳೇ ಮೂಲ ಕಾರಣ. ಪಂಚತತ್ತ್ವಗಳ ಸೃಷ್ಟಿಗೆ ಭೂತಮಾತೃಕೆಗಳು ಕಾರಣವಾದರೆ ಮಂತ್ರಾಧ್ವದ ಸೃಷ್ಟಿಗೆ ಮಂತ್ರ ಮಾತೃಕೆಗಳೇ ಮೂಲಕಾರಣ.

ಮಂತ್ರದ ಅರ್ಥವು ಮನನ ಧರ್ಮದಿಂದ ಅತೀತವಾದ ತತ್ತ್ವ, ಅರ್ಥಾತ್, ಮಂತ್ರಶಕ್ತಿಯು ಮನಸ್ಸಿನ ಅತೀತವಾದ ಶಕ್ತಿಗೆ ಒಯ್ಯುವದಾರಿ ಅಥವಾ ಸ್ವರೂಪವನ್ನು ಅಭಿವ್ಯಕ್ತ ಮಾಡುವ ರಹಸ್ಯ. ಋಷಿಯೋ ಮಂತ್ರ ದ್ರಷ್ಟಾರ: ಎಂಬ ಉಕ್ತಿಯಿಂದ ಇದು ಸ್ಪಷ್ಟವಾಗುತ್ತದೆ. ಮಂತ್ರ ಸಾಕ್ಷಾತ್ಕಾರ ಮಾಡಿಕೊಂಡವರೇ "ಋಷಿ"

ಎನಿಸಿಕೊಳ್ಳುತ್ತಾರೆ ಈ ಮಂತ್ರ ಸಾಕ್ಷಾತ್ಕಾರವು ಪಶ್ಯಂತಿ ಎಂಬ ವಿಶೇಷ ಭೂಮಿಕೆಯಲ್ಲಿ ಉಂಟಾಗುತ್ತದೆ. ಇಂದ್ರಿಯ ಹಾಗೂ ಮನಗಳ ಅತೀತವಾದ ಅವಸ್ಥೆ "ಮಂತ್ರ ವರ್ಣಾತ್ಮಿಕೋ ದೇವತಾ" ಎಂಬ ವೇದೋಕ್ತಿಯಿಂದ. ವರ್ಣಗಳಿಂದ ಮಂತ್ರ, ಮಂತ್ರದಿಂದ ದೇವತೆ. ಪ್ರತಿಯೊಂದು ಶಬ್ದಕ್ಕೆ ಅರ್ಥವಿರುವಂತೆ ಪ್ರತಿಯೊಂದು ಮಂತ್ರಕ್ಕೆ ಆದರ ಅರ್ಥರೂಪವಾದದ್ದೇ ಅದರ ದೇವತೆ. ಗುರು ಮಂತ್ರದ ಅರ್ಥವಾದ ದೇವತೆಯನ್ನು ಸಾಕ್ಷಾತ್ಕರಿಸಿಕೊಂಡು ಆ ಮಂತ್ರವನ್ನು ಶಿಷ್ಯನಿಗೆ ಉಪದೇಶಿಸಿದರೆ ಅದು ಜಾಗ್ರತಮಂತ್ರವೆನಿಸಿಕೊಳ್ಳುತ್ತದೆ. ಇಂತಹ ಮಂತ್ರವೇ ಶೀಘ್ರ ಫಲದಾಯಿಯಾದದ್ದು. ವೀರಶೈವರು ಇದನ್ನು ಸೂಚಿಸುವದಕ್ಕಾಗಿಯೇ ಅಷ್ಟಾವರಣದಲ್ಲಿ ಗುರುವನ್ನು ಮೊದಲನೆಯದಾಗಿಯೂ "ಮಂತ್ರ"ವನ್ನು ಅಂತಿಮವನ್ನಾಗಿಯೂ ಪ್ರತಿಪಾದಿಸಿದ್ದಾರೆ. ಮಂತ್ರವನ್ನು ಗುರುವಿನಿಂದ ಉಪದೇಶಪಡೆಯದೇ ಸ್ವತಃ ಜಪಮಾಡಿದ ಮಾತ್ರಕ್ಕೆ ಸಿದ್ಧಿಯಾಗುವದಿಲ್ಲ. ಆದ್ದರಿಂದ ಮಂತ್ರಸಿದ್ಧಿಗೆ ಗುರೂಪದೇಶ ಮತ್ತು ಸಾಧಕನ ಪ್ರಯತ್ನ ಎರಡೂ ಆವಶ್ಯಕವಾದವುಗಳು.

...

ಶಿಷ್ಯನು ಗುರುವಿನಲ್ಲಿ ಅನನ್ಯಭಕ್ತಿವುಳ್ಳವನಾಗಿ ಮಂತ್ರದೀಕ್ಷೆಯನ್ನು ಪಡೆಯಬೇಕಾಗುತ್ತದೆ. ಈ ದೀಕ್ಷೆಯಿಂದ ಶಿಷ್ಯನ ಮಾಂಸಪಿಂಡವು ಮಂತ್ರಪಿಂಡವಾಗುತ್ತದೆ. ಇದಕ್ಕೇನೆ "ಮಂತ್ರತನು" ಎನ್ನುತ್ತಾರೆ. ಈ ಮಂತ್ರತನುವಿನಲ್ಲಿಯೇ ಅಹಂ ಬುದ್ಧಿಯಿಂದ ಸಾಧಕನು ಇಚ್ಛಾ, ಪ್ರಾಣ ಮತ್ತು ವಾಕ್ಯಗಳ ಸಹಾಯದಿಂದ ಜಪವನ್ನು ಪ್ರಾರಂಭಿಸುತ್ತಾನೆ. ಕಾಲಗತಿಯಿಂದ ತಪ್ಪಿಸಿ ಕೇಂದ್ರಸ್ವರೂಪವನ್ನು ಪಡೆಯಲು ಮಂತ್ರಜಪವೇ ಕಾರಣ. ಹೀಗೆ ಮಂತ್ರಪಿಂಡವನ್ನಾಶ್ರಯಿಸಿ ಜಪಮಾಡುವ ಸಾಧಕನು ಕಾಲಚಕ್ರದಲ್ಲಿ ಇದ್ದರೂ ಅವನ ಮೂಲಕೇಂದ್ರದ ಸ್ಪರ್ಶಸುಖವನ್ನು ಅನುಭವಿಸುತ್ತಾನೆ. ಇದರ ಪ್ರತೀಕವೇ ಮಾಲಾಜಪದ ವಿಧಾನ. ನಾವು ೧೦೮ರ ರುದ್ರಾಕ್ಷಿ ಮಾಲೆಯನ್ನು ಜಪಕ್ಕಾಗಿ ಉಪಯೋಗಿಸುತ್ತೇವೆ. ಅದರಲ್ಲಿರುವ ವಿಧಾನವೆಂದರೆ ಮೇರುಮಣಿಯನ್ನು ದಾಟಕೂಡದು, ಅಂದರೆ ಯಾವಮಣಿಯಿಂದ ಜಪಪ್ರಾರಂಭವಾಗುವದೋ ಪುನಃ ಅದೇ ಮಣಿಗೆ ಬರುವ ವಿಧಾನ. ಇದರ ಅರ್ಥವೇನೆಂದರೆ ಕಾಲಗತಿಯ ಪರಿಣಾಮದಲ್ಲಿ ಶಿವತತ್ತ್ವ ಸಂಬಂಧವಿಲ್ಲ. ಆದರೆ ಇದರ ವಿಪರೀತ ಗತಿಯಿಂದ ಒಂದು ಬಿಂದುವಿನಿಂದ ಮತ್ತೊಂದು ಬಿಂದುವಿಗೆಹೋಗುವದೇ ವೃತ್ತಿಗತಿ. ಈ ಗತಿಯಿಂದಲೇ ವೃತ್ತದ ಕೇಂದ್ರದಲ್ಲಿ ಹೋಗಲು ಸಾಧ್ಯ, ಇದಕ್ಕೇನೇ ಪವಿತ್ರತತ್ವವೆಂದು ಶಾಕ್ತರು ಅಭಿಪ್ರಾಯ ಪಡುತ್ತಾರೆ. ಇದುವೇ ಮಹಾಲಿಂಗ ವಸ್ತು ಶಿವತತ್ತ್ವ.

ಸಾಧಕನು ಈ ಸ್ಥಿತಿಯನ್ನು ಪಡೆಯಬೇಕಾದರೆ ಮೊದಲು ಸಂಖ್ಯಾ ಜಪವನ್ನು ಮಾಡಬೇಕಾಗುವದು. ಇದರಿಂದಲೇ ಅವನಿಗೆ ಮಂತ್ರದ ಗತಿಶಕ್ತಿಯು ತಿಳಿಯುವದು. ...ರಂಗದಲ್ಲಿ ಮಾಡುವ ಈ ಕ್ರಿಯೆಯೇ ಅವನ ಅಂತರಂಗದ ಮೇಲೆ ಪ್ರಭಾವವನ್ನು ...ರುತ್ತದೆ. ಸಾಧಕನು ಅಂತರಂಗದ ಅರಿವಿನಲ್ಲಿ ಅನುಸಂಧಾನ ಮಾಡಿದಾಗ ...ರ್ಗತ ಮೇರು ಎಣಿಸಿಕೊಳ್ಳುವ ಕೇಂದ್ರದಲ್ಲಿ ಸಂಖ್ಯಾಗತ ಜಪದ ಶಕ್ತಿಯನ್ನು ...ಯ ಮಾಡುವ ಕ್ರಮವುಂಟು. ಈ ಕ್ರಮವು ಗುರುಕೃಪೆಯಿಂದ ಸಾಧ್ಯ. ಇದು ...ಷ್ಯವಾದ ವಿಷಯ. ಸಾಧಕನ ವೈಖರಿಯ ಜಪ ಇಲ್ಲಿಗೆ ನಿಂತುಬಿಡುತ್ತದೆ ಮತ್ತು ...ಭಾವಿಕ ಅಂತರ್ಜಪವು ಕ್ರಿಯಾಶೀಲವಾಗುತ್ತದೆ.

"ಗುರುಪ್ರದತ್ತ" ಈ ಮಂತ್ರವು ನಾಲ್ಕು ಪ್ರಕಾರದ ವಾಕ್ಕುಗಳಿಗೆ ಸಮ್ಬಂಧಿಸಿರು... ...ರು. ಗುರೂಪದೇಶದ ಮಹಿಮೆಯಿಂದ ಶಿಷ್ಯನ ಪರಾ, ಪಶ್ಯಂತಿ, ಮಧ್ಯಮಾ ಮತ್ತು ...ಖರಿ ಈ ನಾಲ್ಕು ವಾಕ್ಕುಗಳಲ್ಲಿ ಶಕ್ತಿ ಸಂಚಾರವಾಗುತ್ತದೆ. ಬೀಜದಲ್ಲಿ ವೃಕ್ಷ ...ರುವಂತೆ ಈ ಮಂತ್ರದಲ್ಲಿ ಇಷ್ಟದೇವತೆ ಅಡಕವಾಗಿರುತ್ತದೆ. ಮಂತ್ರವನು ...ಗ್ರತವಾಡಿಕೊಳ್ಳುವದಕ್ಕಾಗಿ ಅದರ ಆವೃತ್ತಿಯನ್ನು ಮಾಡಬೇಕು. ಜಪಮಾಡುವ ...ದಲ್ಲಿ ಸಾಧಕನು ಮತ್ತು ಅಪಾನಗಳನ್ನು ನಿರೀಕ್ಷಿಸುತ್ತಿದ್ದು.

ಜಾಗ್ರತ ಮಂತ್ರದಲ್ಲಿ ಇಷ್ಟದ ಪ್ರಾಣತಾದಾತ್ಮ್ಯ ಇರುತ್ತದೆ. ಗುರುವು ಶಿಷ್ಯನನ್ನು ...ಪ್ತಿ ಅವಸ್ಥೆಗೆ ಕರೆದೊಯ್ದು ಪಶ್ಯಂತಿ, ಮಧ್ಯಮಾ, ವೈಖರಿ ಈ ಮೂರು ವಾಣಿ ...ಲ್ಲಿ ತಾದಾತ್ಮ್ಯವನ್ನು ಮಾಡಿ ಮಂತ್ರಪ್ರಧಾನ ಮಾಡುತ್ತಾನೆ. ಗುರುವು ತನ್ನ ...ನನ್ನಾಗಿ ಮಾಡಿಕೊಳ್ಳುವ ಮುನ್ನ ಸಾಧಕರ ಹಿಂದಿನ ಅಥವಾ ಹಿಜನ್ಮಗಳ ಉಪಾಸನೆ ...ನ್ನು ತಿಳಿದುಕೊಂಡು ಉಪದೇಶಿಸುತ್ತಾನೆ. ಇವನಿಗೆ ಸದ್ಗುರು ಎನ್ನುತ್ತಾರೆ ...ತ್ರ ವಿಜ್ಞಾನ ಹಾಗೂ ಮಾತೃಕೆಗಳ ಜ್ಞಾನಬಲ್ಲ ಹಾಗು ಮಾತೃಕೆಗಳ ಹಿನ್ನಲೆ ...ಲ್ಲಿರುವ ಮಹಾಶಕ್ತಿಯ ಸಾಕ್ಷಾತ್ಕಾರ ಮಾಡಿಕೊಂಡ ಮಹಾಪುರುಷನಿಗೆ ಅಖಂಡ ...ರು ಎನ್ನುತ್ತಾರೆ. ಇಂತಹ ಗುರುವು ಕೆಲವರಿಗೆ ಮಾತ್ರ ಅವರ ಸೌಭಾಗ್ಯದಿಂದ ...ರೆಯುತ್ತಾನೆ.

ಗುರು ಪ್ರದತ್ತ ಶಕ್ತಿಯು ೫೦% ಇದ್ದರೆ ಅದನ್ನು ೧೦೦% ಮಾಡಿಕೊಳ್ಳಲು ...ನು ಸಾಧನೆಯನ್ನು ಮಾಡಬೇಕಾಗುವದು. ಈ ಸಾಧನೆಯಿಂದ ಮನಸ್ಸಿನ ವಿಕಲ್ಪನೆ ...ಳು ನಿವೃತ್ತವಾಗುವವು. ಶಬ್ದಾರ್ಥಗಳ ಚಿಂತನೆಯು ದುಃಖಕ್ಕೆ ಕಾರಣವಾದ್ದರಿಂದ ...ತ್ರ ಶಕ್ತಿಯು ಈ ಚಿಂತನೆಯನ್ನು ನಾಶಗೊಳಿಸುತ್ತದೆ. ಸಾಧಕನ ಜಪದಲ್ಲಿಯ ...ಧಾನತೆಯು ಅವನ ಜಾಗ್ರತ ಸ್ವಪ್ನ ಮತ್ತು ಸುಷುಪ್ತಿಗಳ ಮೇಲೆ ಪ್ರಭಾವ ಬೀರು... ...ನೆ. ಈ ಪ್ರಭಾವದಿಂದ ಸಾಧಕನು ಪ್ರಾಣ ಹಾಗು ಬಿಂದುವಿನ ಸ್ಪರ್ಶ ಮಾಡುತ್ತಾನೆ.

ಬಿಂದು ಸಿದ್ಧಸಾಧಕನು ಕಾಲಶಕ್ತಿಯಿಂದ ಪ್ರಾಣಶಕ್ತಿಯ ಮೇಲೆ ಜಯ ಹೊಂದಿ ಸುಷುಮ್ನಾದಲ್ಲಿ ಪ್ರವೇಶಿಸಿದರೆ ಮಂತ್ರಯೋಗಿಗಳು ಸಹಜವಾಗಿ ಕೇವಲ ಮಂತ್ರ ಸಾಧ್ಯನೆಯಿಂದಲೇ ಸಹಜವಾಗಿ ಸುಷುಮ್ನೆಯಲ್ಲಿ ಪ್ರವೇಶಿಸುತ್ತಾರೆ. ಸಾಧಕನು ಮಂತ್ರಾಭ್ಯಾಸದಿಂದ ಅಂತರಿಕ ಛಂದಾನುಗಮನ ಮಾಡುವದರಿಂದ ಸಹಜವಾಗಿಯು ಇವನ ಅಸ್ತಿತ್ವವು ಮಧ್ಯಮಾ ಭೂಮಿಯಲ್ಲಿ ಸ್ಥಿರವಾಗುತ್ತದೆ. ಈ ಅವಸ್ಥೆಯಲ್ಲಿ ಸಾಧಕನು ಸರ್ವತ್ರ ತನ್ನ ಅಭೀಷ್ಟದೇವತೆಯ ಶಕ್ತಿಯನ್ನು ಅನುಭವಿಸುತ್ತಾನೆ. ಇದು ಸಾಧಕನ ಸಾವಧಾನದ ಫಲವು. ಮಂತ್ರಾಭ್ಯಾಸದಲ್ಲಿ ಪ್ರಾಣ, ಇಚ್ಛೆ ಮತ್ತು ವಾಣ ಇವುಗಳು ಲಯ ಹೊಂದಿದಾಗ ಸ್ವರೂಪಶಕ್ಯನುಗುಣವಾಗಿ ಆನಂದಾವಸ್ಥೆಯಲ್ಲಿ ಒಂದು ಪ್ರಶಾಂತ ಚೈತನ್ಯ ಪ್ರವಾಹದ ಅನುಭವವಾಗುತ್ತದೆ. ಇದೇ ಛಂದಾನುಗಮಾನಾನುಭವ ಎನಿಸಿಕೊಳ್ಳುತ್ತದೆ, ಆದ್ದರಿಂದ ಪ್ರತಿಯೊಂದು ಮಂತ್ರಕ್ಕೆ ಛಂದ, ಋಷಿ, ದೇವತೆಗಳುಂಟು. ಮಂತ್ರದ ಛಂದ ಮತ್ತು ದೇವತೆಗಳನ್ನು ಗುರುತಿಸಿದವನೇ ಋಷಿ ಎನಿಸಿಕೊಳ್ಳುತ್ತಾನೆ,

ಈ ಶಾಂತ ಪ್ರವಾಹದ ಛಂದಾನುಗಮನದಿಂದಲೇ ಸಾಧಕನು ಮನಸ್ಸಿನ ಕೇಂದ್ರದಲ್ಲಿ ಸ್ಥಿತಿಯನ್ನು ಹೊಂದುತ್ತಾನೆ. ಈ ಮನಸ್ಸಿನ ಕೇಂದ್ರವೇ ಉನ್ಮನಾ ಅವಸ್ಥೆ ಅನಿಸಿಕೊಳ್ಳುತ್ತದೆ. ಈ ಅವಸ್ಥೆಯಲ್ಲಿ ಸಮಗ್ರ ಮನಸ್ಸಿನ ಶಕ್ತಿ ಬೀಜರೂಪದಿಂದಿರುತ್ತದೆ, ಇದು ಸದ್ಯೆವ ತುರ್ಯಾವಸ್ಥೆಗೆ ಸಂಬಂಧಿಸಿದ್ದು. ಈ ಅವಸ್ಥೆಯಲ್ಲಿ ಮಂತ್ರದ ಜಪವು ನಿರಂತರವಾಗಿ ಸದೃಶ ಪ್ರವಾಹವನ್ನು ಹೊಂದುತ್ತದೆ. ಈ ಸದೃಶ ಪ್ರವಾಹ ಜಪವೇ ಉಪಾಂಶು ಜಪ. ಅಂದರೆ ನಾವು ನುಡಿದ ಮಂತ್ರವೇ ನಿರಂತರ ಮರುನುಡಿದಂತಾಗುತ್ತದೆ. ಈ ಅವಸ್ಥೆಯಲ್ಲಿ ಸಂಕಲ್ಪಗಳು ಅತಿಸೂಕ್ಷ್ಮ ಮತ್ತು ಅವ್ಯಕ್ತ ಅವಸ್ಥೆಯನ್ನು ಹೊಂದಿರುತ್ತವೆ. ಸಾಧಕನು ಸುಷುಮ್ನೆಯಲ್ಲಿ ಪ್ರವೇಶಿಸಿದಾಗ, ನಾದಾತ್ಮಕ ಅವಸ್ಥೆಯನ್ನು ಹೊಂದಿದಾಗ ಸಹಜವಾಗಿ ಜಪ ಪ್ರಾರಂಭವಾಗುತ್ತದೆ, ಇದೇ 'ಅಜಪಾ' ಎನಿಸಿಕೊಳ್ಳುವದು,

ಓಂಕಾರವು ಮೂರು ಅವಸ್ಥೆಗಳನ್ನು ಸ್ಪಷ್ಟಪಡಿಸುತ್ತದೆ. 'ಅ' ಕಾರವೇ ಜಾಗ್ರತ 'ಉ'ಕಾರವೇ ಸ್ವಪ್ನ ಮತ್ತು 'ಮ'ಕಾರವೇ ಸುಷುಪ್ತಿ. ಇದು ಒಂದು ಮಾತ್ರೆ. ಸಮಗ್ರ ವಿಶ್ವವು ಈ ಪ್ರಣವ ಮಾತ್ರೆಯಲ್ಲಿಯೇ ಉದ್ಭವಿಸುತ್ತದೆ. ನಾದವು ಮಂತ್ರ ಶಾಸ್ತ್ರದ ಪಾರಿಭಾಷಿಕ ಶಬ್ದ. ಅದರ ಅರ್ಥ ನಿರಂತರ ಸ್ವರೂಪ ಬೋಧೆ. ಈ ನಾದವು ಒಂದು ಸ್ಥಿತಿಯನ್ನು ಹೊಂದಿದಾಗ ಪ್ರಕಾಶಮಯವಾಗಿ ತೋರುತ್ತದೆ. ಇದುವೇ ಪಶ್ಯಂತಿ ದಶೆ. ಸಾಧಕನು ಈ ಅವಸ್ಥೆಯನ್ನು ಮುಟ್ಟಿದಾಗ ಮೂರು ಅವಸ್ಥೆಗಳಲ್ಲಿ ಇಷ್ಟದ ದರ್ಶನ ಮಾಡುತ್ತಾನೆ, ಇದುವೆ ತುರ್ಯಾ ಅವಸ್ಥೆ. ಈ ಅವಸ್ಥೆಯಲ್ಲಿ ಸಾಧಕನು

ನಿರಂತರ ಎಲ್ಲವನ್ನು ಚೈತನ್ಯರೂಪವಾದ ತನ್ನ ಇಷ್ಟದ ಗರ್ಭದಲ್ಲಿಯೇ ಕಾಣುತ್ತಾನೆ. ತನ್ನ ಮಂತ್ರ ತನುವಿನಲ್ಲಿ ಸಾಧಕನು ಕ್ರಮಶಃ ಸ್ಥಿರತೆಯನ್ನು ಹೊಂದಿದಾಗ ಅವನ ಇಷ್ಟವು ಸ್ಪಷ್ಟವಾಗಿ ತೋರುತ್ತದೆ. ಈ ಅವಸ್ಥೆಯಲ್ಲಿ ಸಾಧಕನು ತನ್ನ ಮಂತ್ರಾತ್ಮಕ ನಲ್ಲಿರುವ ಅಹಂಸ್ವರೂಪವನ್ನು ಇಷ್ಟಕ್ಕೆ ಸಮರ್ಪಿಸುತ್ತಾನೆ. ಇದುವೇ ಭಾವಾರ್ಪಣ ವೆನಿಸಿಕೊಳ್ಳುವದು. ಇದುವೇ ಭಾವಾದ್ವೈತ. ಇಲ್ಲಿ ಭಕ್ತ ಮತ್ತು ಇಷ್ಟದ ಲೀಲಾ ವ್ಯಾಪಾರವು ನಿರಂತರ ನಡೆಯುತ್ತದೆ. ಈ ಲೀಲಾ ವ್ಯಾಪಾರವೇ ಮಹಾಭಾವದರಾಜ್ಯ. ಭಕ್ತ ಮತ್ತು ದೇವರ ಈ ರಸಾಸ್ವಾದನೆಯು ಭಾಷೆಯಿಂದ ವ್ಯಕ್ತಮಾಡಲು ಸಾಧ್ಯ ವಿಲ್ಲ. ಈಭಾವಲೀಲೆಗೆ ಶಾಕ್ತರು ಮಾತೃಲೀಲೆ ಎಂದು, ವೀರಶೈವರು ಲಿಂಗಲೀಲೆಎಂದು, ಮತ್ತು ವೈಷ್ಣವರು ಕೃಷ್ಣಲೀಲೆ ಎಂದೆನ್ನುತ್ತಾರೆ. ಈ ಭಾವಾರ್ಪಣ ಫಲವಾಗಿ ಮಂತ್ರ ತನುವಿನಲ್ಲಿ ಉಂಟಾದ ಚೈತನ್ಯರಸವು ಕ್ರಮವಾಗಿ ಲೀಲೆಯ ಪ್ರಭಾವದಿಂದ ಭೌತಿಕ ಮನಸ್ಸು, ಬುದ್ಧಿ, ಇಂದ್ರಿಯ ವಿಷಯಗಳಲ್ಲಿ ಹರಿದು ಅವುಗಳನ್ನು ಪವಿತ್ರಿಸಿ ಅವುಗ ಳನ್ನು ಸಹ ಶಿವಮಯವಾಗಿ ಮಾಡುತ್ತದೆ. ಇದೇ ಶಿವದೃಷ್ಟಿ. ಈ ಸ್ಥಿತಿಯಲ್ಲಿ ಸಾಧ- ಕನು ಮಂತ್ರ,ತನು ಮತ್ತು ಸ್ಥೂಲ ದೇಹದಲ್ಲಿ ಭೇದವಿರುವದಿಲ್ಲ. ಈಲೀಲೆ ಸಮಾಪ್ತ ವಾದಾಗ ಇಷ್ಟ ಮತ್ತು ಭಕ್ತ ಇವರಿಬ್ಬರು ಒಂದಾಗಿ ಅಖಂಡ ಮಹಾಪ್ರಕಾಶವನ್ನು ಹೊಂದುತ್ತಾರೆ. ಇದುವೇ ವೀರಶೈವರ ಮಹಾಲಿಂಗಾವಸ್ಥೆ ಮತ್ತು ಶಾಕ್ತರ ಪರಾ- ಅವಸ್ಥೆ. ಇದುವೇ ಜಗದಂಬೆಯ ನಿಷ್ಕಲ ಸ್ವರೂಪ. ಇದನ್ನು ಪ್ರಾಪ್ತಿ ಮಾಡಿಕೊಳ್ಳು ವದೇ ಜಪದಗುರಿ.

ಪಂ. ನಾಗಭೂಷಣ ಶಾಸ್ತ್ರಿಗಳನ್ನು ನಾನು ೧೯೪೮ ರಲ್ಲಿ ನನ್ನ ವಿದ್ಯಾರ್ಥಿ ಅವಸ್ಥೆಯಲ್ಲಿ ಧಾರವಾಡದ ಮುರುಘಾಮಠದಲ್ಲಿ ಪ್ರಥಮವಾಗಿ ಕಂಡದ್ದು. ಆಗಿ- ನಿಂದಲೇ ಅವರ ವಿದ್ವತ್ ಪ್ರತಿಭೆಯಿಂದ ಪ್ರಭಾವಿತರಾಗಿದ್ದೇವೆ. ನಾಲ್ಕು ವರ್ಷಗಳ ಹಿಂದ ಶಾಸ್ತ್ರಿಗಳನ್ನು ನಿಪ್ಪಾಣಿಗೆ ಶಿವಾನುಭವ ಪ್ರವಚನಕ್ಕಾಗಿ ಕರಸಿದಾಗ ಅವರ ವಚನಶಾಸ್ತ್ರದ ಪ್ರವಚನವನ್ನು ಕೇಳಿ ಮತ್ತಷ್ಟು ಮೆಚ್ಚಿಕೊಂಡೆನು.

ಪ್ರಸ್ತುತ ನಡೆಯಲಿರುವ ಶ್ರೀ ಶಾಸ್ತ್ರಿಗಳ ಅಮೃತ ಮಹೋತ್ಸವವು ಉತ್ತಮ ರೀತಿಯಿಂದ ನಡೆಯಲಿ, ಶ್ರೀ ಶಾಸ್ತ್ರಿಗಳ ಜೀವನ ಜಗಕ್ಕೆಲ್ಲ ಮಾರ್ಗದರ್ಶಕವಾಗಲಿ ಎಂದು ವಿಶ್ವನಾಥನಲ್ಲಿ ಪ್ರಾರ್ಥಿಸುತ್ತೇವೆ.

o o

# ಮಹಾಕವಿ ಪಂಪನ ಹಿರಿಮೆ

--ಶ್ರೀ ಶಾಂತಶರ್ಮಾ ಹಿರೇಮಠ

ದ್ರಾವಿಡ ಭಾಷಾಸಮೂಹದಲ್ಲಿ ಕನ್ನಡದ ಸ್ಥಾನ ಮಹತ್ವದ್ದಾಗಿದೆ. ಕನ್ನಡವು ವಿಶ್ವದ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ಶ್ರೀ ಗೋವಿಂದ ಪೈ ಮುಂತಾದ ವಿದ್ವಾಂಸರು ಅನೇಕ ಪ್ರಾಮಾಣಿಕ ಆಧಾರಗಳನ್ನು ಕೊಟ್ಟು ಕನ್ನಡ ಪ್ರಾಚೀನತೆಯನ್ನು ಪ್ರತಿಪಾದಿಸಿದ್ದಾರೆ. ಗಾಥಾಸಪ್ತಶತಿಯಲ್ಲಿ ಕನ್ನಡದ ಶಬ್ದಗಳು ದೊರೆತಿವೆ. ಹೀಗೆ ಹಲವು ಪ್ರಮಾಣಗಳನ್ನು ಪರಾಮರ್ಶಿಸಿ ವಿದ್ವನ್ಮಣಿಗಳು ಕನ್ನಡ ಭಾಷೆ ಕನಿಷ್ಠ ೨,೦೦೦ ವರ್ಷಗಳಹಿಂದಿನಿಂದಲೂ ಬಳಕೆಯಲ್ಲಿನೆಯೆಂದು ನಿರ್ಣಯಿಸಿದ್ದಾರೆ.

ಇದುವರೆಗೆ ಪ್ರಾಪ್ತವಾಗಿರುವ ಶಿಲಾ ಶಾಸನಗಳನ್ನು ಅವಲೋಕಿಸಿದರೆ, ಕ್ರಿ.ಶ ಐದು ಅಥವಾ ಆರನೇ ಶತಮಾನದಲ್ಲೇ ಕನ್ನಡದ ಸಾಹಿತ್ಯ ನಿರ್ಮಾಣ ಆರಂಭವಾಗಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಕ್ರಿ. ಶ. ೪೫೦ರ ಹಲ್ಮಿಡಿ ಶಾಸನ ಈ ವಿಷಯಕ್ಕೆ ಸಾಕ್ಷಿಯಾಗಿದೆ. ಈ ಶಾಸನದ ಮೇಲೆ ಸಂಸ್ಕೃತದ ಪ್ರಭಾವ ಅಧಿಕವಾಗಿದೆ

ಕನ್ನಡ ಸಾಹಿತ್ಯದಲ್ಲಿ ನಮಗೆ ಪ್ರಾಪ್ತವಾಗಿರುವ ಪ್ರಥಮ ಕೃತಿ "ಕವಿರಾಜಮಾರ್ಗ." ಇದು ಲಕ್ಷಣಗ್ರಂಥ. ಸಂಸ್ಕೃತದ ಆಚಾರ್ಯರಾದ ಭಾಮಹನ ಕಾವ್ಯಲಂಕಾರವನ್ನು, ದಂಡಿಯ ಕಾವ್ಯ ದರ್ಶನವನ್ನು ಆಧಾರವಾಗಿಟ್ಟುಕೊಂಡು ಬರೆದ ಕಾವ ಶಾಸ್ತ್ರದ ಮಹಾಗ್ರಂಥ. ಕ್ರಿ.ಶ. ೮೧೪–೮೭೭ರ ಅವಧಿಯಲ್ಲಿದ್ದ ನೃಪತುಂಗನ ಆಸ್ಥಾನ ಕವಿ ಶ್ರೀ ವಿಜಯ ಬರೆದನೆಂಬುದು ಅನೇಕ ವಿದ್ವಾಂಸರ ಸಮ್ಮತಿಯಾಗಿದೆ. "ಕವಿರಾಜಮಾರ್ಗ"ದಲ್ಲಿ ಅನೇಕ ಗ್ರಂಥಕಾರರ ಉಲ್ಲೇಖವಿದೆ. ಇದರಿಂದ ಈ ಗ್ರಂಥ ರಚನೆಯಕ್ಕಿಂತ ಮುಂಚೆಯೇ ಕನ್ನಡದಲ್ಲಿ ಗದ್ಯ ಮತ್ತು ಪದ್ಯ ಎರಡೂ ಕ್ಷೇತ್ರಗಳಲ್ಲಿಯೂ ಲೇಖನಕಾರ್ಯ ನಡೆದಿತ್ತೆಂದು ಪ್ರಾಮಾಣಿಕವಾಗಿ ಹೇಳಲಿಕ್ಕೆ ಸಾಧ್ಯವಿದೆ.

ಕವಿರಾಜ ಮಾರ್ಗದವರೆಗಿನ ಕನ್ನಡ ಸಾಹಿತ್ಯವನ್ನು ಪಂಪ ಪೂರ್ವಯುಗದ ಸಾಹಿತ್ಯವೆಂದು ಕರೆಯಬಹುದು. ಇಲ್ಲಿಯವರೆಗೆ ಪ್ರಾಪ್ತವಾದ ಸಾಹಿತ್ಯಕ್ಕಿಂತಲೂ ಪ್ರಾಪ್ತವಾಗದೆ ಲುಪ್ತವಾದ ಸಾಹಿತ್ಯವೇ ಹೆಚ್ಚು. ಗುಣವರ್ಮ, ದುರ್ವಿನೀತ, ಚಂದ್ರ ಲೋಕಪಾಲ ಮುಂತಾದ ಮಹಾಕವಿಗಳ ಉಲ್ಲೇಖವಿದೆ. ಆದರೆ ಇವರ ಯಾವುದೊಂದು ಕೃತಿಯೂ ದೊರಕಿಲ್ಲ. ಶಿವಕೋಟ್ಯಾಚಾರ್ಯನ "ವಡ್ಡಾರಾಧನೆ" ಎಂಬ ಗದ್ಯ ಗ್ರಂಥ ದೊರೆತಿದೆ. ಹೀಗೆ ಪಂಪ ಪೂರ್ವಯುಗದ ರಚನೆಗಳೆಂದು ದರ್ಶಿಸಲ್ಪ ಪದ್ಯದಲ್ಲಿ ಕವಿರಾಜ ಮಾರ್ಗ ಮತ್ತು ಗದ್ಯದಲ್ಲಿ ವಡ್ಡಾರಾಧನೆ ಈ ಎರಡು ಗ್ರಂಥಗಳು ಲಭಿಸುತ್ತವೆ.

ಕನ್ನಡ ಸಾಹಿತ್ಯದ ಆದಿಕವಿ ಪಂಪ ಹತ್ತನೆಯ ಶತಮಾನಕ್ಕೆ ಸಲ್ಲುವವನು. ಈತನೇ ಹೊಸಯುಗದ ಪ್ರವರ್ತಕನೆಂದು, ಕನ್ನಡ ಸಾಹಿತ್ಯದ ನವೋದಯಕ್ಕೆ ಕಾರಣನೆಂದು ಪ್ರಸಿದ್ಧನಾಗಿದ್ದಾನೆ. "ಕನ್ನಡಕ್ಕೊರ್ವನೆ ಪಂಪ" ಎಂದು ಈ ಮಹಾಕವಿಯ ಕೀರ್ತಿ ನೆಲೆನಿಂತಿದೆ. ಹತ್ತನೆಯ ಶತಮಾನವನ್ನು ಕನ್ನಡ ಸಾಹಿತ್ಯದ ಸ್ವರ್ಣಯುಗವೆಂದು ಕರೆಯುತ್ತಾರೆ. ಪಂಪ, ರನ್ನ, ಜನ್ನ, ಪೊನ್ನ ಮುಂತಾದ ಮಹಾಕವಿಗಳು ಈ ಸಮಯಕ್ಕೆ ಸೇರಿದವರು. ಇದರಲ್ಲೂ ಅತ್ಯಂತ ಉನ್ನತ ಸ್ಥಾನವನ್ನು ಪಡೆದಿರುವ ಕವಿ ಪಂಪ. "ಕರ್ನಾಟಕ ಕವಿತಾ ಸಾರ್ವಭೌಮ" ಎಂಬ ಬಿರುದು ಅವನಿಗೆ ಸಲ್ಲುತ್ತದೆ. ಈ ಮಹಾಕವಿಯ ಪ್ರಭಾವ ಉಳಿದ ಕವಿಗಳ ಮೇಲೆ ಬಿದ್ದಿತ್ತೆಂಬುದು ಸಾಹಿತ್ಯ ಸಮಾಲೋಚಕರಿಗೆ ಸ್ಪಷ್ಟವಾಗಿ ಕಾಣುವ ಸಂಗತಿ. ಸುಮಾರು ಎರಡು ಶತಮಾನಗಳವರೆಗೆ ಕನ್ನಡ ಕಾವ್ಯಸಾಮ್ರಾಜ್ಯದಲ್ಲಿ ಪಂಪನ ಏಕಾಧಿಪತ್ಯವಿತ್ತೆಂದು ಹೇಳಬಹುದು. ಈ ಕಾರಣದಿಂದಲೇ ಕನ್ನಡ ಸಾಹಿತ್ಯದ ಆದಿಕಾಲವನ್ನು ಇತಿಹಾಸಕಾರರು ಪಂಪಯುಗವೆಂಬ ಹೆಸರಿನಿಂದ ಗುರುತಿಸುತ್ತಾರೆ.

ಪಂಪನ ಕಾಲದ ಕನ್ನಡನಾಡಿನಲ್ಲಿ ಎರಡು ಮತಗಳು ಪ್ರಬಲವಾಗಿದ್ದವು. ಒಂದು ವೈದಿಕ ಅಥವಾ ಸನಾತನ ಮತ; ಇನ್ನೊಂದು ಜೈನಮತ. ಹತ್ತನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಆಳುತ್ತಿದ್ದ ರಾಷ್ಟ್ರಕೂಟರು ವೈದಿಕರು. ಆದರೆ ಜೈನ ಧರ್ಮದ ಬಗ್ಗೆ ಅವರಿಗೆ ಯಾವ ವಿಧವಾದ ಅಸಹನೆಯೂ ಇರಲಿಲ್ಲ. ಮತದ್ವೇಷದ ಸೋಂಕು ಅವರಿಗೆ ಅಂಟಿರಲಿಲ್ಲ. ಅವರು ಜೈನ ಧರ್ಮಕ್ಕೆ ರಕ್ಷಣೆ ನೀಡಿದರಲ್ಲದೆ ಅನೇಕ ಜೈನ ಕವಿಗಳಿಗೆ ಆಶ್ರಯದಾತರೂ ಆಗಿದ್ದರು. ಹೀಗೆ ಜೈನ ಧರ್ಮ ಮತ್ತು ಸಾಹಿತ್ಯಕ್ಕೆ ರಾಷ್ಟ್ರಕೂಟರಿಂದ ಪ್ರೋತ್ಸಾಹನೆ ಪ್ರಾಪ್ತವಾಗುತ್ತಿತ್ತು, ದಕ್ಷಿಣದಲ್ಲಿ ಗಂಗರು ಪ್ರಬಲರಾಗಿದ್ದರು. ಇವರು ಜೈನ ಧರ್ಮದ ಅನುಯಾಯಿಗಳು ಆಗಿದ್ದರು. ಹತ್ತನೆಯ ಶತಮಾನದ ಕೊನೆಯ ವೇಳೆಗೆ ಬೆಳಗುಳದಲ್ಲಿ ಗೊಮ್ಮಟನ ಪ್ರತಿಮೆ

ಯನ್ನು ಸ್ಥಾಪಿಸಿದ ಚಾವುಂಡರಾಯನೂ ಜೈನನೇ. ಈ ಪ್ರಕಾರ ಪಂಪನ ಕಾಲದಲ್ಲಿ ಕನ್ನಡನಾಡಿನಲ್ಲಿ ವೈದಿಕ ಮತ್ತು ಜೈನ ಮತಗಳ ಮಧ್ಯದಲ್ಲಿ ದ್ವೇಷ ಅಥವಾ ಅಸೂಯೆಗೆ ಬದಲಾಗಿ ಪರಸ್ಪರ ಮೈತ್ರೀಯ ಭಾವವೇ ಸ್ವತಃ ಇತ್ತು. ಪಂಪನೇ ಹೇಳಿಕೊಂಡಿರುವಂತೆ ಅವನ ಪೂರ್ವಜರು ವೈದಿಕ ಮತಕ್ಕೆ ವಳಪಟ್ಟವರು.

ಪಂಪ ತನ್ನ ವಂಶಪರಂಪರೆ ತಾನೇ ಹೇಳಿ ಕೊಂಡಿದ್ದಾನೆ.ವೆಂಗಿಮಂಡಲದಲ್ಲಿ ವಿಶ್ವ ಮಪುರ ಎಂಬ ಅಗ್ರಹಾರವಿತ್ತು, ಈ ಅಗ್ರಹಾರದಲ್ಲಿ ಮಾಧವಸೋಮಯಾಜಿ ಎಂಬ ವಿದ್ವಾಂಸನು ಪ್ರಸಿದ್ಧನಾಗಿದ್ದನು. ಅನೇಕ ಯಾಗಗಳನ್ನು ಮಾಡಿದ ಈತನು "ಸರ್ವ ಕೃತುಯಾಜಿ" ಎಂದು ಹೆಸರುವಾಸಿಯಾದನು. ಈತನ ವಂಶದಲ್ಲಿ ಅಭಿರಾಮದೇವ ರಾಯನು ಜನಿಸಿದನು. ಇವನ ಮಗನೇ ಪಂಪ. ಪಂಪ ತನ್ನ ತಂದೆಯ ವಿಷಯವಾಗಿ ಹೀಗೆ ಹೇಳಿದ್ದಾನೆ" ಅವನಿತಳಾಕಾಶ ವ್ಯಾಪ್ತ ಕೀರ್ತಿ ನಿಜಗುಣಮಣಿ ರತ್ನಾಕರ ತಮೋನಿರಾಸಕ", ಇವನು "ಜಾತಿಯೊಳೆಲ್ಲ ಮುತ್ತಮದ ಜಾತಿಯ ವಿಪ್ರಕುಲಂಗ ನಂಬಲೇ ಮಾತ್ರೋ ಜಿನೇಂದ್ರ ಧರ್ಮಮೇವಲಂ ದೊರೆ ಧರ್ಮದೋಳ್" ಎಂದು ನಂಬಿ ಜೈನ ಧರ್ಮವನ್ನು ಸ್ವೀಕರಿಸಿದನು.

ಪಂಪ ತನ್ನ ಬಗ್ಗೆ ಹೀಗೆ ಹೇಳಿಕೊಂಡಿದ್ದಾನೆ,

"ಪಂಪಂ ಧಾತ್ರಿವಳಯನಿ
ಲಿಂಪಂ ಚತುರಂಗಬಲ ಭಯಂಕರಣಂ ನಿ
ಷ್ಕಂಪಂ ಲಲಿತಾಲಂಕಾರ
ಣಂ ಪಂಚಶರೈಕ ರೂಪನಪಗತಪಾಪಂ''

ಇವನು ಭೂಮಿಯ ಮೇಲಿರುವ ದೇವತೆಯಂತೆ, ಚತುರಂಗಯುಕ್ತವಾದ ಸೇನೆಯನ್ನು ನಿರ್ಭಯವಾಗಿ ಎದುರಿಸಿ ನಿಲ್ಲಬಲ್ಲ ಪರಾಕ್ರಮಿಯಂತೆ. ಮನ್ಮಥನಂತೆ ಸುಂದರನಂತೆ. ಪಂಪನು ಮಹಾಕವಿ ಮಾತ್ರವಲ್ಲದೆ ವೀರಯೋಧನೂ ಆಗಿದ್ದನೆಂದು ಇದರಿಂದ ತಿಳಿದುಬರುತ್ತದೆ. ನಾಗವರ್ಮ, ಚಾವುಂಡರಾಯ ಮೊದಲಾದ ಕವಿಗಳೂ ಹೀಗೆಯೇ ಕವಿಗಳೆಂದು ಪ್ರಖ್ಯಾತರಾಗಿದ್ದಾರೆ. ಹೀಗೆ ಪಂಪನಲ್ಲಿ ಕಾವ್ಯಶ್ರೀ ಮತ್ತು ವೀರಶ್ರೀಗಳ ಸಮನ್ವಯವಾಗಿತ್ತು.

ಈತನಿಗೆ ಪಂಪ, ಹಂಪುಗ ಎಂಬ ನಾಮಾಂತರಗಳು ಇದ್ದವೆಂದು ತಿಳಿದು ಬರುತ್ತದೆ. ಎರಡನೆಯ ಅರಿಕೇಸರಿ ಇವನಿಗೆ ಆಶ್ರಯ ಕೊಟ್ಟ ರಾಜ. ಅರಿಕೇಸರಿಯ ರಾಜಧಾನಿ ವೆಂಗಿಮಂಡಲಕ್ಕೆ ಪಶ್ಚಿಮದಲ್ಲಿರುವ "ಲೆಂಬುಳವಾಟಿಕ"(ಈಗಿನ ವೇಮುಲ ವಾಡ) ಈತನ ವಾಸಸ್ಥಾನವಾಗಿತ್ತು. ಪಂಪ ಪುಲಿಗೆರೆಯ ತಿರುಳ್ಗನ್ನಡದಲ್ಲಿ ಕಾವ್ಯ ರಚನೆ ಮಾಡಿದುದಾಗಿ ಹೇಳಿಕೊಂಡಿದ್ದಾನೆ, ಬನವಾಸಿಯ ಮಲೆನಾಡಿನಲ್ಲಿ ಪಂಪ ತನ್ನ

ಜೀವಮಾನದ ಸಾರವತ್ತಾದ ಭಾಗವನ್ನು ಕಳೆದಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ. ಬನವಾಸಿಯ ಸೌಂದರ್ಯವನ್ನು ಕವಿ ಬಹಳ ಮೆಚ್ಚಿಕೊಂಡಿದ್ದಾನೆ.

ಪಂಪನ ಗುರು ದೇವೇಂದ್ರ ರಾಜಾಧಿರಾಜರಿಂದ ಪೂಜಿತನಾದ ವಿದ್ವಾಂಸನಾಗಿದ್ದನು. ಗುರುಕೃಪೆಯಿಂದ ಪಂಪನು ಸರ್ವಶಾಸ್ತ್ರಜ್ಞನಾದನು. ಪಂಪನಿಗೆ "ಸುಕವಿಜನ ಮನೋಮಾನಸೋತ್ತಂಸಹಂಸ", "ಕವಿತಾಗುಣಾರ್ಣವ," "ಸಂಸಾರ ಸಾರೋದಯ", "ಸರಸ್ವತೀಮಣಿಹಾರ" ಮುಂತಾದ ಅನೇಕ ಬಿರುದಾವಳಿಗಳಿದ್ದವು,

" ಭುವನದೊಳಗಾಳ್ಗಂ ಬೆಳಗೆ ಮಿಕ್ಕಭಿಮಾನದ
ಮಹಾತು ಕೀರ್ತಿಯಂ
ವಿವರಿಸೆ ಸುದನೇಂ ಕಲಿಯೋ ಸತ್ಕವಿಯೋ
ಕವಿತಾಗುಣಾರ್ಣವಂ "

ಪಂಪನ ಕಾಲದ ವಿಷಯದಲ್ಲಿ ಯಾವ ಚರ್ಚೆಗೂ ಅವಕಾಶವಿಲ್ಲ, ಸಾಮಾನ್ಯವಾಗಿ ತಮ್ಮ ಕಾಲ, ದೇಶ ಮುಂತಾದುದರ ಬಗ್ಗೆ ಏನು ಹೇಳದೆ ಸುಮ್ಮನಿದ್ದು ಬಿಡುತ್ತಾರೆ. ಇತಿಹಾಸ ದೃಷ್ಟಿ ಇಲ್ಲದ ಇತರ ಲೇಖಕರೂ ಈ ಕವಿಗಳ ವಿಷಯವಾಗಿ ಮನಸ್ಸಿಗೆ ಬಂದಂತೆ ಕಲ್ಪನೆಯ ಕಥೆಗಳನ್ನು ಬರೆದಿರುತ್ತಾರೆ. ಕಾಳಿದಾಸನ ಕಾಲ ಇನ್ನು ಚರ್ಚೆಯ ವಿಷಯವಾಗಿಯೇ ಉಳಿದಿದೆ. ಆದರೆ ಪಂಪ ತನ್ನ ಕಾವ್ಯದ ಬಗ್ಗೆ ನಿರ್ದಿಷ್ಟವಾಗಿ ಕಾಲ ಗಣನೆ ಮಾಡಿ ಹೇಳಿರುವದರಿಂದ, ಮತಭೇದಕ್ಕೆ ಆಸ್ಪದವಿಲ್ಲದೆ ಹೋಗಿದೆ. ಕವಿ ಹೀಗೆ ಹೇಳಿದ್ದಾನೆ–

ಶಕವರುಷಮೆಂಟುನೂರ
ಕ್ಕೆ ಕಡೆಯೊಳರವತ್ತುಮೂರು ಸಂದಂದು ಜಗತ್ ।
ಪ್ರಕಟ ಪ್ಲವ ಸಂವತ್ಸರ
ದ ಕಾರ್ತಿಕಂ ಮುದಮನೀಯ ನಂದೀಶ್ವರದೊಳ್ ॥
ಸಿತಪಕ್ಷದ ಪಂಚಮಿಯ ದಿನ
ಪತಿವಾರಂ ಶುಭದ ಮೂಲನಕ್ಷತ್ರದೊಳ್ ।
ನ್ವಿತವಾಗೆ ನೆಗಳ್ದು ಧೀಮತ್
ಕೃತಿ ಜಗದೊಳ ಪುದಿದು ಸಾಗರಾಂತ ಕ್ಷಿತಿಯಂ " ॥

ಇದರಂತೆ ಪಂಪ ಶಾಲಿವಾಹನ ಶಕ ೮೬೩ ರಲ್ಲಿ, ಎಂದರೆ ಕ್ರಿ. ಶ. ೯೪೧ ರಲ್ಲಿ ತನ್ನ ಕಾವ್ಯವನ್ನು ರಚಿಸಿದನೆಂದು ಸ್ಪಷ್ಟವಾಗಿ ಹೇಳಿರುವನು.

ಕರ್ನಾಟಕದ ಇತಿಹಾಸದಲ್ಲಿ ಪಂಪನ ಕಾಲ ರಾಜಕೀಯ ದೃಷ್ಟಿಯಿಂದ ಉಜ್ವಲ ವಾಗಿತ್ತು. ಈ ಮಹಾಕವಿಯ ಪೋಷಕನಾದ ಎರಡನೆಯ ಅರಿಕೇಸರಿ ಚಾಲುಕ್ಯ ದೊರೆಗಳ ವಂಶಕ್ಕೆ ಸೇರಿದವನು. ರಾಷ್ಟ್ರಕೂಟ ದೊರೆ ಕೃಷ್ಣನಿಗೆ ಇವನು ಸಾಮಂತನಾಗಿದ್ದನು. "ಸಾಮಂತ ಚೂಡಾಮಣಿ" ಎಂದು ಬಿರುದನ್ನು ಗಳಿಸಿದ್ದನು. ಈ ಅರಿಕೇಸರಿಯ ಆಸ್ಥಾನದಲ್ಲಿ ಪಂಪ ಕವಿಯಾಗಿ ಮತ್ತು ಕಲಿಯಾಗಿ ಮೆರೆದನು. ಈ ಕೃತಜ್ಞತೆಯಿಂದಲೇ "ವಿಕ್ರಮಾರ್ಜುನ ವಿಜಯ" ದಲ್ಲಿ ತನ್ನ ಒಡೆಯನ ಹೆಸರು ಶಾಶ್ವತವಾಗಿ ನಿಲ್ಲುವಂತೆ ಮಾಡಿದ್ದಾನೆ ಪಂಪ. ತನಗೆ ಮಾತ್ರವಲ್ಲದೆ ತನ್ನ ಆಶ್ರಯದಾತನಾದ ಅರಿಕೇಸರಿಗೂ ಈ ಬಗೆಯ ಅಮರತ್ವವನ್ನು ಸಂಪಾದಿಸಿದ್ದಾನೆ.

ಪಂಪನ ಗ್ರಂಥಗಳು ಎರಡು ಮೊದಲನೆಯದು "ಆದಿಪುರಾಣ" ಜೈನಕವಿಗಳು ಸಾಮಾನ್ಯವಾಗಿ ಒಂದು ಗ್ರಂಥದಲ್ಲಿ ಜೈನಧರ್ಮದ ಸಾರವನ್ನು ನಿರೂಪಿಸುತ್ತಾರೆ. ತೀರ್ಥಂಕರರ ಚರಿತ್ರೆಯನ್ನು ವರ್ಣಿಸುವ ನೆಪದಿಂದ ಧರ್ಮದ ತಿರುಳನ್ನು ಎತ್ತಿ ತೋರಿಸಿದ್ದಾರೆ. ಆದಿಪುರಾಣ ಈ ಬಗೆಯ "ಆಗಮಕೃತಿ", ಎರಡನೆಯದು "ವಿಕ್ರಮಾರ್ಜುನ ವಿಜಯ." ಇದೇ ಪಂಪ ಭಾರತವೆಂದು ಪ್ರಖ್ಯಾತವಾದ ಮಹಾಕೃತಿ. ಈ ಎರಡು ಗ್ರಂಥಗಳೂ ಚಂಪೂರೂಪದಲ್ಲಿವೆ.

ಆದಿಪುರಾಣವನ್ನು ಬರೆದು ಮುಗಿಸಿದಾಗ ಪಂಪನಿಗೆ ನಲವತ್ತು ವರ್ಷಗಳಾಗಿದ್ದವೆಂದು ತಿಳಿದುಬರುತ್ತದೆ. ಈ ಗ್ರಂಥಕ್ಕೆ ಮೂಲ ಜಿನಸೇನಾಚಾರ್ಯರು ಸಂಸ್ಕೃತದಲ್ಲಿ ಬರೆದಿರುವ "ಪೂರ್ವಪುರಾಣ," ಜಿನಸೇನಾಚಾರ್ಯರ ಈ ಬೃಹದ್ ಗ್ರಂಥವನ್ನು ಪಂಪ ಕನ್ನಡದಲ್ಲಿ ಸಂಕ್ಷೇಪಗೊಳಿಸಿದ್ದಾನೆ. ಆದರೆ ಲವಲೇಶವು ಸ್ವಾರಸ್ಯ ಕುಂದದಂತೆ ಮೂಲ ಗ್ರಂಥದ ಸಾರವನ್ನು ಸಂಗ್ರಹಿಸಿ ಆದಿಪುರಾಣದಲ್ಲಿ ಪ್ರತಿಪಾದಿಸಿದ್ದಾನೆ. ೨೪ ಜೈನ ತೀರ್ಥಂಕರರಲ್ಲಿ ಮೊದಲನೆಯವರು ವೃಷಭದೇವ. ಇವರನ್ನೇ ಆದಿದೇವ ಅಥವಾ ಪುರದೇವ ಎಂದು ಕರೆಯುತ್ತಾರೆ. ಒಂದು ಜೀವ ಜನ್ಮಜನ್ಮಗಳ ಜವನಿಕೆಯನ್ನನುಸರಿಸಿ ವೈರಾಗ್ಯ ಪರಿಣತಿಯನ್ನು ಸಾಧಿಸಿ, ತೀರ್ಥಂಕರತ್ವವನ್ನು ಪಡೆಯುವವರೆಗಿನ ಹಲವು ಹಂತಗಳನ್ನು ಕವಿ ಇಲ್ಲಿ ಚಿತ್ರಿಸಿದ್ದಾನೆ.

ಪಂಪ ವ್ಯಾಸಭಾರತವನ್ನು ಸಂಗ್ರಹಿಸುವಾಗ ತನ್ನ ದೊರೆಯಾದ ಅರಿಕೇಸರಿಯ ಸ್ತುತಿಗೈದಿದ್ದಾನೆ, ಅದು ಅವನ ಮುಖ್ಯ ಉದ್ದೇಶವಾಗಿತ್ತೆಂಬುದನ್ನು ಸ್ವತಃ ಹೇಳಿದ್ದಾನೆ. ಅರಿಕೇಸರಿಯ ವಂಶಾವಳಿಯನ್ನು ವಿವರವಾಗಿ ವರ್ಣಿಸಿದ್ದಾನೆ. ದೊರೆಯ ಪರಾಕ್ರಮವನ್ನು ಕೊಂಡಾಡಿ "ವೈರಿನರೇಂದ್ರೋದ್ದಾಮ ದರ್ಪೋದ್ದಳನನೆ ಕಥಾನಾಯಕಂ ಮಾಡಿ ಸಂದರ್ಜುನನೊಳ ಪೋಲ್ವೆ ಕಥಾಭಿತ್ತಿಯನನುಯದಿಂ ಪೇಳ

ಂದೆತ್ತಿಕೊಂಡೆಂ" ಎಂದು ಹೇಳಿ ಕಥಾಭಾಗವನ್ನು ಆರಂಭಿಸುತ್ತಾನೆ. ವಿಕ್ರಮಾರ್ಜುನ ವಿಜಯವೆಂದರೆ, ಅದು ಅರಿಕೇಸರಿಯ ವಿಜಯವೇ ಆಗಿದೆ. ಅರಿಕೇಸರಿಯ ಬಿರುದುಗಳೆಲ್ಲಾ ಅರ್ಜುನನ ಬಿರುದುಗಳಾಗಿವೆ. ಅರ್ಜುನನೂ "ಸಾಮಂತ ಚೂಡಾಮಣಿ" ಎನ್ನಿಸಿಕೊಂಡಿದ್ದಾನೆ.

ಪಂಪನು ಮಾಡಿಕೊಂಡಿರುವ ಮಾರ್ಪಾಟುಗಳಲ್ಲಿ ಅರ್ಜುನನ ನಾಯಕತ್ವದೊಡನೆ ಸುಭದ್ರೆಗೆ ದೊರೆತ ಪ್ರಾಧಾನ್ಯವೂ ಒಂದು. ಇದರ ಪರಿಣಾಮವಾಗಿ ದ್ರೌಪದಿಯ ಸ್ಥಾನ ಸಂದಿಗ್ಧವಾಯಿತು. ವ್ಯಾಸಭಾರತದಲ್ಲಿ ದ್ರೌಪದಿಗೆ ಪತಿಗಳೈವರು. ಇದು ಸರಿಯಲ್ಲವೆಂದು ಭಾವಿಸಿ ಪಂಪನು ಅವಳನ್ನು ಅರ್ಜುನನ ಪತ್ನಿಯೆಂದು ಚಿತ್ರಿಸಿದ್ದಾನೆ. ದ್ಯೂತ ಪ್ರಸಂಗದಲ್ಲಿ ಅವಮಾನ ಹೊಂದಿ ಭಾರತ ಯುದ್ಧಕ್ಕೆ ಕಾರಣಳಾದವಳು ದ್ರೌಪದಿ, ಆದರೆ ಯುದ್ಧದಲ್ಲಿ ಗೆದ್ದಮೇಲೆ ಪಟ್ಟಮಹಿಷಿಯಾಗುವವಳು ಸುಭದ್ರೆ. ಕೌರವರಿಂದ ಅವಮಾನಿತಳಾದ ದ್ರೌಪದಿಯ ಪ್ರತಿಜ್ಞೆಗೆ ಬೆಂಬಲಕೊಟ್ಟವನು ಭೀಮ, ಅರ್ಜುನನಲ್ಲ. ವೇಣೀಸಂಹಾರದ ಪ್ರತಿಜ್ಞೆಯನ್ನು ಕೊನೆಗೆ ಪೂರ್ತಿಗೊಳಿಸಿದವನು ಭೀಮನೇ. ಆದರೆ ಭೀಮ ತಮ್ಮನ ಹೆಂಡತಿಗಾಗಿ ಹೀಗೆ ಕ್ರೋಧಾವಿಷ್ಟನಾಗುವದರಲ್ಲಿ ಸಹಜತೆಗೆ ಕೊರತೆಯುಂಟಾಗಿದೆ. ಇದರಲ್ಲಿ ಇನ್ನೊಂದು ವಿಸಂಗತಿಯೆಂದರೆ, "ತನ್ನ ತಳೋದರಿ" ಎಂದು ಭೀಮ ಅವಳನ್ನು ನಡೆಸಿಕೊಳ್ಳುತ್ತಾನೆ. ಹೀಗೆ ರಂ. ಶ್ರೀ. ಮುಗಳಿಯವರು ಪಂಪನು ಮಾಡಿದ ಮಾರ್ಪಾಟುಗಳಿಂದ ಉಂಟಾಗಿರುವ ಅನೌಚಿತ್ಯವನ್ನು ಸಂಗ್ರಹವಾಗಿ ಆದರೆ ಸಾರವತ್ತಾಗಿ ನಿರೂಪಿಸಿದ್ದಾರೆ.

ಪಂಪನ ಶೈಲಿ ಸೊಗಸಾದದ್ದು. "ಹಿತಮಿತ ಮೃದುವಚನ" ಎಂದು ಅವನ ಶೈಲಿಯ ಗುಣಗಳನ್ನು ಸಂಗ್ರಹಿಸಿ ಹೇಳಬಹುದು. ಕೆಲವೇ ಶಬ್ದಗಳಲ್ಲಿ ಬಹಳ ಅರ್ಥವನ್ನು ಹಾಕಬಲ್ಲ ಸಾಮರ್ಥ್ಯ ಪಂಪನಲ್ಲಿದೆ." ಪ್ರಸನ್ನಗಂಭೀರ ವಚನ ರಚನ ಚತುರ" ಎಂದು ಪಂಪನೇ ತನ್ನ ಬಗ್ಗೆ ಹೇಳಿಕೊಂಡಿದ್ದಾನೆ. ಪಂಪನ ಕಾವ್ಯದಲ್ಲಿ ದೇಶಿಯ ಮಾರ್ಗಗಳ ಸುಂದರ ಸಮನ್ವಯವನ್ನು ಕಾಣಬಹುದಾಗಿದೆ.

"ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ" ಎಂದು ನಾಗರಾಜ ಪಂಪನ ಹಿರಿಮೆಯನ್ನು ಸಾರಿದ್ದಾನೆ. ಹಿಂದಿನ ಕವಿಗಳಂತೆಯೇ ಇಂದಿನ ವಿಮರ್ಶಕರೂ ಪಂಪನು ಕನ್ನಡದ ಅತ್ಯುತ್ತಮ ಮಹಾಕವಿ ಎಂದು ಏಕಕಂಠದಿಂದ ಹೊಗಳಿದ್ದಾರೆ. ವಿದ್ವಾನ ಮುಳಿಯ ತಿಮ್ಮಪ್ಪಯ್ಯನವರು "ನಾಡೋಜನಾದ ಪಂಪನು ಬರಿಯ ಕವಿಮಾತ್ರವೇ ಅಲ್ಲ, ಸಾವಿರ ವರ್ಷಕ್ಕೆ ಹಿಂದಿನ ಕನ್ನಡ ರಾಷ್ಟ್ರೀಯ ಪುರುಷರೊಳಗೂ ಒಬ್ಬನು" ಎಂದು ಅಭಿಪ್ರಾಯ ಪಟ್ಟಿರುವರು. ತೀ. ನಂ. ಶ್ರೀ ಕಂಠಯ್ಯನವರು ಪಂಪನನ್ನು ಕನ್ನಡದ ಕಾಳಿದಾಸ ಎಂದು ಕರೆದಿದ್ದಾರೆ.

ಪಂಪ ಕನ್ನಡ ಭಾಷೆಗೇ ಹಿರಿಮೆಯನ್ನು ತಂದವನು. ಅಚ್ಚಗನ್ನಡದ ಛಂದಗಳಾದ ಅಕ್ಕ, ಕಂದ, ರಗಳೆ ಮುಂತಾದ ವೃತ್ತಗಳನ್ನು ಬಳಸಿದ್ದಾನೆ. ಸಂಸ್ಕೃತದ ವರ್ಣ ವೃತ್ತಗಳನ್ನು ಲೀಲಾಜಾಲವಾಗಿ ಪ್ರಯೋಗಿಸಿದ್ದಾನೆ. ದೇಶಿ ಮತ್ತು ಮಾರಗಳ ಸಮನ್ವಯವೇ ಈತನ ಕಾವ್ಯದ ಗುರಿ. "ಮಾರ್ಗಾರೂಢವಾದ ತಿರುಳ್ಗನ್ನಡ"ವನ್ನು ತನ್ನ ಎರಡು ಚಂಪೂ ಕಾವ್ಯಗಳಲ್ಲೂ ಮೆರೆಸಿದ್ದಾನೆ. ತಿಳಿಗನ್ನಡದಲ್ಲಿ ಸರಳವಾಗಿ ಬರೆಯುವಂತೆಯೇ, ವಿದ್ವಜ್ಜನಪ್ರಿಯವಾದ ಸಂಸ್ಕೃತ ಶೈಲಿಯಲ್ಲೂ ನಿರಾಯಾಸವಾಗಿ ಬರೆಯುವ ಶಕ್ತಿ ಈತನಲ್ಲುಂಟು,

೧೧

ನೆಲವೊಂದೇ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲವೊಂದೇ ತನ್ನ ತಾನರಿದವಂಗೆ
ಫಲವೊಂದೇ ಷಡುದರ್ಶನದ ಮುಕ್ತಿಗೆ
ನಿಲವೊಂದೇ ಕೂಡಲಸಂಗಮದೇವಾ
ನಿಮ್ಮನರಿದವಂಗೆ

—ಭಕ್ತಿ ಭಂಡಾರಿ ಬಸವಣ್ಣನವರು

# ಪ್ರಭುಲಿಂಗಲೀಲೆಯ ಪ್ರಾರ್ಥನಾಪದ್ಯಗಳು

—ಡಾ. ಬಿ. ವ್ಹಿ. ಮಲ್ಲಾಪುರ

[೧]

ಕಾವ್ಯಾರಂಭದಲ್ಲಿ, ಕನ್ನಡ ಕವಿಗಳು ತಮ್ಮ ಆರಾಧ್ಯದೈವವನ್ನು ಪೂಜನೀಯ ಮಹಾಚೇತನಗಳನ್ನು ಹಾಗೂ ಆದರ್ಶ ಕವಿಗಳನ್ನು ಸ್ಮರಿಸುವದು ಒಂದು ಪರಿಪಾಠ. ಇಂಥ ಸ್ತುತಿರೂಪದ ಪದ್ಯಗಳು ಅನೇಕಸಲ ಕವಿಚರಿತೆಯ ತೊಡಕುಗಳನ್ನು ಬಿಡಿಸುವಲ್ಲಿ, ಆಯಾ ಕವಿಗಳು ರಚಿಸಿದ ಕೃತಿಗಳನ್ನು ತಿಳಿಯುವಲ್ಲಿ ನೆರವು ನೀಡುತ್ತವೆ. ಕಾವ್ಯದ ವಸ್ತು-ತಂತ್ರ-ಉದ್ದೇಶ ಮೂರರಲ್ಲೂ ಹಿಂದಿನವರ ಕಿತ್ತ್ರಯನ್ನೇ ತೀಡದೆ ಕ್ರಾಂತಿಕಾರಕ ಹೊಸಹಾದಿಯನ್ನು ಹಿಡಿದು, ಮೌಲಿಕ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯದಲ್ಲಿ ಒಂದು ಬಗೆಯ ಹೊಸ ತಿರುವಿಗೆ ಕಾರಣರಾದ ವೀರಶೈವ ಕವಿಗಳು ಕೂಡ ಮೇಲೆ ಸೂಚಿಸಿದ ಪರಿಪಾಠವನ್ನು ಹೆಚ್ಚಾಗಿ ಮುಂದುವರೆಸಿಕೊಂಡು ಬಂದಿದ್ದಾರೆ. ಅವರು ಗ್ರಂಥಾವತರಣದಲ್ಲಿ ಶಿವನನ್ನು, ಶಿವಶರಣರನ್ನು ಹಾಗೂ ಶಿವ ಕವಿಗಳನ್ನು ಸ್ತುತಿಸಿರುವದು ಕಂಡುಬರುತ್ತದೆ. ಇಂಥ ಸ್ತುತಿಪರಪದ್ಯಗಳಲ್ಲಿ ಅನೇಕ ಸಲ ಕಾವ್ಯಾಂಶಕ್ಕಿಂತ, ಪಾಂಡಿತ್ಯ ಚಮತ್ಕಾರ ಮತ್ತು ಉದ್ಗಾರಗಳದೇ ಮೇಲುಗೈಯಾಗಿರುವದುಂಟು. ಆದರೂ ಹಲವಾರು ದೃಷ್ಟಿಯಿಂದ ಈ ಪ್ರಾರ್ಥನಾ ಪದ್ಯಗಳು ಅಭ್ಯಾಸಾರ್ಹವಾಗಿವೆ. ಸ್ವಂತಿಕೆ ಹಾಗೂ ಸತ್ವಗಳನ್ನು ಮೆರೆದ ಕನ್ನಡದ ಕೆಲವೇಜನ ಕವಿಗಳಲ್ಲಿ ಗಮನಾರ್ಹನಾಗಿರುವ ಚಾಮರಸನ ಪ್ರಭುಲಿಂಗಲೀಲೆಯ ಪ್ರಾರ್ಥನಾ ಪದ್ಯಗಳ ವೈಶಿಷ್ಟ್ಯ ವಿಶೇಷಗಳನ್ನು, ಅವನ ಪರಿಸರದ ಪ್ರಮುಖ ಕವಿರಚಿತ ಪ್ರಾರ್ಥನಾ ಪದ್ಯಗಳ ಹಿನ್ನಲೆಯಲ್ಲಿ ಗುರುತಿಸುವುದೇ ಈ ಕಿರುಲೇಖನದ ಮುಖ್ಯ ಉದ್ದೇಶ.

[೨]

ಭೀಮಕವಿಯು ಬಸವಪುರಾಣದ ಪೀಠಿಕಾ ಸಂಧಿಯಲ್ಲಿ, ಕೊಂಡಗುಳಿ ಕೇಶಿರಾಜ ಸಿರಿಪತಿ ಪಂಡಿತ, ಶಿವಲೆಂಕ ಮಂಚಣ್ಣ, ಮಲ್ಲಿಕಾರ್ಜುನ ಪಂಡಿತ ಇವರೆಲ್ಲರನ್ನು ಒಂದೇ ಪದ್ಯದಲ್ಲಿ(ಸಂಧಿ೧, ಪದ್ಯ ೧೦)ಸ್ತುತಿಸಲಾಗಿದೆ. ಅವರಿತ್ತ ಉದ್ದಂಡ ಮತಿಯಿಂದ "ಬಸವಣ ದಂಡನಾಥನ ಕೃತಿಯು ನೂರೆವೆನಖಂಡೋತ್ಸವದಿ' ಎಂದು ಮಾತ್ರ ಕವಿ ಅಲ್ಲಿ ಹೇಳಿಕೊಂಡಿದ್ದಾನೆ. ತನ್ನ ಕೃತಿಗೆ ಮೂಲವಾದ ತೆಲುಗು ಬಸವ ಪುರಾಣದ ಕರ್ತೃ ಪಾಲ್ಕುರಿಕೆ ಸೋಮೇಶ್ವರ ಹಾಗೂ ಹರಿಹರ ರಾಘವಾಂಕರನ್ನು ಸ್ತುತಿಸುವ ಪದ್ಯಗಳೂ ಇವೆ, (ಸಂಧಿ ೧, ಪದ್ಯ ೧೦,೧೪, ೧೬ ಇತ್ಯಾದಿ). ಪೀಠಿಕಾ ಸಂಧಿಯಲ್ಲಿ ಬರುತ್ತವೆ. ಕಾವ್ಯನಾಯಕನಾದ ಬಸವಣ್ಣನನ್ನು ಕುರಿತು ಹಲವಾರು ಪದ್ಯಗಳು (ಸಂಧಿ ೧, ಪದ್ಯ ೭, ೮, ೯, ೨೫ ರಿಂದ ೩೫). ಬಸವಣ್ಣನೊಬ್ಬನನ್ನು ಬಿಟ್ಟು ಅವನ ಸಮಕಾಲೀನ ಪ್ರಮುಖ ಶರಣ ಶರಣೆಯರಲ್ಲಿ ಬೇರಾರನ್ನೂ ಭೀಮಕವಿ ಪೀಠಿಕಾ ಸಂಧಿಯಲ್ಲಿ ಸ್ತುತಿಸಿಲ್ಲ,

"ಕಲಿಯುಗದೆರಡನೆಯ ಮುಕ್ಕಣ್ಣ ಬಸವಣ್ಣ" (೧-೮), "ಅಸಮ ನೇತ್ರನೆ ಬಸವನಾಮದಿ ಎಸೆದನು—ಆತನಂ ನರಜಾತನೆನಬಹುದೆ ? (೧-೨೮). "ಪುರಹರು ನಿರವಯದೊಳಿರೆ ಬಸವರಸನವಯವದಿಂದೆ ಚಲಿಸುವ---...ಶಿವಲಿಂಗದ ನೆಲೆಯುನೀ ಬಸವನೇ ಬಲ್ಲ ಪರಮನರಿವನು ಬಸವನನುವನು" (೧-೨೯,೩೦) "---ಸಶಿವನೆಂದೆನಿಪ ಬಸವನಾಗಲುಬಹುದೆ ?"(೧--೩೦), "---- ತಿಂಗಳಂ ಸೂಡಿದವನಸಮೋತ್ತುಂಗ ವಾಹನಂ" (೧—೩೨ )—ಇತ್ಯಾದಿ ಭೀಮಕವಿಯ ಮಾತುಗಳಲ್ಲಿ ಶಿವ, ಬಸವರಿಗಿರುವ ಅವಿನಾಭಾವಸಂಬಂಧದ ಸೂಚನೆಯಿದೆ. "ಲಿಂಗ ಮೂರ್ತಿಗೆ ಕೂರ್ಪ ಬಸವಂ, ಜಂಗಮಾರ್ಚಕನಾದಿಬಸವಂ, ಅನಂಗವೈರಿಯ ಶರಣರೊಳು ಸಲೆಸಂದ ದಾಸೋಹಿ" (೧—೩೨),"---ಲಿಂಗಜಂಗಮದೊಳು ಸೊಬಗನೆನಿಸಿ ನವಕುಸುಮಗಂಧ ಸಮೇಳನದೋಳಪ್ಪ ಅಸಮ ಭಕ್ತಿವಿಶಾಲ" (೧-೩೩),-ಈ ಹೇಳಿಕೆಗಳು ಬಸವನ ಲಿಂಗ ಜಂಗಮ ಭಕ್ತಿಯ ಸೂಚಕಗಳಾಗಿವೆ, "ಸಾರಗಾನದೊಳಿಂಪು---ತ್ರಿದಶಧರಣೀರುಹ ಕೊಳುಗೊಂಪುವಿರ್ಪವೊಲ್ ಅಖಿಳ ಭಕ್ತರೊಳುಪೂರವಾಗಿಹ" (೧-೭), "ಬಸವ ಶರಣೆನೆ ಪಾಪವಳಿವುಗು---ಬಸವ ಶರಣನೆ ಭವವುಡುಗುವದು ----ಬಸವ ಶರಣೆನೆ ಶೀಲವೊಪ್ಪುಗು---ಬಸವನೆಂಬಕ್ಷರತ್ರಯವ ಒಸೆದು ಚಿತ್ತದೊಳೊಮ್ಮೆಯುಂ ಪಠಿಯಿಸುವನಾವನವನ ವದನಸಾರಸವ ನೆಲೆಯಾಗಿಪ್ಪನೀಶ್ವರಂ" (೧-೨೫,೨೬,೨೭)-ಈ ಬಗೆಯ ವರ್ಣನೆ ಬಸವನ ಮಹಿಮಾತಿಶಯದ ದ್ಯೋತಕವಾಗಿದೆ.

ಭೀಮಕವಿಯ ಬಸವಸ್ತುತಿಪರ ಈ ಮಾತುಗಳನ್ನು ಓದಿದಾಗ, ಅವನು ಬಸವಣ್ಣನವರ ಅಗಾಧ ವ್ಯಕ್ತಿತ್ವಕ್ಕೆ ಮಾರುಹೋಗಿರುವದು ಸುವ್ಯಕ್ತವಾಗುತ್ತದೆ. ಅವರ ಶಿವತ್ವ, ದಾಸೋಹತ್ವ, ಲಿಂಗಜಂಗಮಭಕ್ತಿ ಹಾಗೂ ಮಹಿಮಾತಿಶಯಗಳ ಕೊಂಡಾಟವೇ ಇಲ್ಲಿದೆಯೇ ವಿನಾ, ವೀರಶೈವಕ್ಕೆ ಅವರ ನಿಜವಾದ ಕೊಡುಗೆ ಏನೆಂಬುದನ್ನು ಈ ಮಾತುಗಳು ಸ್ಪಷ್ಟಪಡಿಸುವುದಿಲ್ಲ. ಆದುದರಿಂದ ಇದು ಕೇವಲ ಒಂದು ಸಾಂಪ್ರದಾಯಿಕ ಸ್ತುತಿಯಾಗಿ ಪರಿಣಮಿಸಿದೆ.

ಪದ್ಮಣಾಂಕನ ಪದ್ಮರಾಜಪುರಾಣದಲ್ಲಿ ಬಸವಣ್ಣ ಮತ್ತು ಆತನ ಪತ್ನಿ ಗಂಗಾಂಬಿಕೆಯ ಸ್ತುತಿಯಿದೆ (೧-೫,೬). ಪ್ರಭುದೇವಾದಿಗಳ ಸ್ತುತಿಯಲ್ಲ. "ವರ ಭೂತಕಾಲದೊಳ್ ಭೂತಿರುದ್ರಾಕ್ಷ ಶಂಕರಮಂತ್ರ ವಿಮಲ ಲಿಂಗದಾಳ್ದು ಮೆರೆವ ಸ್ವಸ್ವರೂಪಚಯಕೆ, ಈ ಭವತ್‌ಕಾಲದೊಳ್ ಅಚಲ ಶಂಭುಮಂಭಜಿಸಿ ಮೆರೆವ ಪ್ರವರ್ಧ ಶರಣಾವಳಿಗೆ, ಭವಿಷತ್ ಕಾಲದೊಳ್‌ಶಿವಾಚರಣೆಗೆ ನೆಗಳ್ಚಿ ಮೆರೆವ ಭಕ್ತತತಿಗೆ ಆಂ ನಮಸ್ಕರಿಸುವೆಂ---"ಎಂದು ಒಂದೇ ಪದ್ಯದಲ್ಲಿ (೧-೧೫) ಭೂತ ವರ್ತಮಾನ ಭವಿಷ್ಯತ್‌ಕಾಲದ ಶರಣರಿಗೆನಮಸ್ಕರಿಸಿ ಕೈತೊಳೆದುಕೊಂಡಿದ್ದಾನೆ. ಇನ್ನು ಬಸವಸ್ತುತಿಯನ್ನೊಳಗೊಂಡ ಪದ್ಮಣಾಂಕನ ಪದ್ಯವನ್ನು ನೋಡಬಹುದು. "ಐರಾವಣ ಮರಾಳ ಮಾರುತಾಹಾರ" ಎಂದು ಆರಂಭವಾಗುವ ಈಪದ್ಯದಲ್ಲಿ ಐರಾವಣ ಮರಾಳ ಆದಿಶೇಷ ಕಾಮಧೇನು ನಾರದ ಸ್ಫಟಿಕ ಕುಂದ ಮಂದಾಕಿನಿ ಕ್ಷೀರ ಶರತ್ಕಾಲದ ಮೇಘ ಹಾರ ಕರ್ಪೂರ ಡಿಂಡೀರ ಮಂದಾರ ಶಶಿ ತಾರೆ ಇತ್ಯಾದಿಗಳ ಬೆಳಗನ್ನು ಧಿಕ್ಕರಿಸಬಲ್ಲ ಕೀರ್ತಿ ಪ್ರಭಾಪೂರನಾದ ಬಸವನೇ ನನ್ನನ್ನು ರಕ್ಷಿಸು–ಎಂದು ಪದ್ಮಣಾಂಕ ಬಸವನನ್ನು ಪ್ರಾರ್ಥಿಸಿದ್ದಾನೆ. ಬಸವನ ವಿಮಲ ಕೀರ್ತಿಯನ್ನು ವಿವಿಧ ಉಪಮೆಗಳ ಮೂಲಕ ಬಣ್ಣಿಸುವದರ ಹೊರತು ಬೇರೇನೂ ಈ ಪದ್ಯದಲ್ಲಿಲ್ಲ. "ರಮಣೀಜನಾನಂದ ಸಿಂಧು ಚಂದ್ರಾನನೆಯು" ಎಂದು ಆರಂಭವಾಗುವ ಗಂಗಾಂಬಿಕೆಯು ಸ್ತೋತ್ರಪದ್ಯ (೧-೬) ಕೂಡ ಸಾಂಪ್ರದಾಯಿಕವಾಗಿಯೇ ಇದ್ದು ಹೊಸದೇನೂ ಇಲ್ಲ. ಜೊತೆಗೆ ಸಂಸ್ಕೃತ ಭೂಯಿಷ್ಠತೆಯಿಂದಾಗಿ ಅಸಹಜತೆಯೂ ತಲೆದೋರಿದೆ, ಪಂಡಿತರಿಗೆ ಮಾತ್ರಹಿಗ್ಗನ್ನು ತರಬಲ್ಲ ಪದ್ಯವಿದು.

ಲಕ್ಕಣ್ಣದಂಡೇಶನ 'ಶಿವತತ್ವ ಚಿಂತಾಮಣಿ' ವೀರಶೈವ ಕೃತಿಗಳಲ್ಲಿ ಹಲವಾರು ದೃಷ್ಟಿಯಿಂದ ಗಮನಾರ್ಹವಾದದು. ಅದರ ಪ್ರಥಮ ಸಂಧಿಯ ಮೊದಲ ನಾಲ್ಕು ಪದ್ಯಗಳಲ್ಲಿ ಶಂಭು, ವಿರೂಪಾಕ್ಷ, ಮಲ್ಲಿಕಾರ್ಜುನಗುರು ಇವರ ಸ್ತುತಿಬರುತ್ತದೆ. ತದನಂತರ ಪ್ರಭುದೇವ (೧-೫), ಬಸವೇಶ (೧-೬), ಚನ್ನಬಸವ (೧-೭), ಮತ್ತು

ಶಿವಾರ್ಚಕರನ್ನು (೧-೮) ಕವಿ ಸ್ಮರಿಸಿದ್ದಾನೆ.' ಈ ಸ್ತುತಿರೂಪದ ಪದ್ಯಗಳಲ್ಲಿ "ಲಿಂಗ ನಿಜ ಸದ್ಭಾವದೊಳು ಮನಂ ಮುಳುಗಿ, ಶಿವೈಕ್ಯದ ಸವಿಶಾಧಿ ಬಲಿದು, ಜಂಗಮಸ್ಥಾವ ರಂಗಳೊಳತಿ ತನ್ಮಯವಾಗಿ ಕಂಗೆ ಗೋಚರಿಸಿ ಬಸವನ ಭಾವದೊಳು ಹೊಳೆದ ಮಂಗಳ ಶಾನಿಧಿಯೆನಿಪ ಮಹಾಪ್ರಭುವರ" ಎಂಬ ಪ್ರಭುದೇವನನ್ನು ಕುರಿತ ಪದ್ಯ ಬಹಳ ಅರ್ಥವತ್ತಾಗಿದ್ದು ಶಿವಯೋಗದಲ್ಲಿ ಅವನು ಸಾಧಿಸಿದ ಎತ್ತರ ಬಿತ್ತರಗಳನ್ನು ಕಣ್ಣಿಗೆ ಕಟ್ಟುವಂತ ಚಿತ್ರಸುತ್ತದೆ. ಬಸವಣ್ಣನವರು ಕೈಗೆತ್ತಿಕೊಂಡ ಮಹಾಮಣಿಹದಲ್ಲಿ ಪ್ರಭು ದೇವ ನೀಡಿರಬಹುದಾದ ನೆರವಿನ ಸೂಚನೆಯೂ ಅಲ್ಲಿ ಧ್ವನಿತ.

"ನಿರುಕಮ. ನಿರಂಜನ-----ನಿರುವದ್ಯ ತಾತ್ತ್ವಿಕ ಮಹಾಲಿಂಗದಿಂಗದಿ ಧರೆಗವತರಿಸಿದ ಆದಿವೃಷಭ ಬಸವೇಶ್ವರನ ಚರಣಾಂಬುಜಕ್ಕೆ ಶರಣು" ಎಂಬ ಬಸವಸ್ತೋತ್ರದ ಪದ್ಯ ಗತಾನುಗತಿಕವಾಗಿಯೇ ಇದೆ. ಬಸವೇಶ್ವರನು "ತಾತ್ವಿಕ ಮಹಾಲಿಂಗದಿಂ ಧರೆಗವತರಿಸಿದ ಆದಿವೃಷಭ" ಎಂಬುದೊಂದನ್ನು ಬಿಟ್ಟು ಬೇರೇನನ್ನೂ ಅದು ಹೇಳುವುದಿಲ್ಲ.

"ಸುರಭಿಯಿಂ ಸುಧೆ--ಇಂದುವಿಂ ಚಂದ್ರಿಕೆಗಳುದಿಸುವಂದದಿ ಬಸವನ ಪರಮ ಸುಜ್ಞಾನದಿಂ ಮೂರ್ತಿವೆತ್ತು, ಇಳೆಯು ಶಿವಶರಣರ ಅಂತಃಕರಣ ಭವನಂಗಳೊಳಗೆ ವಿಸ್ಫುರಿಸುವ ಮಹಾಜ್ಯೋತಿ" ಎಂದು ಚೆನ್ನಬಸವನನ್ನು ಸ್ತುತಿಸುವ ಪದ್ಯ, ಆತ ನನ್ನು ವಿಸ್ಫುರಿಸುವ ಮಹಾ(ಷಟ್‌ಸ್ಥಲ ) ಜ್ಯೋತಿಯೆಂದು ಹೇಳುವುದಲ್ಲದೆ, ಆ ಜ್ಯೋತಿಯಿಂದ ಶಿವಶರಣರ ಅಂತಃಕರಣವನ್ನು ಆತನು ಬೆಳಗಿದನೆಂದು ಸೂಚಿಸುತ್ತದೆ. ಆ ಮಹಾಜ್ಯೋತಿಯನ್ನು ಚೆನ್ನಬಸವನು ಹೊತ್ತಿಸಿಕೊಂಡುದು, ಬಸವಣ್ಣನ ಪರಮ ಜ್ಞಾನದಿಂದಲೇ.

ಬಸವ ಪ್ರಸಾದದಿಂದ ಭಕ್ತರಾಗಿ, ಚೆನ್ನಬಸವ ಪ್ರಸಾದದಿಂದ ಜ್ಞಾನಿಗಳಾಗಿ ಮಹಾಪ್ರಭುವಿವ ಶಾಂತರಸದಿಂದ ಕರಣ ಸಂತತಿಯ ಉರವಣೆಯ ನಿಲಿಸಿ ನಿತ್ಯ ದಾಸೋಹಿಗಳಾಗಿ ಆಚರಿಸುವ ಶಿವಾರ್ಚಕರ ಪ್ರಾರ್ಥನೆಯ ಪದ್ಯಕೂಡ ಆಯಾವ್ಯಕ್ತಿ ಗಳಲ್ಲಿ ಎದ್ದುಕಾಣುವ ವಿಶೇಷಗಳನ್ನೇ ನಿರೂಪಿಸುತ್ತದೆ.

ಶಿವತತ್ತ್ವ ಚಿಂತಾಮಣಿಯಲ್ಲಿ ಬಂದಿರುವ ಶಿವಶರಣರನ್ನು ಕುರಿತ ಪ್ರಾರ್ಥನಾ ಪದ್ಯಗಳು ಬಸವಣ್ಣನನ್ನು ಬಿಟ್ಟು, ಉಳಿದೆಲ್ಲವು ಕೇವಲ ಸಾಂಪ್ರದಾಯಿಕವಾಗಿರದ ಉದ್ದೇಶಿತ ಫಲವನ್ನೀಯುವಲ್ಲಿ ಕೆಲಮಟ್ಟಿಗೆ ಯಶಸ್ವಿಯಾಗಿರುವವೆಂದು ಹೇಳಬಹುದು.

[೩]

ಈ ಹಿನ್ನೆಲೆಯಲ್ಲಿ ಚಾಮರಸನ ಪ್ರಭುಲಿಂಗಲೀಲೆಯ ಆರಂಭದಲ್ಲಿ ಬರುವ ಬಣನನ್ನು ಕುರಿತ ಪ್ರಾರ್ಥನಾ ಪದ್ಯಗಳನ್ನು ಇನ್ನು ಪರಿಶೀಲಿಸಬಹುದು.

ಶ್ರೀ ಷಡಮಲಜ್ಞಾನಭಕ್ತಿ
ಪ್ರೇಮ, ವೇದ ಪುರಾಣಶಾಸ್ತ್ರ
ಸ್ತೋತ್ರಮನುತ, ನತ ಚಾರುಚರಣಾಂಭೋಜ ಘನಮಹಿಮ
ನಾಮರೂಪಕ್ರಿಯಾ ಕಳಾಪವಿ–
ರಾಮನನುಪಮ ದಿವ್ಯ ತೇಜೋ
ವ್ಯೋಮಮೂರುತಿ ಗುರುಗುಹೇಶ್ವರಲಿಂಗ ಶರಣಾರ್ಥಿ.

ಇದು ಪ್ರಭುಲಿಂಗಲೀಲೆಯ ಪ್ರಥಮಗತಿಯ ಮಂಗಲಾಚರಣದಲ್ಲಿ ಬರುವ ಮೊದಲ ಪದ್ಯ. ಇದರಲ್ಲಿ ಗುರುಗುಹೇಶ್ವರಲಿಂಗ (ಶಿವ) ಮತ್ತು ಪ್ರಭುದೇವರಲ್ಲಿ ಅಭೇದ ವನ್ನು ಕಲ್ಪಿಸಲಾಗಿದೆ.[1] ಆದುದರಿಂದ ಇದನ್ನು ಪರಶಿವಪರವಾಗಿಯೂ, ಪ್ರಭುದೇವ ನಿಗೆ ಅನ್ವಯಿಸಿಯೂ ಅರ್ಥಯಿಸಲು ಬರುತ್ತದೆ. ಪರಶಿವಪರವಾಗಿ ಅರ್ಥಯಿಸು ವಲ್ಲಿ ಹೆಚ್ಚಿನ ಕ್ಲಿಷ್ಟತೆಯೇನೂ ಇಲ್ಲ. ಪ್ರಭುದೇವನಿಗೆ ಅನ್ವಯಿಸಿ ಈ ಪದ್ಯವನ್ನು ಹೀಗೆ ವಿವರಿಸಬಹುದು.

"ಚೆನ್ನಬಸವಣ್ಣನ ಅಮಲ (ಷಟ್‌ಸ್ಥಲ) ಜ್ಞಾನ, ಬಸವಣ್ಣನ ನಿರ್ಮಲ (ಗುರು–ಲಿಂಗ-ಜಂಗಮ) ಭಕ್ತಿಗೆ ಈತನು ಒಲಿದವನು, ವೇದ ಪುರಾಣ ಶಾಸ್ತ್ರಾದಿಗಳಿಂದ ಸ್ತುತಿಸಿಕೊಳ್ಳುವವನು, ಅರ್ಥಾತ್ ಅವುಗಳ ಲ್ಲಿರುವ ಜ್ಞಾನಕ್ಕಿಂತ ಹೆಚ್ಚಿನ ಜ್ಞಾನಸಂಪನ್ನನು. ಅನೇಕ ಸಾಧಕರಿಂದ ನಮಸ್ಕರಿಸಿಕೊಳ್ಳುವ ಪಾದಕಮಲಗಳುಳ್ಳವನು, ನಾಮ–ರೂಪ-ಕ್ರಿಯಾ ಕಲಾಪಗಳ ವಿರಾಮಗೊಂಡ ಸಹಜ ಶೂನ್ಯಸ್ಥಿತಿಯನ್ನು ಮುಟ್ಟಿ

೧. ಐತಿಹಾಸಿಕ ವ್ಯಕ್ತಿಯಾದ ಕಾವ್ಯ ನಾಯಕನನ್ನು ಪೌರಾಣಿಕ ವ್ಯಕ್ತಿಯೊಡನೆ ಸಮೀಕರಿಸಿ ಹೇಳುವ ಪರಂಪರೆ, ಪಂಪಪೂರ್ವದ ಗುಣವರ್ಮನ ಕೃತಿಯಲ್ಲಿಯೇ ಕಂಡು ಬರುತ್ತದೆ. ಪಂಪ ಮೊದಲಾದವರು ತಮ್ಮ ಲೌಕಿಕ ಕಾವ್ಯಗಳಲ್ಲಿ ಅದನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಚಾಮರಸ ಆ ಪರಂಪರೆಯಲ್ಲಿ ಸ್ವಲ್ಪ ವ್ಯತ್ಯಾಸಮಾಡಿದ್ದಾನೆ. ಆತನು ತನ್ನ ಕಾವ್ಯನಾಯಕನಾದ ಐತಿಹಾಸಿಕ ವ್ಯಕ್ತಿ ಪ್ರಭುದೇವನನ್ನು ಸಾಕ್ಷಾತ್ ಪರಶಿವನೊಡನೆ ಸಮೀಕರಿಸಿದ್ದಾನೆ. "ಪ್ರಭುಲಿಂಗ ಲೀಲೆ" ಎಂದು ತನ್ನ ಕೃತಿಗೆ ಹೆಸ-ರಿಟ್ಟಿರುವುದು, ಆರಂಭದ ಸೂಚನಾ ಪದ್ಯದಲ್ಲಿ "ಅಲ್ಲಮಪ್ರಭು ಗುರುಗುಹೇಶ್ವರನು" ಎಂದು ಕರೆದಿರುವುದು, "ಶಿವನ ನವನಾಟಕದ ಮಹಿಮೆ" (೧–೨೦) ಎಂದು ಹೇಳಿರುವುದು—ಇವೆಲ್ಲ ಮೇಲಿನ ಹೇಳಿಕೆಗೆ ಸಮರ್ಥನೆ ಒದಗಿಸುತ್ತವೆ.

ದವನು. ದಿವ್ಯಶಿವಯೋಪಗ್ರಹೆಯಿಂದ ಬೆಳಗುವವನು. ಅಲ್ಲದೆ
ಬಯಲು ದೇಹಿಗನು-ಇಂಥ ಪ್ರಭುದೇವನಿಗೆ ಶರಣಾರ್ಥಿ.

ವೀರಶೈವದ ಪ್ರಕಾರ ಷಟ್‌ಸ್ಥಲ ಜ್ಞಾನವೇ ನಿಜವಾದ ಜ್ಞಾನ. ಷಡ್ವಿಧ ಭಕ್ತಿಯೇ ನಿಜವಾದ ಭಕ್ತಿ. ಇಂಥ ಷಡ್ವಿಧ ಭಕ್ತಿಯುಕ್ತನಾಗಿ ಷಟ್‌ಸ್ಥಲ ಮಾರ್ಗಾವಲಂಬಿಯಾಗಿ ಸಾಧನೆಯನ್ನು ಮುಂದುವರಿಸಿ, ನಾಮ-ರೂಪ-ಕ್ರಿಯಾ ಕಲಾಪವಿರಾಮ ಸ್ಥಿತಿಯನ್ನು-ಶೂನ್ಯ ಅಥವಾ ಲಿಂಗಾಂಗಸಾಮರಸ್ಯಸ್ಥಿತಿಯನ್ನು ಮುಟ್ಟಬಲ್ಲ ಸಾಧಕರೆಂದರೆ ಪ್ರಭುದೇವನಿಗೆ ಬಹಳ ಇಷ್ಟ. ಏಕೆಂದರೆ ಅವನೂ ಕೂಡ ಅದೇ ಮಾರ್ಗ ಹಿಡಿದು ವ್ಯೋಮಕಾಯನಾದವನೆಂಬ ಧ್ವನಿ ಈ ಪದ್ಯದಲ್ಲಿದೆ. ಬಯಲ ದೇಹಿಯಾದ ಪ್ರಭುದೇವ ವೀರಶೈವ ನಿರ್ಣಯದ ಮಹಾಕಾರ್ಯದಲ್ಲಿ ನಿರತರಾದ ಬಸವ, ಚೆನ್ನಬಸವರಿಗೆ ಮಾರ್ಗದರ್ಶನ ಮಾಡಿದ ಸೂಚನೆಯನ್ನೂ ಇಲ್ಲಿ ಗುರುತಿಸಬಹುದು.

ಬಸವಣ್ಣನವರಿಗೆ ಶರಣಾರ್ಥಿಯನ್ನರ್ಪಿಸುವ,

ಕಾಯದೊಳು ಗುರುಲಿಂಗ ಜಂಗಮ-
ದಾಯತವನರಿಯಲ್ಕೆ ಸುಲಭೋ
ಪಾಯದಿಂದದಿರಿಟ್ಟು ಬಾಹ್ಯಸ್ಥಲಕೆ ಕುರುಹಾಗಿ
ದಾಯದೋರಿ ಸಮಸ್ತ ಭಕ್ತಸಿ-
ಕಾಯವನು ಪಾವನವ ಮಾಡಿದ
ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ

ಈ ಪದ್ಯ ಅವರ ವೀರಶೈವದರ್ಶನಕ್ಕಿಂತ ವಿಶಿಷ್ಟ ಕೊಡುಗೆಯನ್ನು ಸೂಚಿಸುತ್ತದೆ. ವೀರಶೈವದಲ್ಲಿ ಗುರು-ಲಿಂಗ ಜಂಗಮಕ್ಕೆ ವಿಶೇಷ ಪ್ರಾಧಾನ್ಯವಿದೆ. ವೀರಶೈವಕ್ಕೆ ಮಾತ್ರ ವಿಶಿಷ್ಟವಾಗಿರುವ ಅಷ್ಟಾವರಣದಲ್ಲಿ ಗುರು-ಲಿಂಗ-ಜಂಗಮರು ಉಪಾಸ್ಯ ಮೂರ್ತಿಗಳು. ಪರಶಿವನು ಸತ್-ಚಿತ್-ಆನಂದ ಸ್ವರೂಪ. ಅವನ ಸತ್‌ರೂಪವೇ ಗುರು, ಚಿತ್ ರೂಪವೇ ಲಿಂಗ, ಆನಂದರೂಪವೇ ಜಂಗಮವೆಂದು ವೀರಶೈವ ಹೇಳುತ್ತದೆ. ಬಾಹ್ಯ ಗುರು-ಲಿಂಗ-ಜಂಗಮರ ಉಪಾಸನೆಯ ಮೂಲಕ-ಎಂದರೆ ಗುರುವಿಗೆ ತನುವನ್ನು, ಲಿಂಗಕ್ಕೆ ಮನವನ್ನು, ಜಂಗಮಕ್ಕೆ ಧನವನ್ನು ನಿರ್ವಂಚನೆಯಿಂದ ಅರ್ಪಿಸಿ ಸೇವಿಸುವದರ ಮೂಲಕ – ಅಂತರಂಗದಲ್ಲಿ ಗುರು-ಲಿಂಗ-ಜಂಗಮದ ಆಯತ ಮಾಡಿಕೊಳ್ಳಬೇಕು. ಇದನ್ನು ಸಾಧಿಸುವ ಸುಲಭೋಪಾಯ ಬಾಹ್ಯಸ್ಥಲದ ಕುರುಹಾದ ಇಷ್ಟಲಿಂಗೋಪಾಸನೆ. ಈ ದಾರಿಯನ್ನು ತೋರಿಸಿ ಸಮಸ್ತ ಭಕ್ತನಿಕಾಯವನು ಪಾವನವ ಮಾಡಿದ ಬಸವಣ್ಣ. ಆದುದರಿಂದಲೇ ಅವನು ಪೂರ್ವಾಚಾರ್ಯನೆಂದು ಚಾಮರಸನ ಅಭಿಪ್ರಾಯ. ಅಂತರಷ್ಟಾವರಣ ಬಹಿರಷ್ಟಾವರ್ಣಗಳ

ನಿರ್ಣಯದಲ್ಲಿ ಬಸವಣ್ಣನದು ಸಿಂಹಪಾಲೆಂಬುದನ್ನು ಕವಿಯ ಈ ಹೇಳಿಕೆ ಸ್ಪಷ್ಟ ಪಡಿಸುತ್ತದೆ. ಅಂತರಷ್ಟಾವರಣ ಬಹಿರಷ್ಟಾವರಣಗಳ ನಿರ್ಣಯ ಚಾಮರಸನ ಪ್ರಕಾರ ಬಸವಣ್ಣನವರು ವೀರಶೈವಕ್ಕಿತ್ತ ವಿಶೇಷ ಕೊಡುಗೆ.

"ಪ್ರಾಯಂ ಕೂಸಾದೊಡೆ ಅಭಿಪ್ರಾಯಂ ಕೂಸಕ್ಕುಮೆ" ಎಂಬ ಸೂತ್ರ ಪ್ರಾಯ ವಾದಮಾತ್ರಿಗ ಉತ್ತಮ ಉದಾಹರಣೆಯಾಗಿರುವ ಚೆನ್ನಬಸವಣ್ಣನನ್ನು ಪ್ರಾರ್ಥಿಸುವ ಚಾಮರಸನ ಪದ್ಯ ಕೂಡ ಆತನು ವೀರಶೈವಕ್ಕಿತ್ತ ಹೊಸಸ್ವರೂಪದತ್ತ ಬೆರಳು ತೋರಿಸುತ್ತದೆ. ಆ ಪದ್ಯ ಹೀಗಿದೆ—

ವೀರಶೈವಾಚಾರಮಾರ್ಗವಿ-
ಚಾರದಭ್ಯಂತರದೊಳೀಪರಿ-
ಯೋಂಣಿಸಿ ಹರಕರ್ಮಭಕ್ತಿ ಜ್ಞಾನವಿಹುದೆಂದು
ಧಾರ:ಣೆಯೊಳರಿವಂತ ಕರುಣಾ
ಕಾರನಾಗಿ ಷಡುಸ್ಥಳವನು-
ದ್ಧಾರಿಸಿದ ಗುರು ಚೆನ್ನಸಂಗನಬಸವ ಶರಣಾರ್ಥಿ.

"ವೀರಶೈವ ಆಚಾರ (ಪಂಚಾಚಾರ) ಮತ್ತು ಮಾರ್ಗವಿಚಾರ (ಷಟ್‌ಸ್ಥಲ ಮಾರ್ಗ) ಗಳೆರಡರಲ್ಲೂ ಶಿವಕ್ರಿಯೆ, ಶಿವಭಕ್ತಿ ಹಾಗೂ ಶಿವಜ್ಞಾನಗಳು ಒಂಣಿಸಿ ಮೇಳವಿರುವು ದನ್ನು ತಿಳಿಸಿಕೊಟ್ಟು ಷಟ್‌ಸ್ಥಲವನ್ನು ಉದ್ಧಾರಿಸಿದ ಗುರು ಚನ್ನಬಸವ," ಎಂಬ ಚಾಮರಸನ ಹೇಳಿಕೆ ಮಹತ್ವಪೂರ್ಣವಾದುದು. ವೀರಶೈವ ವಿಶಿಷ್ಟ ಪಂಚಾಚಾರ ಮತ್ತು ಷಟ್‌ಸ್ಥಲಗಳ ನಿರ್ಣಯದಲ್ಲಿ ಚನ್ನಬಸವಣ್ಣನು ವಹಿಸಿದ ನಿರ್ಣಾಯಕ ಪಾತ್ರದ ಸೂಚನೆ ಈ ಪದ್ಯದಲ್ಲಿದೆ. ಭಕ್ತಿ-ಜ್ಞಾನ-ಕ್ರಿಯೆಗಳ ಸಮನ್ವಯಕ್ಕೆ ಮಹತ್ವ ವಿತ್ತವನು ಚೆನ್ನಬಸವಣ್ಣ. ಆಗಮೋಕ್ತ ಷಟ್‌ಸ್ಥಲದಲ್ಲಿದ್ದ ಕ್ರಮ ಸಮುಚ್ಚಯಕ್ಕೆ ಪ್ರತಿಯಾಗಿ ಸಮುಚ್ಚಯವನ್ನು ಪ್ರತಿಪಾದಿಸಿದವನು ಚೆನ್ನಬಸವಣ್ಣ[೨]. ಆದುದ ರಿಂದಲೇ ಅವನು "ಷಡುಸ್ಥಲವನುದ್ಧಾರಿಸಿದ ಗುರು". ಚಾಮರಸ ಆತನನ್ನು ಗುರು-

೨. "ಮೆಲ್ಲಮೆಲ್ಲನೆ ಭಕ್ತನಪ್ಪೆ, ಮೆಲ್ಲಮೆಲ್ಲನೆ ಮಹೇಶ್ವರನಪ್ಪೆ...ಮೆಲ್ಲಮೆಲ್ಲನೆ ಐಕ್ಯನಪ್ಪೆ" ಎಂಬ ಬಸವಣ್ಣನವರ ಕ್ರಮ ಸಮುಚ್ಚಯವನ್ನು ಒಪ್ಪದೇ, ಚೆನ್ನಬಸವಣ್ಣನವರು "ಮೆಲ್ಲ ಮೆಲ್ಲನೆ ಮಾಹೇಶ್ವರ...ಮೆಲ್ಲಮೆಲ್ಲನೆ ಐಕ್ಯರಾದೆಂಬರು ನಿಮ್ಮ ಶರಣರು, ತಾವೇನು ಮರುಜೀವಣಿಯ ಕೊಂಡರೆ ? ಅಮೃತಸೇವನೆಯ ಮಾಡಿದರೆ ? ಆವಸ್ಥಲದಲ್ಲಿ ನಿಂದರೂ ಆ ಸ್ಥಲದಲ್ಲಿ ಷಡುಸ್ಥಲವಡಗದಿರ್ದಹೆ ಆ ಭಕ್ತನ ಬಾಯಲ್ಲಿ ಹುಡಿಮಣ್ಣು ಹುಯ್ಯು ಹೋಗನೆ ?..." ಎಂದು ಸಮುಸಮುಚ್ಚಯವನ್ನು ಪ್ರತಿಪಾದಿಸಿರುವುದನ್ನು ನೋಡಬಹುದು.

'ಚೆನ್ನಸಂಗನಬಸವ' ಎಂದು ಕರೆದಿರುವುದು ಸಾರ್ಥಕ. ಸಮುಸಮುಚ್ಚಯದ ಪ್ರತಿಪಾದನೆಯ ಮೂಲಕ ಆಗಮೋಕ್ತ ಷಟ್‌ಸ್ಥಲದ ಸ್ವರೂಪವೇ ಬದಲಾಗಿ ಅದು ವೀರಶೈವ ವಿಶಿಷ್ಟವಾಯಿತು. ಇದೇ ವೀರಶೈವಕ್ಕೆ ಚೆನ್ನಬಸವಣ್ಣನ ಅಮೂಲ್ಯ ಕೊಡುಗೆ. ಇದರ ಪೂರ್ಣಪರಿಜ್ಞಾನ ಚಾಮರಸನಿಗಿದೆ.

ಸಿದ್ಧರಾಮನ ಸ್ತುತಿಯನ್ನೊಳಗೊಂಡಿರುವ ಚಾಮರಸನ ಪದ್ಯ ಸಿದ್ಧನ ವ್ಯಕ್ತಿತ್ವದ ಸರ್ವಸ್ವಸ್ವಾರಸ್ಯವನ್ನೇ ಗರ್ಭೀಕರಿಸಿಕೊಂಡಿದೆ.

ಕಂತುವನೆ ಕಂಗೆಡಿಸಿಯೊಳಪೊ-
ಕ್ಕಂತರಂಗವಿಚಾರವೆಲ್ಲವ
ಸಂತೆಯಂಗಡಿಯಂತೆ ಸೊನ್ನಲಪುರದೊಳೊಡ್ಡಯಿಸಿ
ಚಿಂತಿತಾರ್ಥವನರ್ಥಿಗಿತ್ತು ನಿ-
ರಂತರಖಿಗರಿವನೀವ ಮ-
ಹಂತನೆನಿಸಿದ ಸಿದ್ಧರಾಮಯ್ಯಂಗೆ ಶರಣಾರ್ಥಿ.

ಅಜೇಯನೆನಿಸಿದ ಕಾಮನನ್ನೇ ಕಂಗೆಡಿಸಬಲ್ಲ ಸಿದ್ಧನ ಜಿತಕಾಮತ್ವ, ಅಂತರ್ಮುಖಿಯಾಗಿ ದೇಹಾಂತರ್ಗತ ಶಕ್ತಿಯ ಕೇಂದ್ರಗಳೆಲ್ಲವನ್ನು ಜಾಗ್ರತಗೊಳಿಸಬಲ್ಲ ಯೋಗಸಿದ್ಧಿ, ಅಂತರಂಗ ವಿಚಾರವೆಲ್ಲವ ಸಂತೆಯಂಗಡಿಯಂತೆ ಸೊನ್ನಲಪುರದಲ್ಲಿ ಒಡ್ಡಯಿಸಿದ ಔದಾರ್ಯ, ಬೇಡಿದವರಿಗೆ ಬೇಡಿದನ್ನೀವ ಹಿರಿದಾದ ಹೃದಯವಂತಿಕೆ–ಇವೇ ಮೊದಲಾದ ಸಿದ್ಧರಾಮನ ಮೂರ್ತಿಸ್ವರೂಪದ ವಿವಿಧ ಮುಖಗಳನ್ನು ಈ ಪದ್ಯ ಪದರು ಪದರಾಗಿ ಬಿಚ್ಚಿ ತೋರಿಸುತ್ತದೆ. ಅವನ ಈ ವಿಶಿಷ್ಟಗುಣಗಳನ್ನು ಚಾಮರಸ ಮೆಚ್ಚಿಕೊಂಡಿರುವುದರಿಂದಲೇ ಅವನನ್ನು 'ಮಹಂತ' ಎಂದು ಕರೆದಿದ್ದಾನೆ. ಆದರೆ "ಅಂತರಂಗ ವಿಚಾರವಿಲ್ಲದ ಸಂತೆಯಂಗಡಿಯಂತೆ ಸೊನ್ನಪುರದೊಳು ಒಡ್ಡಯಿಸಿ" ಎಂಬ ಅವನ ಮಾತಿನಲ್ಲಿರುವ ಕಾಕನ್ನು ಗಮನಿಸಿದಾಗ, ಅದು ಅವನ ಮನಸ್ಸಿಗೆ ಬಂದಿಲ್ಲವೆಂಬುದು ಹೊಳೆಯುತ್ತದೆ. ಸಂತೆಯೊಳಗುಂಟೇ ಸಮಾಧಿಯ ಸಂತಾನದದ ಸುಖೋದಯ " (೬–೧೭.) ಎಂದು ಅವನು ಮತ್ತೊಂದೆಡೆ ಹೇಳಿರುವುದನ್ನು ಇಲ್ಲಿ ನೆನೆಯಬಹುದು.

ಅಕ್ಕಮಹಾದೇವಿಯ ಅಪೂರ್ವವ್ಯಕ್ತಿತ್ವವನ್ನು ಅತ್ಯಂತ ಅರ್ಥವತ್ತಾಗಿ ನಿರೂಪಿಸುವ ಚಾಮರಸನ ಪದ್ಯ ಹೀಗಿದೆ ;

ಗೋಮುಖ ವ್ಯಾಘ್ರಂಗಳಂದದ
ಕಾಮಮೊದಲಾದಖಿಳ ವಿಷಯ

ಸ್ತ್ರೀಮಾವನು ಮುರಿದಿಕ್ಕಿ ಮುಂಬರಿದಂತರಂಗದಲಿ
ಆ ಮಹಾಶಿವಲಿಂಗಸಂಗ
ಪ್ರೇಮಿಯಾಗಿ ಶಿವೈಕ್ಯಪದವನು
ನೇಮಿಸಿದ ಮಹಾದೇವಿಯಕ್ಕಗೆ ಶರಣು ಶರಣಾರ್ಥಿ.

ಕಾಮಕ್ರೋಧಾದಿ ಅರಿಷಡ್ವರ್ಗಗಳು ಹಾಗು ವಿಷಯ ಸುಖಗಳು ಗೋಮುಖ ವ್ಯಾಘ್ರಗಳು. ಅವುಗಳ ನಿಜವಾದ ಸ್ವರೂಪವನ್ನೂ, ಪರಿಣಾಮಭೀಕರತೆಯನ್ನೂ ಮಾನ ಗಂಡ ಅಕ್ಕಮಹಾದೇವಿ ಮೊದಲು ಅವುಗಳನ್ನು ಮುರಿದಿಕ್ಕಿದಳು. ಅಲ್ಲಿಗೇ ನಿಲ್ಲದೆ ಸಾಧನೆಯನ್ನು ಮುಂದುವರಿಸಿ, ಅಂತರಂಗದಲ್ಲಿ ಮಹಾಶಿವಲಿಂಗಸಂಗಸುಖವನ್ನು ಅನುಭವಿಸಿ ಶಿವಸ್ಥಿತಿಯನ್ನು ಮುಟ್ಟಿದಳು. ಈ ಭಾವವನ್ನೊಳಗೊಂಡಿರುವ ಈ ಪದ್ಯ, ಅಕ್ಕಮಹಾದೇವಿಯ ವ್ಯಕ್ತಿತ್ವದ ವಿಶಿಷ್ಟ ಲಕ್ಷಣಗಳಾದ ವಿಷಯ ವಿಮುಖತೆ ಹೇಗೆ ಬೇರೆಯಾಗಿದೆ ಎಂಬುದರ ಸೂಕ್ಷ್ಮ ಈ ಪದ್ಯದಲ್ಲಿದೆ. ಮತ್ತು ಶರಣಸತಿ ಲಿಂಗಪತಿ ಭಾವವನ್ನು ನವೇದುರು ತೆರೆದವರ್ಗವಾಗಿರುತ್ತದೆ. ಮಾಚಯ್ಯನೂ ಮಡಿ ವಳನೇ ನಿಜ. ಆದರೆ ಉಳಿದ ಮಡಿವಳರು ಬಟ್ಟೆಗೆ ಅಂಟಿದ ಮೈಲಿಗೆಯನ್ನು ತೊಳೆ ದರೆ ಇವನು ತೊಳೆಯುವುದು ಜೀವಕ್ಕೆ ಅಂಟಿಕೊಂಡಿರುವ ಅನಾದಿ ಮಾಯಾಂಬರದ ಮೈಲಿಗೆಯನ್ನು. ಅವರು ಸಾಮಾನ್ಯ ವಾರಿಪ್ರವಾಹದಲ್ಲಿ ಬಟ್ಟೆದೊಳೆದರೆ ಇವನು ತೊಳೆಯುವುದು ಭಕ್ತಿರಸಪ್ರವಾಹದಲ್ಲಿ, ಅವರು ತೊಳೆದು ಬಟ್ಟೆಯುಟ್ಟವರು ಸಾಮಾನ್ಯ ಜನರ ದೃಷ್ಟಿಯನ್ನು ಸೆಳೆದರೆ, ಇವನು ತೊಳೆದ ಬಟ್ಟೆಯುಟ್ಟವರು ಸೆಳೆಯುವುದು ಪರಶಿವನ ಕೃಪಾದೃಷ್ಟಿಯನ್ನು. ಹೀಗಾಗಿ ಶಿವನ ದರ್ಶನ ಈ ಶರಣರಿಗೆ ಸಾಧ್ಯ. ಈ ಭಾವವನ್ನು ಸ್ಫುರಿಸುವ ಈ ಪದ್ಯ ನಿಜಕ್ಕೂ ಪರಿಭಾವನಾರ್ಹ. ಮಡಿ ವಾಳ ಮಾಚಯ್ಯ ಸಮಾಜದ ಕೆಳಗಿನ ಸ್ತರದಿಂದ ಬಂದವ. ಆದರೂ ಶರಣರ ಕಾಯಕ ತತ್ತ್ವವನ್ನು ಚೆನ್ನಾಗಿ ಅರಗಿಸಿಕೊಂಡು ಅದನ್ನು ಅಧ್ಯಾತ್ಮದ ಮಟ್ಟಕ್ಕೇರಿಸಿದ ಮಡಿ ವಳ ಮಾಚಯ್ಯನ ವ್ಯಕ್ತಿತ್ವದ ಬೆಡಗನ್ನೂ ಅದರಿಂದ ಪರಮೇಶ್ವರನನ್ನು ತೋರುವ ಅವನ ಸಾಧನೆ ಸಿದ್ಧಿಗಳನ್ನು ಈ ಪದ್ಯ ಪ್ರತಿಮಿಸುತ್ತದೆ.

ಮುಂದಿನ ಪದ್ಯ ಮರುಳ ಶಂಕರದೇವ, ಕಿನ್ನರಿಯ ಬೊಮ್ಮಣ್ಣ ಮೊದಲಾದ ಶರಣರು ತಮ್ಮ ತಮ್ಮ ಕಾಯಕದ ಮೂಲಕವೇ ಶಿವಲಿಂಗಭಕ್ತಿಯನ್ನು ಪರಿಚಯಿಸಿ ಶಿವೈಕ್ಯರಾದುದನ್ನು ವಿಸ್ತರಿಸುತ್ತದೆ.

ಇತರ ವೀರಶೈವ ಕೃತಿಗಳಲ್ಲಿ ಆರಂಭದಲ್ಲಿ ಶಿವಶರಣರನ್ನು ಕುರಿತು ಬರುವ ಪ್ರಾರ್ಥನಾ ಪದ್ಯಗಳ ಜೊತೆ ಚಾಮರಸನ ಈ ಪದ್ಯಗಳನ್ನು ತೌಲನಿಸಿ ನೋಡಿದಾಗ ತಟ್ಟನೆ ಇವುಗಳ ವಿಶೇಷತೆ ಎದ್ದು ಕಾಣುತ್ತದೆ. ಬಸವಾದಿ ಪ್ರಮಥರ ಮಹಿಮಾ

ತಿಶಯೋಕ್ತಿ ಚಾಮರಸ ಮಾರು ಹೋಗಿದ್ದರೂ ಉಳಿದ ಕವಿಗಳಂತೆ ಅವನು ಕೇವಲ "ಮಾಹಿಮಾಗಾರ ಭವದೂರ", "ಬಸವಶರಣನೆ ಪಾಪ ತೊಳೆವುದು" ಮುಂತಾಗಿ ಭಾವಪರವಶತೆಯಿಂದ ಸುಮ್ಮನೆ ಉದ್ಗರಿಸುತ್ತ ಹೋಗಿಲ್ಲ. ಆಯಾಶರಣರಿಂದ ವೀರಶೈವಕ್ಕೆ ಸಂದ ಸೇವೆ, ಮತ್ತು ಅವರ ವಿಶಿಷ್ಟವ್ಯಕ್ತಿತ್ವಕ್ಕೆ ಸ್ಪಷ್ಟ ಕಲ್ಪನೆ ಚಾಮರಸನಿಗಿದೆ. ಅವರವರ ಮೂರ್ತಿ ಸ್ವರೂಪದ ಕೇಂದ್ರಬಿಂದುವಾದುದೆಂಬುದನ್ನು ಅವನು ಚೆನ್ನಾಗಿ ಗ್ರಹಿಸಿದ್ದಾನೆ. ಶರಣರ ಪುಣ್ಯಮಲ ಜೀವರಸದಿಂದ ತುಂಬಿ ತುಳುಕುವ ತನಿವಣ್ಣುಗಳಂತಿರುವ ಇಂಥ ಪದ್ಯಗಳು ಸಾಹಿತ್ಯ ಪ್ರಪಂಚದಲ್ಲಿ ವಿರಳ. ಅವುಗಳನ್ನು ಆಸ್ವಾದಿಸುತ್ತ ಹೋದಂತೆ ರುಚಿ ಹೆಚ್ಚುತ್ತಲೇ ಹೋಗುತ್ತದೆ. ಪ್ರಶ್ನೆಗಳು ಶುಚಿಗೊಂಡು ಮಡಿಯಾಗುತ್ತಲೇ ಇರುತ್ತವೆ.



---

## ಸೇವೆಗೆ ತಕ್ಕ ಪ್ರತಿಫಲ

ಪೂಜ್ಯ ಪಂ. ನಾಗಭೂಷಣ ಶಾಸ್ತ್ರಿಗಳವರಿಗೆ—

ಅಭಿನಂದನೆಗಳು,

ತಾವು ಸಂಸ್ಕೃತ ಪಂಡಿತರಾಗಿ ಬಹುಕಾಲ ಸೇವೆ ಸಲ್ಲಿಸಿದುದನ್ನು ರಾಜ್ಯ ಸರಕಾರವು ಸ್ಮರಣೆಗೆ ತಂದು ೧೯೭೮-೭೯ ನೇ ಸಾಲಿನ ರಾಜ್ಯಪ್ರಶಸ್ತಿ, ಹಾಗೂ ಸಾವಿರರೂಪಾಯಿಗಳನ್ನು ನೀಡಿ, ಶಾಲುಹೊದಿಸಿ ತಮಗೆ ೧೦-೫-೧೯೭೯ ರಂದು ಗೌರವಿಸಿದ್ದುದು ಕಾಯಕ ನಿಷ್ಠೆಯ ಪ್ರತಿಫಲವಾಗಿದೆ.

ಗದಗ — ಸದಾಶಿವ ಬಡಿಗಣ್ಣವರ

ಕಾರ್ಯದರ್ಶಿ, ಶ್ರೀ ಬಸವರಾಜ ವಾಚನಾಲಯ

ತಮಗೆ ರಾಜ್ಯ ಪ್ರಶಸ್ತಿ ದೊರೆತದ್ದು ಅತ್ಯಂತ ಹರ್ಷದಾಯಕವಾಗಿದೆ.

ಗದಗ — ಶ್ರೀ ಬಸವರಾಜ ತುಪ್ಪದ

ತಮಗೆ ರಾಜ್ಯಪ್ರಶಸ್ತಿ ದೊರೆತದ್ದು ಶಿವಾನುಭವ ಸಂಚಾಲಕರುಗಳಿಗೆಲ್ಲ ಅಭಿಮಾನದ ಸಂಗತಿಯಾಗಿದೆ.

ಶ್ರೀ ಬಿ. ಎಚ್. ದೇಸಾಯಿ

ಸಂಪಾದಕರು, ಶರಣ ಧರ್ಮ

ಸಂಸ್ಕೃತ ಪಂಡಿತರಾಗಿ ದೀರ್ಘಕಾಲ ಸೇವೆಗೈದುದಕ್ಕೆ ತಕ್ಕ ಪ್ರತಿಫಲ.

ವಸಂತ ಪಾಟೀಲ

ಎಸ್. ಎಸ್. ಭೂಸನೂರಮಠ

( ಪತ್ರವ್ಯಾಸಗಳಿಂದ ಸಂಗ್ರಹಿಸಿದ್ದು )

## ಶ್ರೀ ಸದಾಶಿವ ಒಡೆಯರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ನಿವೃತ್ತ ಕುಲಪತಿಯವರು, ಅವರ

# ಶುಭ ಸಂದೇಶ

ಪಂ. ನಾಗಭೂಷಣ ಶಾಸ್ತ್ರಿಗಳವರ ಅಮೃತ ಮಹೋತ್ಸವ ಸಮಾರಂಭವನ್ನು ಧಾರವಾಡದ ಶ್ರೀಗುರು ಮುರುಘಾಮಠದ ಅಧ್ಯಕ್ಷರಾದ ಶ್ರೀ ಮ. ನಿ. ಪ್ರ. ಮಹಾಂತಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ಹಮ್ಮಿಕೊಂಡಿರುವ ವಿಷಯ ತಿಳಿದು ತುಂಬಾ ಸಂತೋಷವಾಯಿತು. ತನ್ನಿಮಿತ್ತವಾಗಿ ಅಭಿನಂದನಾಗ್ರಂಥ ಹೊರಬರಲಿರುವುದು ಔಚಿತ್ಯಪೂರ್ಣವಾದುದಾಗಿದೆ. ೭೦ ವರುಷಗಳ ತುಂಬು ಜೀವನ ಸಾಗಿಸಿದ ಪಂ. ನಾಗಭೂಷಣ ಶಾಸ್ತ್ರಿಗಳು ಬಹು ಶ್ರದ್ಧೆಯಿಂದ ಸದ್ದುಗದ್ದಲವಿಲ್ಲದೇ ಸಮಾಜದ ಸೇವೆ ಸಲ್ಲಿಸಿದ್ದಾರೆ. ತಮ್ಮ ಪಾಂಡಿತ್ಯಪೂರ್ಣ ವ್ಯಕ್ತಿತ್ವದಿಂದ 'ಸಾವಧಾನ' ಪಾಕ್ಷಿಕ ಪತ್ರಿಕೆಯ ಸಂಪಾದಕತ್ವವಹಿಸಿ ಅಮೌಲ್ಯ ಸೇವೆ ಸಲ್ಲಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ 'ಬಸವ ಪೀಠ'ದಲ್ಲಿ ತಮ್ಮ ಕಾಯಕನಿಷ್ಠೆಯನ್ನು ಅಚ್ಚುಕಟ್ಟಾಗಿ ವ್ಯಕ್ತಗೊಳಿಸಿದ್ದಾರೆ. ಬಹುಬೆಲೆಯ ಆಧ್ಯಾತ್ಮಿಕ ಕೃತಿಗಳನ್ನು ರಚಿಸಿ, ಅವುಗಳ ಸಾರಸುಧೆಯನ್ನು ಜನಸಾಮಾನ್ಯರಲ್ಲಿ ಬಿಂಬಿಸಿ ತನ್ಮೂಲಕ ಅವರಲ್ಲಿ ಧರ್ಮ ಜಾಗ್ರತೆಯನ್ನು ಉಂಟುಮಾಡಿರುವ ಇವರದು ಅನುಕರಣೀಯ ಮಾರ್ಗ.

ಹಲವು ಹತ್ತಾರು ವಿಷಯಗಳ ಮೇಲೆ ವಿದ್ವಾಂಸರಿಂದ ಬಂದ ಲೇಖನಗಳನ್ನೊಳಗೊಂಡ ಈ ಅಭಿನಂದನಾ ಗ್ರಂಥ ನಾಡಿನಾದ್ಯಂತ ನೆಲೆಸಿರುವ ಪಂ. ನಾಗಭೂಷಣ ಶಾಸ್ತ್ರಿಗಳವರ ಅಭಿಮಾನೀ ಬಳಗದ ಕೈಸೇರಲೆಂದು ಹಾಗು ಶಾಸ್ತ್ರಿಗಳವರು ನಮ್ಮೆಲ್ಲರ ಮಧ್ಯ ಆಯುರಾರೋಗ್ಯ ಭಾಗ್ಯ ಸಮೃದ್ಧಿಹೊಂದಿ ಅವರ ಸೇವೆ ನಿರಂತರ ಇನ್ನೂ ಹಲವಾರು ವರ್ಷ ದೊರೆಯುವಂತಾಗಲಿ, ಅವರಿಗೆ ಆರ್ಥಿಕ ಅನುಕೂಲತೆ, ಮಾನಸಿಕ ನೆಮ್ಮದಿ, ಒಳ್ಳೇ ಆರೋಗ್ಯ ಇವುಗಳು ಒದಗಿಸುವಂತೆ ಸಮಾಜ ಬಾಂಧವರು ನೆರವಾಗಲಿ ಹಾಗು ದೇವರು ಅವರಿಗೆ ಸುಖ-ಶಾಂತಿಗಳನ್ನು ಅನುಗ್ರಹಿಸಲಿ ಎಂದು ಹಾರೈಸುತ್ತೇನೆ.

# ವಿಮರ್ಶೆ :

## ಚೆನ್ನಬಸವಣ್ಣನವರ ವಚನ ಸಂಗ್ರಹ-ಸ್ಥೂಲ ಪರಿಚಯ

[ ಸುದೀರ್ಘವಾದ ವಿಮರ್ಶಾ ಲೇಖನದಿಂದ ಕೆಲ ಅವತರಣಿಕೆಗಳನ್ನು ಇಲ್ಲಿ ಆಯ್ಕೆ ಮಾಡಲಾಗಿದೆ. ಸಂ. ]

ವಿದ್ವಾಂಸರಾದ ಪಂಡಿತ ನಾಗಭೂಷಣ ಶಾಸ್ತ್ರಿಗಳು ಸುಮಾರು ಐದು ದಶಕಗಳಿಂದ ಅವ್ಯಾಹತವಾಗಿ ಸಾಹಿತ್ಯ ಸೇವೆಯನ್ನು ಗೈಯುತ್ತ ಬಂದಿದ್ದಾರೆ. ವೀರಶೈವ ಸಾಹಿತ್ಯ, ಧರ್ಮ, ಸಂಸ್ಕೃತಿಗಳ ವಿವೇಚನೆಯನ್ನೊಳಗೊಂಡ 'ಸಾವಧಾನ' ಪತ್ರಿಕೆಯ ಸಂಪಾದಕತ್ವದ ಗುರುತರ ಹೊಣೆಯನ್ನು ಹೊತ್ತುಕೊಂಡು ಇಂದಿಗೂ ಸಮರ್ಥವಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಇವರು ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಮತ್ತು ಕೆಲವನ್ನು ಸಂಪಾದಿಸಿದ್ದಾರೆ. ಇವರು ಸಂಪಾದಿಸಿದ ಕೃತಿಗಳಲ್ಲಿ 'ಚೆನ್ನಬಸವಣ್ಣನವರ ವಚನ ಸಂಗ್ರಹ' ಒಂದು ಉಪಯುಕ್ತವಾದ ಕೃತಿ.

ಈ ಮೊದಲು ಚೆನ್ನಬಸವಣ್ಣನವರ ೩೨೩ ವಚನಗಳ ಸಂಗ್ರಹವನ್ನು ೧೯೧೪ ರಲ್ಲಿ ಬಳ್ಳಾರಿಯ ಶ್ರೀ ಶಿವಲಿಂಗ ಶೆಟ್ರು ಮತ್ತು ೧೯೩೨ ರಲ್ಲಿ ವಿಜಾಪೂರದ ಡಾ॥ ಪಿ. ಜಿ. ಹಳಕಟ್ಟಿಯವರು ಸಂಪಾದಿಸಿದ್ದಾರೆ. ಇವಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಡಾ॥ ಆರ್. ಸಿ. ಹಿರೇಮಠ ಅವರ ಸಂಪಾದಕತ್ವದಲ್ಲಿ ಚೆನ್ನಬಸವಣ್ಣನವರ ೧೫೦೩ ವಚನಗಳ ಸಂಗ್ರಹದ ಬೃಹದ್ಗ್ರಂಥ ಹೊರಬಂದಿದೆ. ಪಂಡಿತ ನಾಗಭೂಷಣ ಶಾಸ್ತ್ರಿಗಳು ಶ್ರೀ ಮುರುಘಾಮಠದ ಆಶ್ರಯದಲ್ಲಿ 'ಷಟ್‌ಸ್ಥಲ ಚಕ್ರವರ್ತಿ ಶ್ರೀ ಚೆನ್ನಬಸವಣ್ಣನವರ ನೂರೆಂಟು ವಚನಗಳು' ಎಂಬ ಪುಸ್ತಕವನ್ನು ಷಟ್‌ಸ್ಥಲ ಕಟ್ಟಿನ ಆಧಾರದ ಮೇಲೆ ಆರಿಸಿಕೊಂಡು ಸಂಪಾದಿಸಿದ್ದಾರೆ; ಜೊತೆಗೆ ಅದರ ವಿವರಣೆಯನ್ನು ಕೊಟ್ಟು ಅದರ ಉಪಯುಕ್ತತೆಯನ್ನು ಇನ್ನಷ್ಟು ಹೆಚ್ಚಿಸಿದ್ದಾರೆ. ಇದೇ ಪ್ರಕಾರ ಇವರೇ 'ಚೆನ್ನಬಸವಣ್ಣನವರ ವಚನಗಳ ಸಂಗ್ರಹ ಪುಸ್ತಕವನ್ನು ಷಟ್‌ಸ್ಥಲ ಕಟ್ಟಿನ ಆಧಾರದ ಮೇಲೆ ಆರಿಸಿಕೊಂಡು ಸಂಪಾದಿಸಿದ್ದಾರೆ.

ವಚನಕಾರರಲ್ಲಿ ಚೆನ್ನಬಸವಣ್ಣನವರ ಸ್ಥಾನ ವಿಶಿಷ್ಟವಾದುದು. ಮಹಾದಾರ್ಶನಿಕ ಚೆನ್ನಬಸವಣ್ಣನವರು 'ಷಟ್‌ಸ್ಥಲ ಚಕ್ರವರ್ತಿ' ಎಂದು ಶರಣ ಸಂಕುಲದಲ್ಲಿ

ಶ್ರೇಷ್ಠರಾದರು. ವಯಸ್ಸಿನಲ್ಲಿ ಚಿಕ್ಕವರಾಗಿದ್ದರೂ ಅನುಭಾವದಲ್ಲಿ ಎಲ್ಲರನ್ನೂ ಮೀರಿದ್ದರು ಎಂದು ತಿಳಿದು ಬರುತ್ತದೆ. ಬಸವಣ್ಣನವರ ಅಳಿಯರಾಗಿದ್ದ ಚನ್ನಬಸವಣ್ಣನವರು ಜ್ಞಾನದ ಹಿರಿಮೆಯಿಂದ ಗುರುಸ್ಥಾನ ಪಡೆದಿದ್ದರು. ಅನುಭವ ಮಂಟಪದ ಸಂಘಟನೆ ಮತ್ತು ಷಟ್‌ಸ್ಥಲ ಸಿದ್ಧಾಂತದ ಸ್ವರೂಪದರ್ಶನ ಈ ಮಹಾಕಾರ್ಯಗಳ ನೇತೃತ್ವವನ್ನು ವಹಿಸಿಕೊಂಡಿದ್ದರು. ಕರ್ಮವನ್ನೇ ನಂಬಿಕೊಂಡು ಕುಳಿತ ಕರ್ಮಯೋಗಿ ಸಿದ್ಧರಾಮನಿಗೆ ಲಿಂಗಜ್ಞಾನ ಮಾಡಿಕೊಡುವಲ್ಲಿ, ಲಿಂಗಧಾರಣಮಾಡುವಲ್ಲಿ ಮುಖ್ಯ ಪಾತ್ರವಹಿಸಿದರು. ಮಹಾದೇವಿಯಕ್ಕನೂ ಚನ್ನಬಸವಣ್ಣನಿಗೆ 'ಸಮ್ಯಗ್ ಜ್ಞಾನ' ಎಂದು ಸಂಬೋಧಿಸಿರುವಲ್ಲಿ ಔಚಿತ್ಯವಿದೆ, ಸಮಾಜ ರಚನೆಯ ಕ್ಷೇತ್ರದಲ್ಲಿ ಚನ್ನಬಸವಣ್ಣವರು ಒಳ್ಳೆಯ ಕೆಲಸಮಾಡಿ ಸರ್ವರ ಕೃತಜ್ಞತೆಗೆ ಪಾತ್ರರಾಗಿರುವರು. ಜ್ಞಾನಮೂರುತಿ ಅಲ್ಲಮ ಪ್ರಭುದೇವ, ಶಿವಯೋಗಿ ಸಿದ್ಧರಾಮ ಇವರಿಬ್ಬರೂ ಚನ್ನಬಸವಣ್ಣನ ಜ್ಞಾನವನ್ನೂ, ಸಾಮರ್ಥ್ಯವನ್ನೂ ಚೆನ್ನಾಗಿ ಬಲ್ಲವರಾಗಿದ್ದರು,

ಇಂತಹ ಮಹಾದಾರ್ಶನಿಕ ಚನ್ನಬಸವಣ್ಣ ತಮ್ಮ ವಚನ ವಾಣಿಯಿಂದ ವೀರಶೈವ ತತ್ವದ ಆತ್ಮದಂತಿರುವ 'ಷಟ್‌ಸ್ಥಲ'ದ ಬಗೆಗೆ ತಿಳಿಸಿರುವರು. ವಿಶ್ವದ ಮೂಲತತ್ವವನ್ನೇ ಆವರಿಸಿಕೊಂಡ 'ಸ್ಥಲ' ಶಬ್ದವು ವ್ಯಾಪಕಾರ್ಥವನ್ನು ಹೊಂದಿದೆ. ವೀರಶೈವ ಸಿದ್ಧಾಂತದಲ್ಲಿ ಈ ಸ್ಥಲಗಳನ್ನು ಅಂಗಸ್ಥಲದಲ್ಲಿ ೪೪ ಮತ್ತು ಲಿಂಗಸ್ಥಲದಲ್ಲಿ ೫೭ ವಿಭಾಗಗಳನ್ನಾಗಿ ಅಂದರೆ ಒಟ್ಟು ೧೦೧ ವಿಭಾಗಗಳಲ್ಲಿ ವಿಂಗಡಿಸಿದ್ದಾರೆ. ಅಂಗಸ್ಥಲದ ೪೪ ಸ್ಥಲಗಳನ್ನು ಆರು ಭಾಗಗಳನ್ನಾಗಿಮಾಡಿ ಒಂದೊಂದು ಸ್ಥಲದಲ್ಲಿ ಉಪಸ್ಥಲಗಳನ್ನು ಕಲ್ಪಿಸಿದ್ದಾರೆ. ಷಟ್‌ಸ್ಥಲಗಳಲ್ಲಿ ಭಕ್ತಸ್ಥಲವೇ ಮೊದಲಿನದು. ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಇವು ಮುಂದಿನ ಐದು ಸ್ಥಲಗಳು. ಸ್ಥಲದ ಪ್ರಕಾರ ಭಕ್ತಿಯಲ್ಲಿಯೂ ಶ್ರದ್ಧಾ ಭಕ್ತಿ, ನಿಷ್ಠಾ ಭಕ್ತಿ, ಅವಧಾನ ಭಕ್ತಿ, ಅನುಭವ ಭಕ್ತಿ ಹಾಗೂ ಸಮರಸ ಭಕ್ತಿ ಎಂಬ ಆರು ಪ್ರಭೇದಗಳು. ಭಕ್ತಸ್ಥಲದಲ್ಲಿ ಶ್ರದ್ಧಾ ಭಕ್ತಿಗೆ, ಮಹೇಶ ಸ್ಥಲದಲ್ಲಿ ನಿಷ್ಠಾ ಭಕ್ತಿಗೆ, ಪ್ರಸಾದಿ ಸ್ಥಲದಲ್ಲಿ ಅವಧಾನ ಭಕ್ತಿಗೆ, ಪ್ರಾಣಲಿಂಗಿ ಸ್ಥಲದಲ್ಲಿ ಅನುಭವ ಭಕ್ತಿಗೆ, ಶರಣ ಸ್ಥಲದಲ್ಲಿ ಆನಂದ ಭಕ್ತಿಗೆ ಮತ್ತು ಐಕ್ಯ ಸ್ಥಲದಲ್ಲಿ ಸಮರಸ ಭಕ್ತಿಗೆ ಪ್ರಾಮುಖ್ಯತೆ ಇರುವುದುಂಟು.

ಈ ಸ್ಥಲ ಚೌಕಟ್ಟಿನ ಹಿನ್ನೆಲೆಯಲ್ಲಿ ಸಂಪಾದಕರು ವಚನಗಳನ್ನು ಸಂಗ್ರಹಿಸಿದ್ದಾರೆ.

ವೀರಶೈವ ಷಟ್‌ಸ್ಥಲ ಸಿದ್ಧಾಂತದಲ್ಲಿ ಲಿಂಗಸ್ಥಲ ಮತ್ತು ಅಂಗಸ್ಥಲ ಎಂಬ ಎರಡು ಪ್ರಭೇದಗಳು, ಮತ್ತು ೧೦೧ ಸ್ಥಲಗಳಲ್ಲಿ ಷಟ್‌ಸ್ಥಲವನ್ನು ವಿಭಾಗಿಸಿದು

ಉಂಟು. ಆಧ್ಯಾತ್ಮ ವಿಕಾಸದ ಈ ಕ್ರಮವು ಒಂದು ವ್ಯವಸ್ಥಿತಿ ರೀತಿಯಿಂದ ಬಂದುದಾಗಿದೆ. ಶರಣರ ವಚನಗಳಲ್ಲಿ ಈ ಸ್ಥಲಗಳ ವಿವರಣೆ ಕಂಡು ಬಂದರೂ ಕ್ರಮಬದ್ಧವಾಗಿ ಕಾಣುವುದು ವಿರಳ. ಇದಕ್ಕೆ ಕಾರಣ ಒಂದು ಸ್ಥಲದಿಂದ ಮತ್ತೊಂದು ಸ್ಥಲಕ್ಕಿರುವ ಅತಿ ಸೂಕ್ಷ್ಮ ಭೇದವೆಂದೇ ಹೇಳಬಹುದು. ಇವೆಲ್ಲ ಸ್ಥಲಗಳ ಕ್ರಮಬದ್ಧ ಸೂತ್ರರೂಪ ನಿರೂಪಣೆಯನ್ನು ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿಯಲ್ಲಿ ಕಾಣುತ್ತೇವೆ. ಮುಗ್ಗಿಮಾಯಿದೇವನ ಶಿವಾನುಭವ ಸೂತ್ರದಲ್ಲಿಯೂ ಈ ಷಟ್‌ಸ್ಥಲ ವಿವರಣೆ ಕ್ರಮಬದ್ಧವಾಗಿರುವುದನ್ನು ನೋಡಬಹುದು. ಇದೇ ಪ್ರಕಾರ ಮಹಲಿಂಗನ ಏಕೋತ್ತರ ಶತಸ್ಥಲದಲ್ಲಿ ಮತ್ತು ಕಲ್ಲುಮಠದ ಪ್ರಭುದೇವರ ಲಿಂಗಲೀಲಾ ವಿಲಾಸದಲ್ಲಿ ಕ್ರಮಬದ್ಧವಾದ ಷಟ್‌ಸ್ಥಲ ನಿರೂಪಣೆ ಇದ್ದುದನ್ನು ಕಾಣುವೆವು.

ಚನ್ನಬಸವಣ್ಣನವರ ವಚನಗಳಲ್ಲಿ ಷಟ್‌ಸ್ಥಲ ಸ್ವರೂಪ ಹಾಸುಹೊಕ್ಕಾಗಿ ಹೆಣೆದು ಶರಣರಿಗೆ ತವನಿಧಿಯನ್ನಾಗಿಮಾಡಿ ಅರ್ಪಿಸಿದೆ. ಇದೊಂದು ಹೆಗ್ಗಳಿಕೆ. ಅಖಂಡ ಅನುಭಾವ ಅವರ ವಚನಗಳುದ್ದಕ್ಕೂ ಕಂಡು ಬರುವುದು. ಅದನ್ನು ಅನುಭವಿಸಿ ಆನಂದಿಸಬಹುದು.

ಈ ರೀತಿಯಾಗಿ 'ಚನ್ನಬಸವಣ್ಣನವರ ವಚನ ಸಂಗ್ರಹ' ಪುಸ್ತಕವನ್ನು ಸುವ್ಯವಸ್ಥಿತ ರೀತಿಯಲ್ಲಿ ಸಂಪಾದಿಸಿದ ಪಂಡಿತ ನಾಗಭೂಷಣ ಶಾಸ್ತ್ರಿಗಳು ಅಭಿನಂದನೀಯರಾಗಿರುವರು.

—ಬಿ. ವ್ಹಿ. ಯಕ್ಕುಂಡಿಮಠ

## ವೀರಶೈವ ಧರ್ಮ ವಿವೇಚನೆ

ಕರ್ನಾಟಕ ವಿಶ್ವವಿದ್ಯಾನಿಲಯದ ವಿಶೇಷೋಪನ್ಯಾಸ ಮಾಲೆಯ ಪುಸ್ತಕಗಳಲ್ಲಿ ಇದು ಒಂದಾಗಿದೆ. ಪ್ರಾರಂಭದಲ್ಲಿ ಲೇಖಕರು ಧರ್ಮದ ಅವಶ್ಯಕತೆ, 'ಧರ್ಮ' ಪದದ ವಿವರಣೆ, ಧರ್ಮದ ಎರಡು ರೂಪಗಳು, ಶೈವಧರ್ಮ ಇವನ್ನು ಮುಖ್ಯ ವಿಷಯಕ್ಕೆ ಪೋಷಕವಾಗಿ ಆಧಾರ ಪೂರ್ವಕವಾಗಿ ಎರಡು ಪ್ರಕರಣಗಳಲ್ಲಿ ವಿವರಿಸಿದ್ದಾರೆ. ಮುಂದಿನ ಮೂರು ಪ್ರಕರಣಗಳಲ್ಲಿ ವೀರಶೈವ ಧರ್ಮ, ವೀರಶೈವ ದರ್ಶನ, ವೀರಶೈವ ಧರ್ಮದ ಸಂದೇಶ ಇವನ್ನು ಪ್ರತಿಪಾದನೆ ಮಾಡಿದ್ದಾರೆ.

ಭಾರತೀಯರಿಗೆ ಧರ್ಮ ಎಂಬ ಪದ ಪಾಶ್ಚಾತ್ಯರು ತಿಳಿದು ಕೊಳ್ಳುವಂತೆ ಕೇವಲ ಜೀವ ಹಾಗೂ ದೇವನಿಗೆ ಸಂಬಂಧಿಸಿದ ವಿಷಯವಲ್ಲ. "ರಿಲಿಜನ್" ಎಂಬ ಪದಕ್ಕಿಂತ ವಿಶಾಲವಾದ ಅರ್ಥ ಇದಕ್ಕುಂಟು ಎಂಬುದನ್ನು ಲೇಖಕರು ತಿಳಿಸಿದ್ದಾರೆ. ಜೈನ-ಬೌದ್ಧ ದೃಷ್ಟಿಯಿಂದ ಸ್ಮೃತಿ ಪುರಾಣಗಳ ಆಧಾರದಿಂದ ಮಹಾಪುರುಷರ ಬೋಧನೆಗಳ ನೆಲೆಯಿಂದ ಧರ್ಮದ ಲಕ್ಷಣವನ್ನು ನಿರೂಪಿಸಿದ್ದಾರೆ. ಅದನ್ನು ಸಾಮಾನ್ಯ ಮತ್ತು ವಿಶೇಷ ಎಂದು ವರ್ಗೀಕರಿಸಿ ವಿಶೇಷ ಧರ್ಮವನ್ನು ಹಿಡಿದು ಸಾಮಾನ್ಯ ಧರ್ಮವನ್ನು ಉಪೇಕ್ಷಿಸುವುದು ಮಹಾಪ್ರಳಯಕಾರಿ ಎಂದಿದ್ದಾರೆ. ಆತ್ಮದರ್ಶನವೇ ಪರಮಧರ್ಮ ಎಂಬ ಯಾಜ್ಞವಲ್ಕ್ಯರ ಮಾತನ್ನು ಲೇಖಕರು ಎತ್ತಿ ಹಿಡಿದಿದ್ದಾರೆ.

ಶೈವಧರ್ಮದ ಹಾಗೂ ಲಿಂಗಾರಾಧನೆಯ ಪ್ರಾಚೀನತೆಯನ್ನು ಲೇಖಕರು ಋಗ್ವೇದದಲ್ಲಿ ಕಂಡಿದ್ದಾರೆ. ಯಜುರ್ವೇದದಲ್ಲಿ ಪಂಚಾಕ್ಷರೀ ಮಂತ್ರವಿದೆ. ಅಥರ್ವವೇದ, ಲಿಂಗಧಾರಣೆ ವೀರಶೈವರಿಗೆ ಮಾತ್ರವಲ್ಲದೆ ಶುದ್ಧ ಶೈವರಿಗೆ ಉಂಟು-ಎಂಬುದನ್ನು ಸ್ಕಂದ ಪುರಾಣ ಪಾಶುಪತ ಸೂತ್ರಗಳಿಂದ ಸ್ಪಷ್ಟಪಡಿಸಿ, ಲಿಂಗಧಾರಣೆಯ ತಾತ್ವಿಕ, ನೈತಿಕ ವಿಚಾರಗಳು ಗಹನವೂ ಆವಶ್ಯಕವೂ ಆದುವೆಂದು ಅಭಿಪ್ರಾಯ ನೀಡಿದ್ದಾರೆ. ಜೀವನದಲ್ಲಿ ಪ್ರಸಾರ ಭೋಗದ ಹಿರಿಮೆಯನ್ನು ವಿಶದಪಡಿಸಿದ್ದಾರೆ. ಶೈವರ ಲಿಂಗಧಾರಣೆ ಲಿಂಗಪೂಜೆಗಳಿಗೂ, ವೀರಶೈವ ಲಿಂಗಧಾರಣೆ ಲಿಂಗಪೂಜೆಗಳಿಗೂ ಮಹದಂತರವಿದೆ ಎಂದು ತಿಳಿಸಿದ್ದಾರೆ. ಅಷ್ಟಾವರಣ, ಷಟ್‌ಸ್ಥಲ. ಇವುಗಳನ್ನು — ವಿವರಿಸಿದ್ದಾರೆ.

ವೀರಶೈವ ದರ್ಶನಕ್ಕೆ "ಶಕ್ತಿ ವಿಶಿಷ್ಟಾದ್ವೈತ " ಎಂದು ಇನ್ನೊಂದು ಹೆಸರು. ವಿಚಾರ ಪ್ರಧಾನವಾಗಿ ಇದು ಶಕ್ತಿವಿಶಿಷ್ಟಾದ್ವೈತ, ಆಚಾರ ಪ್ರಧಾನವಾಗಿ ಇದು ಷಟ್‌ಸ್ಥಲ ಸಿದ್ಧಾಂತ. ಒಟ್ಟಿನಲ್ಲಿ ವೀರಶೈವ ಧರ್ಮವು ವಿಶ್ವಧರ್ಮಕ್ಕೆ ಶೈವ ಧರ್ಮದಿಂದ ಸಂದ ಅನರ್ಘ್ಯವಾದ ಕಾಣಿಕೆ ಎಂಬಲ್ಲಿಯ ಅಭಿಪ್ರಾಯನ್ನು ಲೇಖಕರು ನೀಡಿದ್ದಾರೆ. ಈ ಪುಸ್ತಕವು ಕನ್ನಡದಲ್ಲಿ ಧಾರ್ಮಿಕ ವಿಚಾರಗಳನ್ನು ಅದರಲ್ಲೂ ವೀರಶೈವ ಧರ್ಮವನ್ನು ತಿಳಿದುಕೊಳ್ಳಲು ಒಳ್ಳೆಯದೊಂದು ಸಹಾಯಕ ಪುಸ್ತಕವಾಗಿದೆ,

ಟಿ. ಕೇಶವಭಟ್ಟ

[ಕನ್ನಡಪ್ರಭೆ ಕೃಪೆಯಿಂದ]
(೧೫-೧೧-೭೬)

# ಸರ್ವಜ್ಞನ ವಚನ ಸಂಗ್ರಹ

ಸರ್ವಜ್ಞನ ವಚನ ಸಂಗ್ರಹ
ಸಂಪಾದಕರು : ಪಂ. ನಾಗಭೂಷಣಶಾಸ್ತ್ರಿಗಳು
ಅನುಭವ ಮಂಟಪ ಗ್ರಂಥಮಾಲೆ-೨
ಬಸವಾವತಾರ ಸಂ. ೮೧೫, ಬೆಲೆ : ೨ ಆಣೆ
ಪುಟಗಳು ೨೦.

ಅಂಗೈಯಗಲದ ಈ ಕಿರುಕೃತಿಯು ಪಂ. ನಾಗಭೂಷಣಶಾಸ್ತ್ರಿಗಳು ಕನ್ನಡ ನಾಡಿನ ಮಹಾನಗರಗಳಲ್ಲಿ ಒಂದಾದ ವೀರಶೈವದ ಗಂಡು ಮೆಟ್ಟಾದ ಗದುಗಿನಲ್ಲಿ ಸ್ಥಾಪಿಸಿದ ವೀರಶೈವ ವಿದ್ಯಾಪೀಠದ ವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲವಾಗುವಂತೆ ರೂಪಿಸಿ ಸಂಪಾದಿಸಿದುದು. ಇದರಲ್ಲಿ ಪಂ. ಶಾಸ್ತ್ರಿಗಳು ಒಬ್ಬ ದೇವ, ಶಿವನು ಜಗದ್ಭರಿತನು, ಗುರುವಿನ ಆವಶ್ಯಕತೆ, ಗುರುಲಕ್ಷಣ, ಗುರುವಿನಿಂದ ಮೋಕ್ಷ, ಭಕ್ತಸ್ಥಲ, ಮಹೇಶ್ವರಸ್ಥಲ, ಪ್ರಸಾದಿಸ್ಥಲ ಮೊದಲಾದ ಮಹತ್ವದ ಹಲವು ಹನ್ನೊಂದು ಸುಂದರವಾದ ಬಂಧುರವಾದ ಶೀರ್ಷಿಕೆಗಳ ಅಡಿಯಲ್ಲಿ ೧೦೮ ಸರ್ವಜ್ಞನ ವಚನಗಳನ್ನು ಸಂಪಾದಿಸಿದ್ದಾರೆ. ಮೊದಲ ಮಾತುಗಳ ಮುಖಾಂತರ ಸರ್ವಜ್ಞನ ವಚನಗಳ ಹಿರಿಮೆ-ಗರಿಮೆಯನ್ನು ಹೀಗೆ ವರ್ಣಿಸಿದ್ದಾರೆ: "ಕನ್ನಡ ಸಾಹಿತ್ಯದಲ್ಲಿ ಸರ್ವಜ್ಞನ ವಚನಗಳು ವಿಶಿಷ್ಟಸ್ಥಾನ ಪಡೆದುಕೊಂಡಿವೆ. ಅಲ್ಪಾಕ್ಷರಗಳಲ್ಲಿ ಮಹದರ್ಥವನ್ನು ತುಂಬಿ, ಪಂಡಿತ ಪಾಮರರ ಮನವನ್ನು ತನ್ನತ್ತ ಜಗ್ಗಿಕೊಂಡು ಅವರಿಬ್ಬರನ್ನೂ ತಲೆತೂಗಿಸುವ ಚಾತುರ್ಯವು ಸರ್ವಜ್ಞ ಕವಿಗೆ ಮೀಸಲಾಗಿರುವುದು. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ವಿಶೇಷವಾಗಿ ನುರಿತವರು ಸರ್ವಜ್ಞನ ಹೇಳಿಕೆಯ ಪದ್ಧತಿಯನ್ನು ಅನುಸರಿಸದಿರಲು ಶಕ್ಯವಿಲ್ಲ. ಪ್ರತಿಯೊಂದು ಮಾತೂ ತೂಕ ತಪ್ಪದಂತೆಯೂ ಎಚ್ಚರಿಸಲ್ಪಟ್ಟಿರುವದರಿಂದಲೇ ಈ ವಚನಗಳಿಗೆ ಮಹತ್ವ ಬಂದಿದೆ. ಈ ವಚನಗಳು ಲೌಕಿಕ ಪಾರಮಾರ್ಥಿಕ ಉಭಯ ಜ್ಞಾನಕೋಶದಂತಿರುವವು". ಚಿಕ್ಕದಾದರೂ ಚೊಕ್ಕದಾದ ಈ ಕೃತಿಯು ಸರ್ವಜ್ಞನ ವಚನಗಳಲ್ಲಿ ಒಡಮೂಡಿನಿಂತಿರುವ ವೀರಶೈವ ಧರ್ಮದ ತತ್ತ್ವಗಳನ್ನು ಮನೋಜ್ಞವಾಗಿ ವಿವರಿಸುತ್ತದೆ. ಮುಗ್ಧ ಮನಸ್ಸಿನ ಮೇಲೆ ಪರಿಣಾಮಕಾರಿ ಪ್ರಭಾವ ಬೀರುತ್ತದೆ. ಮಾತ್ರಿನುತಹ ಮೂರು ಸಾಲುಗಳಲ್ಲಿ ಧರ್ಮ ತತ್ತ್ವಗಳ್ನು ಸುಲಭವಾಗಿ, ಸರಳವಾಗಿ ಬಿಂಬಿಸುವದು ಸರ್ವಜ್ಞನ ಜಾಣ್ಮೆಯನ್ನು ಎತ್ತಿ ತೋರಿಸುತ್ತದೆ.

ಎಸ್. ಎಸ್. ಭೂಸರಡ್ಡಿ

## ಶುಭ ಸಂದೇಶ

ಸ್ವಧರ್ಮನಿಷ್ಠರೂ, ಶಿವಾದ್ವೈತಶಾಸ್ತ್ರವಿಶಾರದರೂ, ಸಾವಧಾನಪಾಕ್ಷಿಕ ಪತ್ರಿಕೆಯ ಸಂಪಾದಕರೂ, ಆಗಿರುವ ಪಂಡಿತ ನಾಗಭೂಷಣಶಾಸ್ತ್ರಿಗಳು ಕಳೆದ ೪೦ ವರ್ಷಗಳಿಂದಲೂ ನನಗೆ ತುಂಬಾ ಸ್ನೇಹಿತರು. ಇವರ ೭೫ ನೆಯ ಹುಟ್ಟುಹಬ್ಬದ ಸವಿನೆನಪಿಗಾಗಿ ಅಮೃತ ಮಹೋತ್ಸವವನ್ನು ಮಾಡುತ್ತಿರುವ ವಿಷಯ ತಿಳಿದು ಪರಮಾನಂದವಾಯಿತು. ಯಾರು ಸಮಾಜಸೇವೆಯನ್ನು ಮಾಡುತ್ತಾರೆಯೋ ಅವರಿಗೆ ಸಮಾಜ ಉಪಕೃತವಾಗಬೇಕು. ಇದು ಮಾನವಧರ್ಮ.

ಶ್ರೀಮಾನ್ ಶಾಸ್ತ್ರಿಗಳವರಿಗೆ ದೇವರು ದೀರ್ಘಾಯುರಾರೋಗ್ಯಭಾಗ್ಯಾದಿಗಳನ್ನು ಕೊಡಲೆಂದು ಹೃತ್ಪೂರ್ವಕ ಬೇಡಿಕೊಳ್ಳುತ್ತೇನೆ.

ಮೈಸೂರು

ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ
ಹಿರೇಮಠ ಬೋಳಲು

ನನಗೆ ಪಂಡಿತ ಪ್ರವರ ನಾಗಭೂಷಣ ಶಾಸ್ತ್ರಿಗಳವರ ಪರಿಚಯ ಬಹಳ ದಿನಗಳಿಂದ ಆಗಿದೆ. ಇವರ ಪಾಂಡಿತ್ಯ ವಿದ್ಯೆಗಳ ಆಳವನ್ನು ನನ್ನಿಂದ ತಿಳಿಯಲು ಸಾಧ್ಯವೇ ಇಲ್ಲ.

ಆದರೆ ಇವರಲ್ಲಿಯ ವಿನಯ, ಸೌಶೀಲ್ಯ ಸೌಜನ್ಯಗಳಿಗೆ ಅತಿಶಯವಾಗಿ ಮಾರು ಹೋಗಿದ್ದೇನೆ. ಇದು ಸುವರ್ಣಕ್ಕೆ ಸುವಾಸನೆ ಇದ್ದಷ್ಟು ಅಲೌಕಿಕವಾಗಿದೆ. ಇವರಿಂದ ನಮ್ಮ ಭಾರತ ಭೂಮಿ ಪಾವನವಾಗಿದೆ.

ಈಶ್ವರನು ಇವರಿಗೆ ಶತಾಯುಷ್ಯ ಆರೋಗ್ಯ, ಇತೋಪ್ಯತಿಶಯವಾದ ಕೀರ್ತಿ ಲಕ್ಷ್ಮಿ ಪ್ರಾಪ್ತಿ ಮಾಡಿಕೊಡಲೆಂದು ಅವರ ೭೫ನೇ ವರ್ಧಂತಿಯಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಧಾರವಾಡ
೧೫-೧೨-೮೧

ಪಂಡಿತ ಸೇವಕ
ವೆಂಕಟೇಶ ಕಟ್ಟಿ
ನಿವೃತ್ತ ಅ. ಇಂಜನಿಯರ್ ಧಾರವಾಡ

# ಅನುಭವ ವಿಶಾರದ

ಸಂಸ್ಕೃತಿ ಸಮ್ಪದ್ಪೂರ್ಣ ಸದ್ವಿಚಾರಗಳೇ ಮೈದಾಳಿ ನಿಂತಂತಿರುವ ಪಂಡಿತ ನಾಗಭೂಷಣ ಶಾಸ್ತ್ರಿಗಳವರು ತಮ್ಮ ಅಖಂಡ ಆಯುಷ್ಯವನ್ನೇ ವೀರಶೈವಧರ್ಮದ ಶ್ರೇಯೋಭಿವೃದ್ಧಿಗಳಿಗಾಗಿ ಮೀಸಲಾಗಿರಿಸಿರುವರು. ಶಾಸ್ತ್ರಿಗಳವರು ವೀರಶೈವಷಟ್ಸ್ಥಲ ಸಿದ್ಧಾಂತ ಪ್ರತಿಪಾದಕಗಳಾದ ಅನೇಕ ತತ್ತ್ವಗ್ರಂಥಗಳನ್ನು ಬರೆಯುವದಲ್ಲದೆ ೩-೪ ದಶಕಗಳಿಂದಲೂ ಸಾವಧಾನ ಪತ್ರಿಕಾಸಂಪಾದಕರಾಗಿ ಉದ್ಬೋಧಕ ಉತ್ತೇಜಕಗಳಾದ ವಿವಿಧ ಸಾಮಾಜಿಕ. ಧಾರ್ಮಿಕ ಲೇಖನಗಳ ಮುಖಾಂತರ ಸಮಾಜವನ್ನು ಜಾಗೃತ ಗೊಳಿಸುತ್ತಿರುವರು.

ಇವರಲ್ಲಿರುವ ನ್ಯಾಯ, ವ್ಯಾಕರಣ, ವೇದಾಂತ ಶಾಸ್ತ್ರಗಳಲ್ಲಿರುವ ಪ್ರಕಾಂಡ ಪಾಂಡಿತ್ಯವನ್ನು ಕಂಡೇ ಮಹಾಮಹಾಮೇಧಾವಿಗಳು ಇವರನ್ನು "ಶಿವಾದ್ವೈತ ಸಿದ್ಧಾಂತರತ್ನ" ಎಂಬ ಪದವೀದಾನ ಪೂರ್ವಕ ಗೌರವಿಸಿದರು. ಪಂ. ನಾಗಭೂಷಣ ಶಾಸ್ತ್ರಿಗಳವರು ವೀರಶೈವ ಸಮಾಜಭೂಷಣರಾಗಿ ರಾರಾಜಿಸುತ್ತಿರುವರು.

ಆದೇತಾನೆ ಕಾಶಿಯಿಂದಬಂದ ಪಂ. ಶಾಸ್ತ್ರಿಗಳವರು ಶಿವಯೋಗಸಾಧಕರಾದ ನಮಗೆ ಶಿವಯೋಗಮಂದಿರ ಸಂಸ್ಥೆಯಲ್ಲಿ ನ್ಯಾಯಶಾಸ್ತ್ರದ ಪಾಠವನ್ನು ಹೇಳುತ್ತಿದ್ದರು.

ಬೀಗಿ ಬೆಳೆದ ಗೊನೆಬಾಳೆಯಂತೆ ಆವಾಗಲೂ ವಿದ್ಯೆಯ ಭಾರದಿಂದ ಬಾಗಿನಡೆಯುವ ನಾಗಭೂಷಣಶಾಸ್ತ್ರಿಗಳವರಿಗೆ ಪರಶಿವನು ಆಯುರಾರೊಗ್ಯ ಕರುಣಿಸಲೆಂದು ಹೃತ್ಪೂರ್ವಕ ಪ್ರಾರ್ಥನೆ.

ಓಂಶಾಂತಿಃ

—ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು ತೆಲಸಂಗ ಹಿರೇಮಠ

# ಸೊಗಸಿನ ಬಾಳು-ಕೃತಿ ವಿವೇಚನೆ.

ಪಂಡಿತ ನಾಗಭೂಷಣ ಶಾಸ್ತ್ರಿಗಳು ಹೆಸರಾಂತ ಹಿರಿಯವಿದ್ವಾಂಸರು. ಸಂಸ್ಕೃತ ಹಾಗು ಕನ್ನಡ ಪ್ರಕಾಂಡ ಪಂಡಿತರು. "ಸಾವಧಾನ" ಪ್ರಕೆಯ ಸ್ಥಾಪಕ ಸಂಪಾದಕರಾಗಿ ೩೨ ವರ್ಷಗಳಿಂದ ಅಮೋಘ ಸೇವೆ ಸಲ್ಲಿಸುತ್ತ ಬಂದಿದ್ದಾರಲ್ಲದೆ ಅವರ ಮುಖಾಂತರ ಎಲ್ಲರಿಗೂ ಪರಿಚಿತರಾಗಿದ್ದಾರೆ. ಪತ್ರಿಕೆ ಸಂಪಾದನೆಯೊಂದಿಗೆ ಶರಣಸಾಹಿತ್ಯದ ಬಗೆಗೆ ಅಮೂಲ್ಯ ಗ್ರಂಥಗಳನ್ನು ರಚಿಸಿದ್ದಾರೆ, ಸಂಪಾದಿಸಿದ್ದಾರೆ. ಅವುಗಳಲ್ಲಿ ಬಸವಣ್ಣನವರ ಆದರ್ಶಜೀವನ, ಅಕ್ಕಮಹಾದೇವಿಯವರ ಆದರ್ಶ ಜೀವನ, ವೀರಶೈವ ತತ್ತ್ವಪ್ರವೇಶ, ಜೀವನಯಾತ್ರೆ, ಅನುಭವಮುದ್ರೆ, ಲಿಂಗಪೂಜಾ ವಿಧಾನ, ಸೊಗಸಿನಬಾಳು ಮೊದಲಾದ ಕೃಗಳ ರಚನೆಯಿಂದ ಮಾನವ ಜನಾಂಗದ ಉದ್ಧಾರಕ್ಕಾಗಿ ಶ್ರಮಿಸಿದ್ದಾರೆ. ಚನ್ನಬಸವಣ್ಣನವರ ವಚನಸಂಗ್ರಹ, ವಚನ ಸುಧೆ, ಮೈಲಾರಬಸವಲಿಂಗಶರಣರ-ಅಷ್ಟಾವರಣ-ಪಂಚಾಚಾರ-ಧರ್ಮಾಚಾರ-ಗುರುಬಸವನ ಸಪ್ತಕಾವ್ಯ-ಇವು ಅವರು ಸಂಪಾದಿಸಿದ ಕೆಲವು ಪ್ರಮುಖ ಕೃತಿಗಳು.

ಪ್ರಸ್ತುತ "ಸೊಗಸಿನಬಾಳು" ಕೃತಿಯು ೫೦ ವಿವಿಧ ಲೇಖನಗಳನ್ನೊಳ ಗೊಂಡುದುದಾಗಿದೆ. ಬದುಕಿನ ಉದ್ದೇಶವನ್ನು ತಿಳಿಯದೇ ಬದುಕುವುದು ಬದುಕೇ ಅಲ್ಲ. ಹುಟ್ಟು ಸಾವುಗಳನ್ನು ಸಾರ್ಥಕ ಮಾಡಬಲ್ಲ ಬಾಳೇ ನಿಜವಾದ ಬಾಳು. ಅಂಥ ಬಾಳನ್ನು ಸಾಧಿಸುವುದೊಂದು ಕಲೆ. ಆ ಬಾಳುವ ಕಲೆಯನ್ನು ವಿವಿಧ ವಿಷಯಗಳನ್ನೊಳಗೊಂಡ ಲೇಖನಗಳ ಮುಖಾಂತರ ತಿಳಿಯಪಡಿಸಿದ್ದಾರೆ.

ಇಡೀ ಮಾನವ ಕುಲಕ್ಕೇ ಸಂದೇಶವನ್ನೀಯುವ ನಾಲ್ಕು ಮಾತುಗಳನ್ನು ಅನುಸರಿಸಿದರೆ ಸಾಕು. ಆ ನಾಲ್ಕು ಮಾತುಗಳು ಈ ರೀತಿ ಇವೆ. ಅವುಗಳಲ್ಲಿ ಎರಡು ಮಾತು ನೆನಪಿಡಲು ಮತ್ತು ಎರಡು ಮಾತು ಮರೆಯಲು.

೧] ದೇವ ಧ್ಯಾನ.

೨] ನನಗೆ ಮರಣವಿದೆ. ಇವು ನೆನಪಿಡಲು. ಇನ್ನು ಮರೆಯಲು.

೧] ನಾನು ಅನ್ಯರಿಗೆ ಮಾಡಿದ ಉಪಕಾರ.

೨] ಅನ್ಯರು ನನಗೆ ಮಾಡಿದ ಅಪಕಾರ.

ಈ ಎರಡು ಮಾತುಗಳನ್ನು ನೆನಪಿಡುವುದರಿಂದ ಎರಡು ಮಾತುಗಳನ್ನು ಮರೆಯುವುದರಿಂದಾಗುವ ಪರಿಣಾಮ ಕುರಿತು ಹೀಗೆ ಹೇಳಿದ್ದಾರೆ.

ದೇವರ ಅಸ್ತಿತ್ವದ ಪ್ರಜ್ಞೆಯಿಂದ ಜೀವನವು ಸೊಗಸನ್ನು ಪಡೆಯುತ್ತದೆ. ಮರಣದ ನೆನಪು ಇದ್ದರೆ ವೈರಾಗ್ಯಭಾವನೆ ಜಾಗ್ರತವಾಗಿ ಹೀನ ವಿಷಯಗಳ

ಬಗ್ಗೆ ಆಸಕ್ತಿ ಕಡಿಮೆಯಾಗಿ ಜೀವನ ಕ್ಷಣಭಂಗುರವೆಂದು ತಿಳಿದ ನಾವು ಇದ್ದ ಸಮಯವನ್ನೇ ಒಳ್ಳೆಯದರಲ್ಲಿ ಕಳೆಯಬೇಕೆಂಬ ತಿಳುವಳಿಕೆ ಯಾವಾಗಲೂ ಇರುತ್ತದೆ.

ಇನ್ನೊಬ್ಬರಿಗೆ ಮಾಡಿದ ಪರೋಪಕಾರದ ನೆನಪಿಟ್ಟರೆ ಅದು ಅಹಂಕಾರಕ್ಕೆ ಎಡೆಗೊಡುತ್ತದೆ. ಅದನ್ನು ಮರೆಯುವುದರಿಂದ ಅಹಂಭಾವ ತೊಲಗಿಹೋಗುವುದು, ಸತ್ಕಾರ್ಯಕ್ಕೆ ಎಡೆಕೊಡುವುದು. ಇನ್ನೊಬ್ಬರು ನಮಗೆ ಮಾಡಿದ ಅಪಕಾರವನ್ನು ಮರೆಯುವುದರಿಂದ ಕ್ರೋಧ ನಾಶವಾಗಿ ಸಾಧಾರಣ ಜೀವನ ದೈವೀಜೀವನವಾಗಲು ಅನುಕೂಲವಾಗುತ್ತದೆ. ಇದರಂತೆ ಸರ್ವರೂ ನಿತ್ಯಜೀವನದಲ್ಲಿ ಇವುಗಳನ್ನು ಅಳವಡಿಸಿಕೊಳ್ಳಬಹುದು.

ಉದ್ಯೋಗ ಮತ್ತು ಕಾಯಕ ಈ ಪದಗಳ ಅರ್ಥ ಮೇಲ್ನೋಟಕ್ಕೆ ಒಂದೇಯಾಗಿ ಕಂಡುಬಂದರೂ ಅವುಗಳ ಇಂಗಿತಾರ್ಥ ಭಿನ್ನವಾಗಿವೆ ಎಂಬುದನ್ನು ಈ ಕೆಳಗಿನ ವಿಶ್ಲೇಷಣೆಯಿಂದ ಅರಿಯಬಹುದು.

ತನಗಾಗಿ ತನ್ನ ರಕ್ತ ಸಂಬಂಧಿಗಳಿಗಾಗಿ ಮಾಡುವುದು ಉದ್ಯೋಗ. ಗುರು-ಲಿಂಗ-ಜಂಗಮರಿಗಾಗಿ; ಸಮಾಜದ ನಾಡಿನ ಕಲ್ಯಾಣಕ್ಕಾಗಿ ಎಂದು ಮಾಡುವುದು ಕಾಯಕ. ಉದ್ಯೋಗದಲ್ಲಿ ಸ್ವಾರ್ಥಭಾವ. ಕಾಯಕದಲ್ಲಿ ಪರಾರ್ಥ ಭಾವ. ದೇಹಾತ್ಮವಾದಿಗಳು ಮಾಡುವುದು ಉದ್ಯೋಗ, ಅಧ್ಯಾತ್ಮವಾದಿಗಳು ಮಾಡುದು ಕಾಯಕ. ಇವೆರಡರ ಎಳೆಯನ್ನು ಬಿಡಿಸುವಂತಹ ಅವರ ವಿದ್ವತ್ತು ಗೊತ್ತಾಗುವುದು.

ಈ ಕೃತಿಯಲ್ಲಿ ವ್ಯಷ್ಟಿ- ಸಮಷ್ಟಿ ಜೀವನದ ಅಪಾರ ಅನುಭವದ ಆದರ್ಶವಿದೆ, ಅಮೃತವಿದೆ. ಜೀವನಾನುಭವವೇ ಇವರ ಕೃತಿಯ ಸಾಮಗ್ರಿ ಸಂಪತ್ತು. ನಿರಾಶೆಯಲ್ಲಿಯೆ ಆಶಾಜ್ಯೋತಿಯನ್ನು ಹೊತ್ತಿಸುವ ಈ ಕೃತಿ ಜೀವನದರ್ಶನ ದೀಪ್ತಿಯಿಂದ ನಿರಾಡಂಬರ ನಿರೂಪಣೆಯನ್ನೊಳಗೊಂಡ ಜನಸಾಮಾನ್ಯರಿಗೂ ಅರ್ಥವಾಗುವಂಥ ಸುಲಭವಾದ ಶೈಲಿಯಲ್ಲಿ ರಚನೆಗೊಂಡು ಎರಡನೆಯ ಆವೃತ್ತಿ ಕಂಡಿರುವುದು ಅದರ ಜನಾದರಣೀಯವನ್ನು ಎತ್ತಿ ತೋರಿಸುತ್ತದೆ.

ಜ್ಞಾನವೃದ್ಧರೂ, ಅನುಭಾವಿಗಳೂ ಪ್ರಗಲ್ಭ ಪಂಡಿತರೂ ಆದ ನಾಗಭೂಷಣ ಶಾಸ್ತ್ರಿಗಳವರು ಎಲೆಮರೆಯ ಕಾಯಿಯಂತೆ ಸಾಹಿತ್ಯ ಸೇವೆಸಲ್ಲಿಸುತ್ತ ಬಂದಿದ್ದಾರೆ. ಓದುಗರಿಗೆ ಅವರ ಈ ಕಲಿತ ಜೀವನ ಸಫಲತೆಗೆ ಮಾರ್ಗದರ್ಶನ ಸೂತ್ರಗಳನ್ನು ನೀಡುತ್ತದೆ. ಇನ್ನೂ ಈ ಬಗೆಯ ಹಲವಾರು ಮುತ್ತಿನಂತಹ ಕೃತಿ ಕುಸುಮಗಳು ಅವರ ಪಕ್ವಲೇಖನಿಯಿಂದ ಹೊರಬರಲಿ, ಕನ್ನಡ ಸಾಹಿತ್ಯ ಸರಸ್ವತಿಯ ಮುಡಿಯಲ್ಲಿ ಸೇರಲೆಂದು ಬಯಸುವೆ.

— ಎಸ್. ವ್ಹಿ. ಅಂಬ್ಯಾನಗೌಡರ

# ಭಾರತೀಯ ದರ್ಶನ ಸಮೀಕ್ಷೆ-ಭಾಗ ೧

ಲೇಖಕರು : ಪಂ. ನಾಗಭೂಷಣ ಶಾಸ್ತ್ರಿಗಳವರು
ಮೃತ್ಯುಂಜಯ ಪ್ರಕಾಶನ-೩

ಪ್ರಕಾಶಕರು : ಶ್ರೀ ಎಸ್. ಬಸವರಾಜ, ಮೃತ್ಯುಂಜಯ ನಿಲಯ,
ಧಾರವಾಡ
ಮಹಾಂತ ಮುದ್ರಣಾಲಯ, ಧಾರವಾಡ-೩, ೧೯೭೫
ಪುಟ ೧೨೦, ಬೆಲೆ : ರೂ. ೧೦-೦೦

"ಭಾರತೀಯ ದರ್ಶನ ಸಮೀಕ್ಷೆ" ಯನ್ನು ಪಂ. ನಾಗಭೂಷಣ ಶಾಸ್ತ್ರಿಗಳವರು ಆಧ್ಯಾತ್ಮಿಕ, ವೈಜ್ಞಾನಿಕ, ವ್ಯಾವಹಾರಿಕ ಒರೆಗಲ್ಲುಗಳಿಗೆ ಹಚ್ಚಿ ತಿಕ್ಕಿ ಅವುಗಳ ನಿಜಬಣ್ಣ, ನಿಜಮೌಲ್ಯಗಳನ್ನು ತಿಳಿಸಲು ಪ್ರಯತ್ನಿಸಿರುವರು. ಈಶ್ವರ, ಜೀವ, ಜಗತ್ತು ಈ ತ್ರಿಕೂಟಗಳ...ಒಡಪನ್ನು ಬಿಡಿಸುವ ಪ್ರಯತ್ನದಲ್ಲಿ ಹುಟ್ಟಿದ ಹಲವು ದರ್ಶನಗಳನ್ನು ಪಂ. ನಾಗಭೂಷಣ ಶಾಸ್ತ್ರಿಗಳವರು ಸರಿಯಾಗಿ ಗ್ರಹಿಸಿ ಸರಳ ಶೈಲಿಯಲ್ಲಿ ಸಾಮಾನ್ಯನಿಗೂ ತಿಳಿಯುವಂತೆ ಪ್ರಯತ್ನಿಸಿದುದು ಅವರ ಪಾಂಡಿತ್ಯ, ಆಳವಾದ ಅಭ್ಯಾಸ,ಸಂಶೋಧನಾ ಪರಿಣತಿಗಳನ್ನು ಎತ್ತಿತೋರಿಸುವುದು. ಇದೊಂದೇ ಕೃತಿಸಾಕು ಅವರನ್ನು ಸಾಹಿತ್ಯ ಪ್ರಪಂಚದಲ್ಲಿ ಅಮರರನ್ನಾಗಿಮಾಡಲು.

"ವಿಜ್ಞಾನಿಗಳಿಗೆ ತಿಳಿಯದ ಸಂಗತಿಯು ಆತ್ಮಜ್ಞಾನಿಗಳಿಗೆ ಸುಲಭವಾಗಿಯೇ ತಿಳಿದು ಬರುವುದು" (ಪು.೧೧) ಎಂಬುದು ಅವರ ಮತ.

ಇಲ್ಲಿ ಭಾರತೀಯ ಎಲ್ಲ ಮುಖ್ಯ ದರ್ಶನಗಳನ್ನು ಒಂದೊಂದನ್ನಾಗಿ ವಿವೇಚಿಸಿ ವಿಮರ್ಶಿಸಿರುವರು. ಅವುಗಳ ಉತ್ಪತ್ತಿ, ಬೆಳವಣಿಗೆ, ಅವುಗಳಲ್ಲಿಯ ತಿರುಳು ಹಾಗು ಅವುಗಳಲ್ಲಿಯ ಗುಣಾವಗುಣಗಳನ್ನು ವಿಶದೀಕರಿಸಿರುವರಲ್ಲದೆ ಅಲ್ಲಲ್ಲಿ ಅವುಗಳ ತುಲನಾತ್ಮಕ ಅಭ್ಯಾಸವನ್ನು ಕೊಟ್ಟಿರುವರು. ಒಟ್ಟಿನಲ್ಲಿ ಭಾರತೀಯ ದರ್ಶನಗಳ ಹೂಗೊಂಚಲನ್ನು ಪ್ರತ್ಯಕ್ಷವಾಗಿ ಇಟ್ಟಿರುವರು.

"ಭಾರತೀಯ ದರ್ಶನ ಸಮೀಕ್ಷೆ ಒಟ್ಟಿನಲ್ಲಿ ಒಂದು ಮೇರು ಕೃತಿ. ರಾಜ್ಯ ಕೇಂದ್ರ ಎಲ್ಲ ಅಕ್ಯಾಡೆಮಿಗಳು ಇದರಲ್ಲಿಯ ಗುಣ ಗ್ರಹಿಸಿ ಪುರಸ್ಕಾರ ನೀಡಬೇಕು.

ಇಷ್ಟೇ ಅಲ್ಲ ಇವರ ಮುಂದಿನ ಭಾಗಗಳು ತ್ವರಿತಗತಿಯಿಂದ ಬೆಳಕು ಕಂಡು ಮಾನವತೆಗೆ ದಾರಿತೋರಿಸಲು ನೆರವು ನೀಡಬೇಕು. ಕಾಲೇಜ ಮತ್ತು ವಿಶ್ವವಿದ್ಯಾಲಯಗಳಲ್ಲಿ ಇದನ್ನು ಪಠ್ಯಪುಸ್ತಕವನ್ನಾಗಿ ಮಾಡಿ ಯುವಕರಿಗೆ ಭಾರತೀಯ ದರ್ಶನಗಳ ಜ್ಞಾನನೀಡಿ ಅವರ ಆತ್ಮೋದ್ಧಾರ ಮಾಡುವಲ್ಲಿ ಸಂಬಂಧಪಟ್ಟವರು ಬೇಗ ಈ ದಿಶೆಯಲ್ಲಿ ಕಾರ್ಯಪ್ರವೃತ್ತರಾಗಬೇಕೆಂದು ನಮ್ಮ ವಿನಂತಿ. ಅಂದರೆ ಮಾತ್ರ ಲೇಖಕರ ಶ್ರಮ ಸಫಲವಾಗುವುದು.

ಚಿತ್ತರಗಿ ಇಲಕಲ್ಲ ಪೀಠದ ಲಿಂ, ಶ್ರೀ ವಿಜಯ ಮಹಾಂತ ಶಿವಯೋಗಿಗೆ ಈ ಸಮೀಕ್ಷೆಯ ಪುಷ್ಪವನ್ನು ಆರ್ಪಿಸಿದ್ದು ಎಷ್ಟು ಸಮಂಜಸ.

— ಡಾ|| ವಸಂತ ಪಾಟೀಲ

---

● **ಮಾನವಿಕ ಭಾರತಿ**, ಸಂಪುಟ ೧ ಸಂಚಿಕೆ : ೧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ಜನೇವರಿ ೧೯೭೭ ಅದರ ಕೃಪೆಯಿಂದ ಅದರಲ್ಲಿಯ ಕೆಲ ಭಾಗಗಳನ್ನು ಮಾತ್ರ ಇಲ್ಲಿ ಆಯ್ಕೆಮಾಡಲಾಗಿದೆ.

# ಪಂಡಿತ ನಾಗಭೂಷಣಶಾಸ್ತ್ರಿಗಳವರಿಗೆ

ಅರ್ಪಿಸಿದ—

# ಬಿನ್ನವತ್ತಳೆ

ಪಂಡಿತ ನಾಗಭೂಷಣ ಶಾಸ್ತ್ರಿಗಳೇ !

ರಾಯಚೂರು ಜಿಲ್ಲಾ ಯಲಬುರ್ಗಿ ತಾಲೂಕ ಸಂಗನಾಳ ಗ್ರಾಮದಲ್ಲಿ ಪರಂಪರಾನುಗತವಾಗಿ ಶಾಸ್ತ್ರಿಗಳಾಗುತ್ತ ಬಂದ ಶಾಸ್ತ್ರೀಮಠದ ಸದ್ಧರ್ಮಿಗಳಾದ ತಾಯಿ ಲಿಂಗಮ್ಮ ತಂದೆ ಪರ್ವತರಾಜರ ಪುಣ್ಯೋದರದಲ್ಲಿ ದಿನಾಂಕ ೮-೪-೧೯೦೬ ನೆಯ ಇಸ್ವಿಯಲ್ಲಿ ಜನಿಸಿ, ತಮ್ಮ ನಡೆನುಡಿಗಳಿಂದ ಪಾಂಡಿತ್ಯದಿಂದ ತಮ್ಮ ಹೆಸರಿನ ಜೊತೆಗೆ ತಾಯಿ-ತಂದೆಗಳ ಹೆಸರೂ ನಿರಾತಂಕವಾಗಿ ಬೆಳಗುವಂತೆ ಮಾಡಿದಿರಿ.

ರೋಣ ತಾಲೂಕ ನಿಡಗುಂದಿ ಗ್ರಾಮದಲ್ಲಿ ಕನ್ನಡ ವಿದ್ಯಾಭ್ಯಾಸ ಮುಗಿಸಿಕೊಂಡು ಹಾಲಕೆರೆಯ ಪರಮಪೂಜ್ಯ ಶ್ರೀ ಮನ್ನಿರಂಜನ ಪ್ರಣವಸ್ವರೂಪಿ ಅನ್ನದಾನ ಮಹಾಸ್ವಾಮಿಗಳ ಕೃಪಾಛತ್ರದಲ್ಲಿ ಸಂಸ್ಕೃತ ಪ್ರಾಥಮಿಕಾಭ್ಯಾಸವನ್ನು ಹಾಲಕೆರೆಯಲ್ಲಿ ಪೂರೈಸಿಕೊಂಡು ಮಹಾಸ್ವಾಮಿಗಳ ಅಪ್ಪಣೆಯ ಪ್ರಕಾರ ಉಚ್ಚಶಿಕ್ಷಣಕ್ಕಾಗಿ ೧೯೨೫ ರಲ್ಲಿ ಕಾಶೀ ಕ್ಷೇತ್ರಕ್ಕೆ ಹೋಗಿ ಸಾಹಿತ್ಯ-ನ್ಯಾಯ-ವೇದಾಂತ-ಶಾಸ್ತ್ರಗಳಲ್ಲಿ ಸಾಕಷ್ಟು ಪ್ರವೀಣತೆಯನ್ನು ಪಡೆದು ೧೯೩೧ ರಲ್ಲಿ ತಿರುಗಿ ಮಾತೃಭೂಮಿಗೆ ಹಿಂದಿರುಗಿ ಬಂದಿರಿ.

ಶಾಸ್ತ್ರಾರ್ಥಕೋವಿದರೇ,

ತಾವು ಕಾಶಿಯಲ್ಲಿದ್ದಾಗಲೇ ೧೯೩೦ ರಲ್ಲಿ ಶ್ರೀ ಜಗದ್ಗುರು ಜಯದೇವವಾಡಿಯಲ್ಲಿ ಎಲ್ಲ ವಿದ್ವಾಂಸರ ಸಮಕ್ಷಮದಲ್ಲಿ ಸಿದ್ಧಾಂತ ಶಿಖಾಮಣಿ ಪ್ರವಚನಮಾಡಿ ಎಲ್ಲರ ಮೆಚ್ಚುಗೆಪಡೆದಿರಿ. ಇಲ್ಲಿಗೆ ಬಂದ ಮೇಲೆ ೧೯೩೨ ರಿಂದ ತಮ್ಮ ಅಮೋಘವಾದ ಪಾಂಡಿತ್ಯ-ಅನುಭವ ವಕ್ತೃತ್ವಕಲೆಗಳಿಂದ ಕೂಡಿದ ಶಿವಾನುಭವ ಪ್ರವಚನ ವ್ಯಾಖ್ಯಾನ ಗಳಿಂದ ಸೇವೆಸಲ್ಲಿಸುತ್ತ ಬರುತ್ತಿರುವಿರಿ.

ಗಣ್ಯಸಾಹಿತಿಗಳೇ,

೧೯೪೩ ರಲ್ಲಿ ಅಖಿಲಭಾರತ ವೀರಶೈವ ವಿದ್ಯಾಪೀಠವನ್ನು ಸ್ಥಾಪಿಸಿ ಅದರ ಕಾರ್ಯಾಧ್ಯಕ್ಷರಾಗಿ ೧೮ ವರ್ಷಗಳ ವರೆಗೆ ತಾವು ಗೈದ ಸಾಹಿತ್ಯಸೇವೆಯು ಚಿರಸ್ಮರಣೀಯವಾಗಿದೆ. ಆದರಿಂದ ಶಿವಶರಣರ ಸಾಹಿತ್ಯ-ತತ್ತ್ವಗಳು ಎಲ್ಲೆಡೆಯಲ್ಲಿ ಎಲ್ಲ ಕೋಮಿನವರಲ್ಲಿ ವಿಶೇಷ ಪ್ರಸಾರವಾಗಿ ಜನರ ಗೌರವಾಭಿಮಾನಗಳಿಗೆ ಪಾತ್ರವಾಗುವಂತಾದವು.

ಅಣ್ಣನ ಆದರ್ಶಜೀವನ, ಅಕ್ಕನ ಆದರ್ಶಜೀವನ, ವೀರಶೈವತತ್ತ್ವಪ್ರವೇಶ, ಜೀವನಯಾತ್ರೆ, ಅಷ್ಟಾವರಣ, ಪಂಚಾಚಾರ, ಧರ್ಮಾಚಾರ ಮೊದಲಾದ ಚಿಕ್ಕ ಚಿಕ್ಕ ಪುಸ್ತಕಗಳನ್ನು ಬರೆದು ಸಂಗ್ರಹಿಸಿ ಜನಜಾಗ್ರತಿಯನ್ನುಂಟು ಮಾಡಿರುವಿರಿ. ವೀರಶೈವ ತತ್ತ್ವಪ್ರವೇಶ ಇದು ಮರಾಠಿ ಭಾಷೆಗೆ ಪರಿವರ್ತನೆಯಾಗಿರುವದು ತಮ್ಮ ಲೇಖದ ಜನಮೆಚ್ಚುಗಗೆ ನಿದರ್ಶನವಾಗಿದೆ.

ಶಿವಾನುಭವ ತಜ್ಞರೇ !

ಸಿದ್ಧಾಂತಶಿಖಾಮಣಿ, ಶತಕತ್ರಯ, ಶಿವಾನುಭವಸೂತ್ರ, ಶೂನ್ಯಸಂಪಾನೆ, ಕಲ್ಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ, ಸಿದ್ದೇಶ್ವರ ವಚನ, ಅನುಭವ-ಸಾರ ಇವೇ ಮೊದಲಾದ ಗಹನ ಮತ್ತು ಗಡಚಾದ ಮಹತ್ವ ಗ್ರಂಥರತ್ನಗಳಲ್ಲಿ ಅಡಕವಾಗಿರುವ ಅಮೌಲ್ಯ ಸಾರಾಮೃತವನ್ನು ಮಥಿಸಿ ತೆಗೆದು ವಿವಿಧ ಗ್ರಂಥಾಧಾರಗಳಿಂದ ಸರಸವಾದ ಉಪಮಾನ-ಉದಾಹರಣೆಗಳಿಂದ ತಿರುಳ್ಗನ್ನಡವಲ್ಲಿ ಎಲ್ಲರಿಗೂ ಸುಲಭವಾಗಿ ತಿಳಿಯುವಂತೆ ಸವಿಯುವಂತೆ ಪ್ರವಚನ ಮಾಡುವ ತಮ್ಮ ಕಲೆಯು ವಿನೂತನವಾಗಿದೆ.

ಪಂಡಿತ ಮಾನ್ಯರೇ !

ತಾವು ಬೆಂಗಳೂರು ಮೈಸೂರುಗಳಲ್ಲಿರುವ ಚಾಮರಾಜ ಸಂಸ್ಕೃತ ಕಾಲೇಜ, ಮಹಾರಾಜ ಸಂಸ್ಕೃತ ಕಾಲೇಜುಗಳಲ್ಲಿ ನಡೆಯುವ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ವಿದ್ಯಾರ್ಥಿಗಳ ಪರೀಕ್ಷಕರಾಗಿ ೫-೬ ವರುಷಗಳವರೆಗೆ ಕೆಲಸ ಮಾಡಿದುದು ತಮ್ಮ ಪಾಂಡಿತ್ಯದ ಹಿರಿಮೆಯ ದ್ಯೋತಕವಾಗಿದೆ.

ನುರಿತ ಸಂಪಾದಕರೇ,

೧೯೪೭ ನೇ ಸಾಲಿನಲ್ಲಿ ಧಾರವಾಡ ತ್ರಿವಿಧದಾಸೋಹಮೂರ್ತಿಗಳಾದ ಶ್ರೀಮನ್ನಿರಂಜನ ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರ ಅಪ್ಪಣೆಯ ಮೇರೆಗೆ ಅಖಿಲಭಾರತ ಶಿವಾನುಭವ ಸಂಸ್ಥೆಯ ಮುಖಪತ್ರಿಕೆಯಾದ "ಸಾವಧಾನ" ಪತ್ರಿಕೆಯ

ಸಂಪಾದಕರಾಗಿ ಶಿವಾನುಭವಪ್ರಸಾರಕಾರ್ಯವನ್ನು ಉತ್ತಮರೀತಿಯಿಂದ ನಡೆಸುತ್ತ ಬಂದಿರುವಿರಿ, ಬರುತ್ತಿವಿರಿ.

ತಾವು ಅಖಿಲಭಾರತ ಶಿವಾನುಭವ ಸಂಸ್ಥೆಯ ಕಾರ್ಯಕಾರಿಮಂಡಳದಲ್ಲಿ, ಪರೀಕ್ಷಾಮಂಡಳದಲ್ಲಿ, ಮತ್ತು ಅಖಿಲಭಾರತ ವೀರಶೈವ ಮಹಾಸಭೆಯ ಸ್ಥಾಯಿ ಸಮಿತಿಯಲ್ಲಿ ಸದಸ್ಯರಾಗಿ ಸೇವೆಸಲ್ಲಿಸುತ್ತ ಬರುತ್ತಿರುವಿರಿ. ಸೇವೆಸಲ್ಲಿಸಬೇಕೆನ್ನುವವರಿಗೆ ಮಾರ್ಗದರ್ಶಕರಾಗಿರುವಿರಿ.

ಹೀಗೆ ಬಹು ಮುಖವಾಗಿ ಬಹುದಿನಗಳಿಂದ ಸೇವೆಸಲ್ಲಿಸಿದ-ಸಲ್ಲಿಸುತ್ತಿರುವ ತಾವು-ಹುಟ್ಟಿದ ವಂಶಕ್ಕೆ ಭೂಷಣರಾಗಿ, ಬೆಳೆದಸಮಾಜಕ್ಕೆ ಅಲಂಕಾರ ಪ್ರಾಯರಾಗಿ, ಗುರು-ಲಿಂಗ-ಜಂಗಮರಲ್ಲಿ ನಿಷ್ಕಾಮಸೇವಾಸಕ್ತರಾಗಿ, ವಿನಯಸದಾಚಾರ ಸದ್ಗುಣಗಳಿಂದ ವಿಭೂಷಿತರಾಗಿ ಎಲ್ಲರಿಗೂ ಬೇಕಾಗಿರುವ ತಮ್ಮಗುಣಗಳಿಗೆ ಲುಬ್ಧರಾಗಿ-ಮುಗ್ಧರಾಗಿ ತಮಗೆ ನಮ್ಮ ಶಿವಾನುಭವ ಸಂಘದ ಸತ್ಕಾರಸಮಿತಿಯ ವತಿಯಿಂದ ಇದೇ ಬಸವಜಯಂತಿಯ ಸುಮುಹೂರ್ತದಲ್ಲಿ "ಶಿವಾದ್ವೈತ ಸಿದ್ಧಾಂತ ರತ್ನ" ಎಂಬ ಪ್ರಶಸ್ತಿಯನ್ನು ಸುವರ್ಣಪದಕವನ್ನು ಮತ್ತು ನಿಧಿಯನ್ನು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳವರ ಅಮೃತಹಸ್ತದಿಂದ ತಮಗೆ ಸಮರ್ಪಿಸಲು ನಮಗೆ ಆನಂದ ಮತ್ತು ಅಭಿಮಾನವೆನಿಸುತ್ತದೆ.

ಶ್ರೀ ಬಸವಾದಿ ಪ್ರಮಥರು, ಪ್ರಭು ಮುಂತಾದ ಜಂಗಮರು ಶ್ರೀ ರೇಣುಕಾಚಾರ್ಯರು, ತಮಗೆ ಆಯುರಾರೋಗ್ಯ ಭಾಗ್ಯ ಸಂಪದಗಳನ್ನಿತ್ತು ತಮ್ಮಿಂದ ಇನ್ನೂ ಹೆಚ್ಚು ಹೆಚ್ಚಿನ ಸಮಾಜಸೇವೆ ಸಲ್ಲುವಂತೆ ಅನುಗ್ರಹಿಸಲೆಂದು ಬೇಡಿಕೊಂಡು ತಮಗೆ ಅತ್ಯಂತ ಪ್ರೇಮಾದರಪೂರ್ವವಾಗಿ ಈ ಬಿನ್ನವತ್ತಳೆಯನ್ನು ಅರ್ಪಿಸಿದ್ದೇವೆ.

ತಮ್ಮ

ಗದಗ
ಬಸವಜಯಂತಿ,
೦೮—೫—೧೯೬೧

'ಶಿವಾನುಭವ ಸಂಘ'ದ
ಸತ್ಕಾರ ಸಮಿತಿಯ ಅಧ್ಯಕ್ಷರು,
ಗೌ. ಕಾರ್ಯದರ್ಶಿ ಮತ್ತು ಸದಸ್ಯರು.

ಶ್ರೀ ಮನ್ನಿರಂಜನ ಜಗದ್ಗುರು ಶ್ರೀ ಶಿವಲಿಂಗೇಶ್ವರ
ಮಹಾಸ್ವಾಮಿಗಳು ಸಂಸ್ಥಾನಮಠ, ನಿಡಸೋಸಿ
ಅವರ ದಿವ್ಯ ಸನ್ನಿಧಾನದಲ್ಲಿ
ಪಂಡಿತ ನಾಗಭೂಷಣ ಶಾಸ್ತ್ರಿಗಳವರಿಗೆ
ಅ ರ್ಪಿ ಸಿ ದ

# ಸನ್ಮಾನ ಪತ್ರ

**ಸದ್ವಿನಯ ಸೌಜನ್ಯ ಸಂಪನ್ನರೇ,**

ಸದಾಶಿವನ ಒಲುಮೆಯೇ ಸದ್ವಿನಯ ಮೂರ್ತಿಯಾಗಿ ರೂಪುಗೊಂಡಿದೆಯೆಂಬಂತೆ ನೀವು 'ಸಂಗನಾಳ' ಗ್ರಾಮದಲ್ಲಿ ಸುಸಂಸ್ಕೃತ ದಂಪತಿಗಳ ಸುಕುಮಾರರಾಗಿ ಉದಯವಾದಿರಿ. ಸುಗಂಧ ಬಂಧುರದಂತೆ ಹುಟ್ಟುತ್ತಲೇ ಪರಿಮಳ ಬೀರಿದಿರಿ. ಸತ್ಯ ಸದಾಚಾರ ಸಂಪನ್ನರಾಗಿ ಶ್ರೀಗುರು ಕರುಣೆಯನ್ನು ಪಡೆದು, ವಿದ್ಯಾಭ್ಯಾಸದಲ್ಲಿ ಮಗ್ನರಾದಿರಿ. ಸಿರಿಗನ್ನಡದ ಅಭ್ಯಾಸವನ್ನು ಪೂರ್ಣವಾಗಿ ಮಾಡಿದರೂ ನಿಮ್ಮ ಜ್ಞಾನದಾಹ ಹಿಂಗಲಿಲ್ಲ. ವಿಶ್ವೇಶ್ವರನ ದಿವ್ಯಸನ್ನಿಧಾನದಿಂದ ಪುನೀತವಾದ ಕಾಶಿಗೆ ವಿದ್ಯಾರ್ಜನೆಗಾಗಿಯೇ ತೆರಳಿದಿರಿ.

**ಅಧ್ಯಯನ-ಅಧ್ಯಾಪನಶೀಲರೇ,**

ಸನಾತನ ಕಾಲದಿಂದಲೂ ಕಾಶಿಯು ಸಂಸ್ಕೃತಾಭ್ಯಾಸಕ್ಕೆ ವಿಖ್ಯಾತವಾಗಿ, ಪ್ರಕಾಂಡ ಪಂಡಿತರ ನೆಲೆವೀಡಾಗಿ ಮಹಾಜ್ಞಾನಿಗಳ ಮತ್ತು ದಿವ್ಯಾನುಭಾವಿಗಳ ತವರಾಗಿದೆ. ಅಂತಹ ಪ್ರಶಸ್ತ ಕಾಶಿಯಲ್ಲಿ ಪ್ರತಿಭಾವಂತರಾದ ಪಂಡಿತರ ಸಾನಿಧ್ಯದಲ್ಲಿ ಅಧ್ಯಯನ ಮಾಡಿದಿರಿ. ವ್ಯಾಕರಣ ಮತ್ತು ಭಾರತೀಯ ದರ್ಶನಗಳನ್ನು ಪ್ರಗಲ್ಭ ಪಂಡಿತರ ನೆರವಿನಿಂದ ಆಳವಾಗಿ ಅಭ್ಯಸಿಸಿ, ಪಂಡಿತರ ಪ್ರಶಂಸೆಗೆ ಪಾತ್ರರಾದಿರಿ.

ಸ್ಥಳಗಳಲ್ಲಿ "ಸಿದ್ಧಾಂತ ಶಿಖಾಮಣಿ"ಯ ಬಗ್ಗೆ ಪ್ರವಚನಮಾಡಿ ಅಲ್ಲಿಯ ಜನತೆಗೆ ವೀರಶೈವ ಧರ್ಮದ ಹಿರಿಮೆಯನ್ನರುಹಿದಿರಿ. ಹೀಗೆ ಬಾಲ್ಯದಿಂದಲೂ ಅಧ್ಯಯನ ಮತ್ತು ಅಧ್ಯಾಪನಗಳು ನಿಮ್ಮ ಪಕ್ಷಶುದ್ಧ ಕಾರ್ಯಗಳಾಗಿವೆ.

ಸಾಹಿತ್ಯ ಸಂಸ್ಕೃತಿ ಪ್ರಸಾರಕರೇ,

ಸಾಹಿತ್ಯ ಮತ್ತು ಸಂಸ್ಕೃತಿಯ ವರ್ಧನೆಗಾಗಿ ತ್ರಿಕರಣಪೂರ್ವಕವಾಗಿ ದುಡಿಯ ಬೇಕೆಂಬ ದೃಢಾಭಿಪ್ರಾಯದಿಂದ ಮಾತೃಭೂಮಿಗೆ ಮರಳಿದ ನಿಮ್ಮ ಮೇಲೆ, ಹಾಲಕೆರೆಯ ಶ್ರೀ ನಿ. ಪ್ರ. ಸ್ವ. ಅನ್ನದಾನ ಮಹಾಸ್ವಾಮಿಗಳವರ ದಿವ್ಯದೃಷ್ಟಿ ಬಿದ್ದು, ಆ ಓದ್ಯಸೋಟ ನಟ್ಟೈಸಿ ಆ ಮಠದಲ್ಲಿಯೇ ವೀರಶೈವ ವಿದ್ಯಾಪೀಠವನ್ನು ಸಂಸ್ಥಾಪಿಸಿದಿರಿ. ಅದು ಜ್ಞಾನಪಿಪಾಸುಗಳ ಹಸಿವನ್ನು ಹಿಂಗಿಸುವ ತಾಣವಾಯಿತು. ದೇಶದ ಎಲ್ಲೆಡೆಯಿಂದ ವಿದ್ಯಾರ್ಥಿಗಳು ಸಾಧಕರು ಆಗಮಿಸಿ ನಿಮ್ಮ ಅಧ್ಯಾಪನದಿಂದ ಕೃತಾರ್ಥರಾದರಲ್ಲದೆ, ನಿಮ್ಮ ನೀತಿಬೋಧೆಯಿಂದ ನಿತ್ಯತೃಪ್ತರೂ ಆದರು. ಕರ್ನಾಟಕದಲ್ಲೆಲ್ಲ ಪ್ರವಾಸಮಾಡಿ ವೀರಶೈವ ಸಾಹಿತ್ಯ-ಸಂಸ್ಕೃತಿಗಳನ್ನು ಪ್ರಸಾರ ಮಾಡಿದಿರಿ. ಮಹಾನುಭಾವಿ ತೋಂಟದ ಸಿದ್ಧಲಿಂಗೇಶ್ವರರ ಕೃಪಾದೃಷ್ಟಿಗೆ ಪಾತ್ರವಾದ ಗದಗ ನಗರವು ನಿಮ್ಮ ನಿವಾಸವಾಗಿ ಅಲ್ಲಿಯೂ ಕೂಡ ಅನೇಕ ಸಂಘ-ಸಂಸ್ಥೆಗಳನ್ನು ಸಂಸ್ಥಾಪಿಸಿ ತನ್ಮೂಲಕ ಜನಜಾಗೃತಿಯನ್ನುಂಟುಮಾಡಿದ ಶ್ರೇಯಸ್ಸು ನಿಮ್ಮದು.

ದರ್ಶನಶಾಸ್ತ್ರವಿಶಾರದರೇ,

ಭಾರತೀಯ ಷಡ್ದರ್ಶನಗಳನ್ನು ಆಳವಾಗಿ ಅಧ್ಯಯನ ಮಾಡಿ ಸ್ವಾತಂತ್ರ್ಯಾಭ್ಯಾಸಿಗಳಾಗಿರುವ ನಿಮಗೆ ವೀರಶೈವ ದರ್ಶನವು ಕರತಲಾಮಲಕವಾಗಿದೆ. ಶೈವಾಗಮ ಮತ್ತು ವಚನಶಾಸ್ತ್ರದ ಅಧ್ಯಯನಕ್ಕಾಗಿ ನಿಮ್ಮನ್ನು ಅರ್ಪಿಸಿಕೊಂಡಿರುವಿರಿ. ನಿಜ ಜ್ಞಾನದ ಸೌರಭವನ್ನು ಹೊರಸೂಸುವ ಅದೆಷ್ಟೋ ಗ್ರಂಥಗಳು ಮತ್ತು ಲೇಖನಗಳು ನಿಮ್ಮಿಂದ ಪ್ರಕಟವಾಗಿವೆ. ಅವುಗಳಲ್ಲಿ ವೀರಶೈವ ತತ್ವಪ್ರವೇಶ, ಬಸವಣ್ಣನವರ ಆದರ್ಶ ಜೀವನ, ಅಕ್ಕಮಹಾದೇವಿಯವರ ಆದರ್ಶ ಜೀವನ, ಜೀವನ ಯಾತ್ರೆ, ಬಸವಣ್ಣನವರು ಹಾಗೂ ವೀರಶೈವ ಸಮಾಜ, ಚನ್ನಬಸವಣ್ಣನವರ ವಚನಗಳು ಮೊದಲಾದವು ಪ್ರಮುಖವಾದವು. ವೀರಶೈವ ದರ್ಶನದಲ್ಲಿ ತಮಗಿರುವ ಅಪಾರ ಪಾಂಡಿತ್ಯವನ್ನನುಲಕ್ಷಿಸಿ ಅನೇಕ ಸಂಸ್ಥೆಗಳು ತಮಗೆ 'ಶಿವಾದ್ವೈತ ಸಿದ್ಧಾಂತರತ್ನ,' 'ಶಿವಾದ್ವೈತ ವಿದ್ಯಾಭೂಷಣ,' 'ದರ್ಶನಶಾಸ್ತ್ರ ವಿಶಾರದ' ಇತ್ಯಾದಿ ಬಿರುದನ್ನಿತ್ತು ತಮ್ಮನ್ನು ಸಂಪ್ರೀತಿಯಿಂದ ಸತ್ಕರಿಸಿವೆ. ಕರ್ನಾಟಕ ವಿಶ್ವವಿದ್ಯಾಲಯವೂ ಸಹ ತಮ್ಮ ಜ್ಞಾನದ ಸದುಪಯೋಗ ಮಾಡಿಕೊಂಡಿದೆ.

## 6

ಶಿವಾನುಭಾವಿಗಳೇ,

ಬೇಕು ಬೇಡೆಂಬ ಭವಬೀಜಗಳನ್ನು ಹುರಿದು ಸತ್ಯ ಸದಾಚಾರ ಸನ್ಮಾರ್ಗದಲ್ಲಿ ಸಾಗಿರುವ ನಿಮ್ಮ ಜೀವನ ಅನ್ಯರಿಗೆ ಆದರ್ಶವಾಗಿದೆ. ಬಸವಣ್ಣನವರು ಪ್ರತಿಪಾದಿಸಿದ ಇಲ್ಲಿ ಅಲ್ಲಿ ಸಲ್ಲುವ ನಿಜ ಜೀವನಕ್ಕೆ ನೀವು ನಿದರ್ಶನವೆಂದು ಹೇಳಲು ಅಭಿಮಾನವಾಗುತ್ತದೆ. ಸಮಾಜದ ಸರ್ವಾಂಗೀಣ ಪ್ರಗತಿಗಾಗಿ, ಶಿವಾನುಭಾವದ ಪುನರುದ್ಧಾರಕ್ಕಾಗಿ ತ್ರಿಕರಣಪೂರ್ವಕವಾಗಿ ಪರಿಶ್ರಮಿಸಿದ ಶ್ರೀ ನಿ. ಪ್ರ. ಸ್ವ. ಲಿಂಗೈಕ್ಯ ಮೃತ್ಯುಂಜಯ ಮಹಾಸ್ವಾಮಿಗಳವರು ಸ್ಥಾಪಿಸಿದ 'ಅಖಿಲಭಾರತ ಶಿವಾನುಭವ ಸಂಸ್ಥೆ'ಯ ಪ್ರಗತಿಗಾಗಿ ನೀವು ಕೂಡ ದುಡಿದಿರಿ. ಈ ಮಹಾಸಂಸ್ಥೆಯ ಆಶ್ರಯದಲ್ಲಿ ಅನೇಕ ಸಂಸ್ಥೆಗಳು ಕರ್ನಾಟಕದ ಮೂಲೆ ಮೂಲೆಗಳಲ್ಲೂ, ಆಂಧ್ರ ಮತ್ತು ಮಹಾರಾಷ್ಟ್ರ ದೇಶದ ಕೆಲವು ಭಾಗಗಳಲ್ಲಿಯೂ ಸ್ಥಾಪಿಸಲ್ಪಟ್ಟು ತನ್ಮೂಲಕ 'ಶಿವಾನುಭಾವ' ಸರ್ವತ್ರ ಪ್ರಸಾರವಾಗಲು ನೀವು ಸಹ ಅಹರ್ನಿಶಿ ಶ್ರಮಿಸಿದಿರಿ.

ಸಮಾಜ ಸುಧಾರಕರೇ,

ಸಮಾಜದ ಎಲ್ಲ ಸತ್ಕಾರ್ಯಗಳಿಗೂ ಸಹಕಾರ ಹಸ್ತವನ್ನು ನೀಡಿ ಶ್ರಮಿಸುತ್ತಿರುವ ನಿಮ್ಮ ಸಾಧನೆ ಅದ್ವಿತೀಯವಾದುದು. ಸ್ವಹಿತಕ್ಕಿಂತ ಸಮಾಜ ಹಿತವೇ ಹೆಚ್ಚಿನದು. ಅಖಿಲಭಾರತ ಶಿವಾನುಭವ ಸಂಸ್ಥೆಯಿಂದ ಸಂಸ್ಥಾಪಿಸಲ್ಪಟ್ಟ 'ಸಾವಧಾನ' ಪತ್ರಿಕೆಯ ಸಂಪಾದಕರಾಗಿ ಸುಮಾರು ಇಪ್ಪತ್ತೈದು ವರ್ಷಗಳಿಂದಲೂ ಅವಿಶ್ರಾಂತವಾಗಿ ನಾಡು-ನುಡಿಗಳಿಗೆ ಅಮೋಘ ಸೇವೆ ಸಲ್ಲಿಸುವಿರಿ.

ಸದ್ವಿನಯ ಸದಾಚಾರಸಂಪನ್ನರೂ, ಶರಣಮಾರ್ಗಾವಲಂಬಿಗಳೂ, ಸಮಾಜ ಸುಧಾರಕರೂ, ಶಿವಾನುಭಾವಿಗಳೂ ಆದ ನಿಮಗೆ ಶ್ರೀಗುರುವು ಆಯುರಾರೋಗ್ಯ ಭಾಗ್ಯವನ್ನಿತ್ತು ದೇಶಕ್ಕೆ ಇನ್ನೂ ಸೇವೆ ಸಲ್ಲಿಸಲು ಶಕ್ತಿಯನ್ನನುಗ್ರಹಿಸಲಿ.

ನಿಡಸೋಸಿ
೨೩-೨-೧೯೭೧

ತಮ್ಮ
ಸ್ವಾಗತ ಸಮಿತಿಯ ಸದಸ್ಯರು

॥ ಶ್ರೀಗುರು ಬಸವಲಿಂಗಾಯ ನಮಃ ॥

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ
ಮಹಾಸನ್ನಿಧಿಯ ಘನ ಅಧ್ಯಕ್ಷತೆಯಲ್ಲಿ
ವೀರಶೈವ ಧರ್ಮತತ್ವ, ಸಮಾಜ-ಸಾಹಿತ್ಯಗಳ ಸಂವರ್ಧನೆಗಾಗಿ
ಅವಿಶ್ರಾಂತ ಪರಿಶ್ರಮಿಸಿದ
ಶಿವಾದ್ವೈತ ಸಿದ್ಧಾಂತರತ್ನ

## ಶ್ರೀ ಪಂಡಿತ ನಾಗಭೂಷಣ ಶಾಸ್ತ್ರಿಗಳವರಿಗೆ

ಷಷ್ಟ್ಯಬ್ದ ಸಮಾರಂಭದ ಮಂಗಲಮುಹೂರ್ತದಲ್ಲಿ ಅರ್ಪಿಸಿದ

# ಸನ್ಮಾನ ಪತ್ರ

ಅಗಾಧಪುಣ್ಯಸಂಪನ್ನರೇ,

ಸಿರಿ-ಸರಸ್ವತಿಯರಾಡೆಯಾಟವೆನಿಸಿದ ಸ್ವೈರಾಮ ಕರ್ನಾಟಕದ 'ಸಂಗನಾಳ' ಎಂಬ ...ಯ ಹಳ್ಳಿಯಲ್ಲಿ ತಮ್ಮಂತಹ ಹಿರಿಯ ಪಂಡಿತರ ಜನ್ಮವಾಗಿರುವುದು ...ಜವಾದರೂ ಸತ್ಯ. ಇದು ನಮ್ಮ ಸಮಾಜದ ಹಾಗೂ ನಾಡಿನ ಭಾಗ್ಯ. ...ದು ಬರೆಹಾಳಿಗೆ ಇಂದಿಗೂ ಸಹ ಎಷ್ಟೂ ಅವಕಾಶವಿಲ್ಲದ ಅಂತಹ ಹಳ್ಳಿಯಲ್ಲಿ ...ದಾಗಮ ವಚನಾಗಮ ಪಾರಂಗತರು ವೈದೋರಿರುವುದು ಪುಣ್ಯವಿಶೇಷವಲ್ಲದೆ ...ರೆ ಏನು ?

ವಿದ್ವನ್ಮಣಿಗಳೇ,

ವಾರಾಣಸಿಯ ವಿಶ್ವನಾಥನ ಸನ್ನಿಧಿಯಲ್ಲಿ ಘನಪಂಡಿತರ ನೇತೃತ್ವದಲ್ಲಿ ಅನೇಕ ...ರ್ಶನಗಳ ಅಧ್ಯಯನ ಮಾಡಿ ಅವರ ಮೆಚ್ಚುಗೆಯನ್ನು ಪಡೆದು ಕನ್ನಡದ ಅಭ್ಯಾಸ ...ನ್ನು ನಿರಂತರವೂ ನಡೆಸಿ ಶರಣಸಾಹಿತ್ಯ, ಧರ್ಮತತ್ವಗಳಲ್ಲಿ ವಿಶೇಷವಾದ ಪ್ರಭುತ್ವ ...ನ್ನು ಸಂಪಾದಿಸಿದಿರಿ. ಹತ್ತು ವರುಷಗಳ ನಂತರ ಮತ್ತೆ ಕನ್ನಡ ನಾಡಿಗೆ ಮರಳಿ ...ದು ಅಂದಿನಿಂದಲೂ ಸಮಾಜಸೇವೆಗಾಗಿಯೇ ತಮ್ಮ ಜೀವನವನ್ನು ಮುಡಿಪಾಗಿ ...ಟ್ಟಿರುವಿರಿ. ಇಂದು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆದಿರುವ ವಚನವಾಙ್ಮಯ ...ಶೋಧನೆಯ ಕಾರ್ಯದಲ್ಲಿ ತಮ್ಮ ಪರಿಪೂರ್ಣಪಾಂಡಿತ್ಯದ ವಿನಿಯೋಗವಾಗುತ್ತಿ ...ವುದೊಂದು ಸುಯೋಗ.

ದಿವ್ಯದ್ರಷ್ಟಾರರೇ,

ಕಾಶಿಯಿಂದ ಮರಳಿ ಬಂದೊಡನೆಯೆ ಕೃತಪುರವು ತಮ್ಮ ಕಾರ್ಯರಂಗವಾಯಿತು. ಹಾಲಕೆರೆಯ ಶ್ರೀ ನಿ. ಪ್ರ. ಸ್ವ. ಅನ್ನದಾನ ಮಹಾಸ್ವಾಮಿಗಳ ಕೃಪಾಶೀರ್ವಾದದಿಂದ ಶ್ರೀ ಮಠದಲ್ಲಿಯೇ ತಾವು ಸ್ಥಾಪಿಸಿದ ವೀರಶೈವ ವಿದ್ಯಾಪೀಠ ಹಾಗೂ ಆನಂದಾಶ್ರಮಗಳು ವೀರಶೈವ ಸಾಹಿತ್ಯ–ಸಂಸ್ಕೃತಿಗಳ ಪ್ರಸಾರದ ದೃಷ್ಟಿಯಿಂದ ಅತ್ಯಂತ ಮಹತ್ಕಾರ್ಯವನ್ನೆಸಗುತ್ತ ಬಂದಿವೆ. ವಿದ್ಯಾಪೀಠದಲ್ಲಿ ನಡೆದ ಸಾಹಿತ್ಯಪರೀಕ್ಷೆಗಳ ಸದುಪಯೋಗವನ್ನು ಜಾತಿ ಮತ ಪಂಥ ಪ್ರದೇಶಗಳ ಗಣನೆಯಿಲ್ಲದೆ ಸಹಸ್ರಾರು ಜನರು ಎರಡು ದಶಕಗಳ ವರೆಗೆ ಪಡೆದುಕೊಂಡಿರುವುದು ತಮ್ಮ ಘನತೆಗೆ ಎತ್ತಿಹಿಡಿದ ಪತಾಕೆಯಾಗಿದೆ. ಕನ್ನಡ ನಾಡಿನಲ್ಲಿ ಅಂತಹದೊಂದು ವಿದ್ಯಾಪೀಠದ ಅವಶ್ಯಕತೆಯಿದೆಯೆಂಬುದನ್ನು ಕಂಡುಕೊಂಡುದು ತಮ್ಮ ದಿವ್ಯದರ್ಶನ.

ಸಾಹಿತ್ಯಶರಣರೇ,

ಕನ್ನಡ ಹಾಗೂ ಸಂಸ್ಕೃತ ವಾಙ್ಮಯಗಳಲ್ಲಿ ತಮಗೆ ಅಮಿತವಾದ ಪ್ರಭುತ್ವವಿದೆ. ಷಡುದರುಶನಗಳ ಜೊತೆಗೆ ಮೃಡದರ್ಶನವನ್ನೂ ಆಳವಾಗಿ ಅಭ್ಯಸಿಸಿ 'ಶಿವಾದ್ವೈತ ಸಿದ್ಧಾಂತರತ್ನ' ಎಂಬ ಬಿರುದಿಗೆ ಗೌರವವನ್ನು ತಂದುಕೊಟ್ಟಿರುವಿರಿ. ಸೂಕ್ಷ್ಮನಿರೀಕ್ಷಣೆ, ತೀಕ್ಷ್ಣವಿಮರ್ಶೆ, ಸಮತೋಲನವಿಚಾರ, ಸಾಧಾರವಾದ ತರ್ಕ, ದೂರದೃಷ್ಟಿ ಇವು ತಮ್ಮ ಪಾಂಡಿತ್ಯದ ಸಲ್ಲಕ್ಷಣಗಳಾಗಿವೆ. ತಾವು ಬರೆದುದು ಕಿರಿದಾದರೂ ಅರಿವುದು ಹಿರಿದು. ಬರೆವಷ್ಟೂ ಹೊನ್ನಿನ ಕಣಿಯಾಗಿದೆ; ಖಚಿತ ಜ್ಞಾನದಿಂದೊಡಗೂಡಿದೆ; ಶಾಶ್ವತ ಮೌಲ್ಯಗಳನ್ನು ಪಡೆದಿವೆ. ಬಸವಣ್ಣನವರ ಆದರ್ಶ ಜೀವನ, ಅಕ್ಕಮಹಾದೇವಿಯವರ ಆದರ್ಶಜೀವನ, ವೀರಶೈವ ತತ್ವಪ್ರವೇಶ, ಜೀವನಯಾತ್ರೆ ಮುಂತಾದ ಹೊತ್ತಗೆಗಳೂ 'ಬಸವಣ್ಣನವರು ಹಾಗೂ ವೀರಶೈವ ಸಮಾಜ' ಮೊದಲಾದ ಸಂಶೋಧನ ಹಾಗೂ ವಿಚಾರಪರಿಪ್ಲುತವಾದ ಲೇಖನಗಳೂ ನಮ್ಮ ವಾಙ್ಮಯದಲ್ಲಿ ಶಾಶ್ವತವಾಗಿ ನಿಲ್ಲುತ್ತವೆ. ತಾವು ಅನೇಕ ಗ್ರಂಥಗಳಿಗೆ ಬರೆದ ಮುನ್ನುಡಿಗಳೂ ತರುಣರಿಗೆ ನೀಡಿದ ಪ್ರೋತ್ಸಾಹನೆಯೂ ನಾಡು ನುಡಿಗಳನ್ನು ಕಟ್ಟುವ ಕಾರ್ಯದಲ್ಲಿ ಮೈಲುಗಲ್ಲನಂತಿವೆ.

ಸಮಾಜಸುಧಾರಕರೇ,

ವೃತ್ತಪತ್ರಿಕೆಗಳು ಜನತೆಯನ್ನು ಬಡಿದೆಬ್ಬಿಸುವ ದೃಷ್ಟಿಯಿಂದ ಬಹು ಮಹತ್ವವಾದುವೆಂದು ಬಗೆದು ಶಿವಾನುಭವ ಸಂಸ್ಥೆಯು "ಸಾವಧಾನ" ಪತ್ರಿಕೆಯೊಂದನ್ನು ಪ್ರಾರಂಭಿಸಬೇಕೆಂಬುದಕ್ಕೆ ಪ್ರೇರಣೆಯನ್ನಿತ್ತು ಕಳೆದ ಹತ್ತೊಂಬತ್ತು ವರುಷಗಳಿಂದಲೂ ಅದರ ಸಂಪಾದಕರಾಗಿ ಶ್ರಮಿಸಿ ಅದಕ್ಕೊಂದು ಶಾಶ್ವತಸ್ವರೂಪವನ್ನು ನೀಡಿರುವಿರಿ.

ಮೂಲಕ ನಾಡು-ನುಡಿ-ಸಮಾಜಗಳಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿರುವಿರಿ. ಇದು ವೀರಶೈವ ಸಮಾಜದ ಮುಖಪತ್ರಿಕೆಯೆಂದು ಹೇಳಲು ಹೆಮ್ಮೆಯೆನಿಸುತ್ತದೆ. ಪ್ರಧಾನ ಪತ್ರಿಕೆಯ ಜೊತೆಗೆ ತಾವು ನೆರವೇರಿಸುತ್ತ ಬಂದಿರುವ ಸಮಾಜಸೇವೆ ವಿವಿಧ ಮುಖವಾಗಿದೆ. ಕನ್ನಡ ನಾಡಿನೊಳಗೆ ಹಳ್ಳಿ ಪಟ್ಟಣಗಳೆನ್ನದೆ ಎಲ್ಲೆಲ್ಲಿಯೂ ಸಂಚರಿಸಿ ಪುರಾಣಪ್ರವಚನವ್ಯಾಖ್ಯಾನಗಳ ಮುಖಾಂತರ ಜನಜಾಗ್ರತಿಯನ್ನುಂಟು ಮಾಡಿರುವಿರಿ.

ಶಿವಯೋಗೀಶ್ವರ ಕೃಪಾಪಾತ್ರರೇ,

ತ್ರಿವಿಧದಾಸೋಹಮೂರ್ತಿಗಳಾದ ಲಿಂಗೈಕ್ಯ ಶ್ರೀ ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸನ್ನಿಧಾನ ಕಲಿಯುಗದ ಎರಡನೆಯ ಮುಕ್ಕಣ್ಣ. ತಾವು ಆ ಮಹಾಸನ್ನಿಧಿಯ ಪೂರ್ಣಕೃಗೆಪೆಗೆ ಪಾತ್ರರಾಗಿ ಶ್ರೀ ಮಠದಲ್ಲಿ ನಡೆಯುವ ಧಾರ್ಮಿಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಗೆ ಆದ್ಯಪ್ರವರ್ತಕರಾಗಿರುವಿರಿ. ಶ್ರೀಗಳವರು ತಮ್ಮಂತಹ ಪಂಡಿತರ ಸಂಕಲ್ಪಗಳನ್ನು ಸಿದ್ಧಿಗೊಳಿಸಿ ಸಮಾಜಕ್ಕೆ ಮಹದುಪಕಾರ ಮಾಡಿರುವರು. ಹೀಗೆಯೇ ಕನ್ನಡ ನಾಡಿನ ಅನೇಕ ಹರಗುರು ಚರಮೂರ್ತಿಗಳು, ಹಿರಿಯ ಪೀಠಗಳು ತಮ್ಮನ್ನು ಅತ್ಯಂತ ಆತ್ಮೀಯತೆಯಿಂದ ಕಂಡು ಸಲಹೆ ಸೂಚನೆಗಳನ್ನೂ ಪಡೆದು ಸಮಾಜಸೇವೆಯಲ್ಲಿ ನಿರತರಾಗಿರುವುದು ನಮಗ ವೇದ್ಯವಿದೆ. ಸಮಾಜದ ಬಗೆಗೆ ಅತ್ಯಂತ ಆಸ್ಥೆಯುಳ್ಳ ತಾವು ಆ ಎಲ್ಲ ಮಹಾನುಭಾವರಲ್ಲಿಯೂ ಭಕ್ತಿ-ವಿಶ್ವಾಸಗಳ ನಿಟ್ಟು ಸಮಾಜದ ಹಿತಚಿಂತನೆಯ ಕಡೆಗೆ ಅವರ ದೃಷ್ಟಿಯನ್ನು ಸೆಳೆಯುತ್ತಿರುವುದು ತಮ್ಮ ಸಹಜಶೀಲವಾಗಿದೆ,

ಸತ್ಯನಿಷ್ಠ ಶರಣರೇ,

ತಮ್ಮ ಜೀವನವೇ ಷಟ್‌ಸ್ಥಲದರ್ಶನಕ್ಕೆ ಹಿಡಿದ ದರ್ಶನವಾಗಿದೆ. ಅರುವತ್ತು ವರುಷಗಳ ತುಂಬುಜೀವನವೊಂದು ಅಖಂಡ ತಪವಾಗಿ ಪರಿಣಮಿಸಿದೆ. ಸದಾಚಾರ, ಸದುವಿನಯ ಸತ್ಯನಿಷ್ಠೆ ಇಂತಹ ಸದ್ಗುಣಗಳಿಂದ ಸಮಾಜಕ್ಕೆ ಎಲ್ಲಂದದಿಂದಲೂ ಆದರ್ಶರಾಗಿರುವಿರಿ. ತಮ್ಮ ದರ್ಶನವಾದರೆ ಹನ್ನೆರಡನೆಯ ಶತಮಾನದ ಪುಣ್ಯ ಶರಣರ ಸ್ಮರಣೆಯಾಗುತ್ತದೆ. ತಾವು ಶ್ರೀ ಶಿವಯೋಗೀಶ್ವರರ ಕೃಪಾಬಲದಿಂದ ಅಖಂಡವಾದ ಆಯುರಾರೋಗ್ಯವನ್ನು ಪಡೆದು ಸಮಾಜಕ್ಕೆ ಆಧಾರಸ್ತಂಭವಾಗಿ ಬಾಳುವಂತಾಗಲೆಂದು ಪ್ರಾರ್ಥಿಸುತ್ತೇವೆ.

ಜೀವೇಮ ಶರದಃ ಶತಂ

| | |
|---|---|
| ಶ್ರೀ ಮುರುಘಾಮಠ, ಧಾರವಾಡ | ಷಷ್ಟ್ಯಬ್ದಸಮಾರಂಭಸಮಿತಿಯ |
| ಶಕೆ ೧೮೮೮ ಚೈತ್ರ ಬಹುಳ ೧೨ | ಅಧ್ಯಕ್ಷರು ಹಾಗೂ ಸಕಲ ಸದಸ್ಯರು |

# ಪ್ರಶಸ್ತಿ ಪತ್ರ

**ಶ್ರೀ ನಿ. ಪ್ರ ಮಹಾಂತ ಸ್ವಾಮಿಗಳು ಚಿತ್ತರಗಿ,**
**ಶ್ರೀ ವಿಜಯ ಮಹಾಂತೇಶ್ವರ ಸಂಸ್ಥಾನಮಠ, ಇಲಕಲ್ಲ**

**ಶಿವಾನುಭವ ಪ್ರಾಚಾರ್ಯರಾದ**
**ಧಾರವಾಡ ಪಂ. ನಾಗಭೂಷಣ ಶಾಸ್ತ್ರಿಗಳವರೇ,**

ನೀವು ಕನ್ನಡ ನಾಡಿನಲ್ಲಿ ಶಿವಾನುಭವಶಾಸ್ತ್ರವನ್ನು ಅಧಿಕಾರವಾಣಿಯಿಂದ ಹೇಳಬಲ್ಲ ಕೆಲವೇ ವಿದ್ವನ್ಮಣಿಗಳಲ್ಲಿ ಒಬ್ಬರಾಗಿದ್ದು; ಶಿವಾದ್ವೈತ ಸಿದ್ಧಾಂತ ಸಾಗರದ ಆಳ ಆಗಲಗಳನ್ನು ಶ್ರೋತೃಗಳಿಗೆ ಅನುಭವಗಮ್ಯವಾಗುವಂತೆ ನಿಮ್ಮ ಪ್ರವಚನಗಳಲ್ಲಿ ದರ್ಶಿಸಿ, ಶಿವಾದ್ವೈತ ಸಿದ್ಧಾಂತದ ಮೇಲಿನ ಅವರ ನಿಷ್ಠೆ ಅಚಲವಾಗುವಂತೆ ಸ್ಥಿರವಾದ ಪರಿಣಾಮದ ಮುದ್ರೆಯೊತ್ತುವುದರಲ್ಲಿ ಪಳಗಿದ ಪ್ರಕಾಂಡ ಪಂಡಿತರಾಗಿದ್ದೀರಿ. ನಿಮ್ಮ ಪ್ರವಚನ "ನುಡಿದರೆ ಲಿಂಗವೆಚ್ಚಿ ಅಹುದಹುದೆನಬೇಕು" ಎಂಬ ಶರಣರ ವಾಣಿಗೆ ಸಾಕಾರ ಸತ್ಯವಾಗಿದೆ.

ವಚನ ಸಾಹಿತ್ಯದಲ್ಲಿಯ ಶಿವಶರಣರ ಶಿವಾನುಭವದ ನುಡಿರತ್ನಗಳನ್ನು ಉಪನಿಷತ್ಕಾರರ ದರ್ಶನಗಳೊಂದಿಗೆ ಸಮರ್ಪಕವಾಗಿ ಹೊಂದಿಸಿ ನೋಡುವ ಸಾಮರ್ಥ್ಯ ನಿಮ್ಮದಾಗಿದೆ. ವೇದಾಗಮ, ಉಪನಿಷತ್ತು, ಭಗವದ್ಗೀತೆ, ಬ್ರಹ್ಮಸೂತ್ರ, ದ್ವೈತಾದ್ವೈತ ಸಿದ್ಧಾಂತ, ಶಿವಶರಣರ ವಚನಗಳ ರಹಸ್ಯದ ಅನುಭವಾಮೃತವನ್ನು ಚನ್ನಾಗಿ ಸವಿದುಂಡು ಸರ್ವ ಮುಮುಕ್ಷುಗಳಿಗೂ ಹೃದಯವೇದ್ಯವಾಗುವಂತೆ ಬಿಂಬಿಸುವುದರಲ್ಲಿಯ ನಿಮ್ಮ ವಾಗ್ವೈಖರಿ ಶ್ರೀಮಂತವೂ ಧೀಮಂತವೂ, ಅನುಭವ ಪರಿಪ್ಲುತವೂ ಆಗಿದ್ದು ನಿಮ್ಮ ಜೀವನವನ್ನು ಸಾರ್ಥಕ್ಯದ ಉತ್ತುಂಗ ಶಿಖರಕ್ಕೆ ಎತ್ತಿದುದರ ಜೊತೆಗೆ ಶ್ರೋತೃಗಳ ಜೀವನವನ್ನು ಸಾರ್ಥಕಗೊಳಿಸಿದೆ. ಕಲ್ಲೋಲರಹಿತವಾದ ಕಡಲ ಬೆಡಗಿನಂತೆ ನಿಮ್ಮ ವ್ಯಕ್ತಿತ್ವ ಏರಿಳಿತಗಳಿಲ್ಲದೆ ಪ್ರಶಾಂತ ರಮ್ಯವಾಗಿದೆ.

11

ಪ್ರಾಮಾಣಿಕ ಪಂಡಿತರೂ ಆಚಾರ ವಿಚಾರ ಸಮನ್ವಿತರೂ ಚಿತ್ರರಗಿ ಸಂಸ್ಥಾನ ಪೀಠದ ಅಭಿಮಾನಿಗಳೂ ಆದ ನಿಮಗೆ ಇಂದು ಮಹಾಮಹಿಮ ಚಿತ್ರರಗಿ ಮಹಾ ಶಿವಯೋಗಿಗಳವರ ಯಾತ್ರಾ ಮಹೋತ್ಸವದ ಸುಸಂದರ್ಭದಲ್ಲಿ ನಿಮಗೆ "ಶಿವ ತತ್ತ್ವ ರತ್ನಾಕರ" ಎಂಬ ಪ್ರಶಸ್ತಿಯನ್ನು ಚಿತ್ರರಗಿ ಶಿವಯೋಗಿಯ ದಿವ್ಯಾನುಗ್ರಹದಿಂದ ಚಿತ್ರರಗಿ ಪೀಠದ ಸಮಸ್ತ ಸದ್ಭಕ್ತರ ಸಮ್ಮುಖದಲ್ಲಿ ಕೊಡಲಾಗಿದೆ.

ಸತ್ಯಂ ಶಿವಂ ಸುಂದರಂ

ತಾ. ೪-೯-೧೯೭೨ ಚಿತ್ತರಗಿ ಸಂಸ್ಥಾನಮಠ ಇಲಲ್ಲಕ

ಸ್ವಯಂಭು ಆಶ್ರಮ ನಾಣ್ಯಾಪುರದಲ್ಲಿ

ಶರಣ ಮಂಟಪ ದಶಮಾಪುರ ಇವರು ಅರ್ಪಿಸಿದ

# ಸನ್ಮಾನ ಪತ್ರ

ಮರ್ತ್ಯಲೋಕವೇ ಕರ್ತಾರನ ಕಮ್ಮಟ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು ಎಂದು ಸಕಲ ಜೀವಾತ್ಮರಿಗೂ ಲೇಸನೇಬಯಸುವ ಕಾಯಕ ಪ್ರೇಮಿಗಳಾದ

ಶ್ರೀ ಪಂ. ನಾಗಭೂಷಣ ಶಾಸ್ತ್ರಿಗಳು ಇವರಿಗೆ ವೀರಶೈವ ಧರ್ಮ ಕ್ಷೇತ್ರ ದಲ್ಲಿ ಸೇವೆ ಸಲ್ಲಿಸಿದ್ದನ್ನು ನೆನೆದು, ಶರಣ ಧರ್ಮ ಭಾಸ್ಕರ ಎಂದು ನಮ್ಮ ಹೃದಯ ಕಾಣಿಕೆಯಿಂದ ಸನ್ಮಾನಿಸುವುದು ನಮಗೊಂದು ಹೆಮ್ಮೆಯಾಗಿದೆ.

ದಶಮಾಪುರ ಶರಣ ಮಂಟಪ

ದಿ. ೧೫-೪-೬೪

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳವರು, ಶ್ರೀ ಜಗದ್ಗುರು ಮೂರುಸಾವಿರಮಠ ಹುಬ್ಬಳ್ಳಿ
ಅವರ ಸನ್ನಿಧಿಯಿಂದ

### ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ
### ದ್ವಾದಶ ವಾರ್ಷಿಕೋತ್ಸವದ ಅಂಗವಾಗಿ
### ಪಂಡಿತ ನಾಗಭೂಷಣ ಶಾಸ್ತ್ರಿಗಳವರಿಗೆ ಅರ್ಪಿಸಿದ

# ಸನ್ಮಾನ ಪ್ರಶಸ್ತಿ

**ಸಹಜ ಶಿವಯೋಗಾನುಭಾವಿಗಳೆ !**

೨೦ನೆಯ ಶತಮಾನದಲ್ಲಿ ಪ್ರಾಚೀನ-ಅರ್ವಾಚೀನ ಸಂಸ್ಕೃತಿ, ಸಾಹಿತ್ಯ, ತತ್ತ್ವ
ಜ್ಞಾನಗಳ ಸತತಾಭ್ಯಾಸವನ್ನು ಅಂಗವಿಸಿಕೊಂಡ, ಕಾಶೀ ಪಂಡಿತರ ಭವ್ಯ ಪರಂಪರೆ
ಯಲ್ಲಿ ಕೊನೆಯ ಹೂವಾಗಿ ಅರಳಿರುವ, ಘನವಿದ್ವಾಂಸರೂ ಆಚಾರನಿಷ್ಠರೂ
ಕಾಯಕ ತತ್ಪರರೂ ಆದ ತಮಗೆ ಇಂದಿನ ಶ್ರೀ ಜಗದ್ಗುರು ಮೂರುಸಾವಿರಮಠದ
ದರ್ಶನ ಪೀಠದಿಂದ ಸನ್ಮಾನಿಸಲು ನಮಗೆಲ್ಲ ಸಂತೋಷವೆನಿಸುತ್ತದೆ. ನಿಮ್ಮ ಬಾಳು
ಸಹಜವೂ ತತ್ತ್ವಪೂರ್ಣವೂ ಶಿವಾನಂದಮಯವೂ ಆಗಿ ನಿತ್ಯನೂತನವಾದ ಚೇತನ
ಯನ್ನು ಆತ್ಮೀಕರಿಸಿಕೊಂಡಿದೆ. ಶ್ರೀ ಶಿವಯೋಗಮಂದಿರದ ತಪೋವನ ಪರಿಸರದ
ಲ್ಲಿಯೂ ಕಾಶೀವಿಶ್ವೇಶ್ವರ ಘನಪಾಂಡಿತ್ಯ ಪ್ರಪಂಚದಲ್ಲಿಯೂ ನೀವು ಭಾರತೀಯ ಷಡ್ದ
ರ್ಶನಗಳ ಆಳವಾದ ವ್ಯಾಸಂಗಹೊಂದಿ, ಸಮಗ್ರ ಬಾಳನ್ನು ನಿಮ್ಮ ವಿದ್ಯಾರ್ಥಿದೆಸೆಯ
ಸಾಧನೆಗಳನ್ನು ಜನಜೀವನಕ್ಕೆ ಸಮರ್ಪಿಸಲು ಸಿದ್ಧರಾದಿರಿ. ಜ್ಞಾನದಾಸೋಹಿಗ
ಳಾದಿರಿ.

ದರ್ಶನಶಾಸ್ತ್ರವಿಶಾರದರೆ !

ಭಾರತೀಯ ವಾಙ್ಮಯೇತಿಹಾಸದ ಪ್ರಾಚೀನ, ಅರ್ವಾಚೀನ ಕಾವ್ಯ-ದರ್ಶನ-ವಿಮರ್ಶೆಗಳನ್ನು ಸಮೀಕ್ಷಿಸಿ, ವಚನಶಾಸ್ತ್ರದ ವೈಜ್ಞಾನಿಕ ಪರಾಮರ್ಶವನ್ನು ಪಡೆದು, ಅಧಿಕಾರವಾಣಿಯಿಂದ 'ಸಿದ್ಧಾಂತಶಿಖಾಮಣಿ' 'ಶಿವಾನುಭವಸೂತ್ರ' 'ಶೂನ್ಯಸಂಪಾದನೆ'ಗಳನ್ನು ಬಿಚ್ಚಿಬಿಡಿಸಿ ಹೇಳಬಲ್ಲ ಅವಿರಳಪಾಂಡಿತ್ಯವನ್ನು ಪಡೆದುಕೊಂಡಿರಿ. ಸಮಗ್ರ ಐವತ್ತು ವರ್ಷಗಳಿಂದ ನೀವು ಬೋಧನೆ-ಉಪನ್ಯಾಸ-ಪ್ರವಚನಗಳನ್ನು ಹಾಲಕೆರೆ, ಗದಗ, ಶಿವಯೋಗಮಂದಿರ, ಧಾರವಾಡ, ಹುಬ್ಬಳ್ಳಿ ಇಳಕಲ್ಲುಗಳ ಮುಖಾಂತರ ನಡೆಸಿದಿರಿ. ನಿಮ್ಮ ಬಾಳಿನ ಅರ್ಧವೇ ಬೋಧನೆಯ ಜಂಗಮಕಾಯಕದಿಂದ ತುಂಬಿದೆ. ನಿಮ್ಮ ಉಪನ್ಯಾಸಗಳೂ ಪ್ರವಚನಗಳೂ ನಡೆಯದ ಮಠಗಳೇ ಇಲ್ಲ. ನಿಮ್ಮ ಉದಾತ್ತ ವಾಗ್ವೈಖರಿಯನ್ನು ಕೇಳದ ನಗರಗ್ರಾಮಗಳೇ ಇಲ್ಲ. ಈ ಜ್ಞಾನಸೇವೆಯ ಕರೆಬಂದಲ್ಲಿ ವೈಯಕ್ತಿಕ ನೋವು-ನಲಿವುಗಳನ್ನು ಬದಿಗಿರಿಸಿ ನಡೆದಿರಿ. ಶ್ರದ್ಧೆಯಿಂದ ಸೇವೆಸಲ್ಲಿಸಿದಿರಿ. ಚನ್ನಬಸವಣ್ಣನ ಷಟ್‌ಸ್ಥಲ ಸಿದ್ಧಾಂತಕ್ಕೆ ನಿಮ್ಮ ಬಾಳು ಸಾಕಾರ ವ್ಯಾಖ್ಯೆಯೇ ಸರಿ.

ಶಿವಾದ್ವೈತ ಸಿದ್ಧಾಂತ ರತ್ನರೆ !

'ಸಾವಧಾನ ಪತ್ರಿಕೆ' ನಿಮ್ಮ ದಕ್ಷ ಸಂಪಾದಕತ್ವದಲ್ಲಿ ಸುಳುವು-ಹೊಳಹನ್ನು ಕಂಡಿತು, ಕಾಲುಶತಮಾನದಿಂದ ಶರಣರ ಅನುಭಾವ ಸಿದ್ಧಾಂತವನ್ನು ಜನಕೋಟಿಗೆ ಸಾರಿಹೇಳಿತು. ಅದಲ್ಲದೆ ವೀರಶೈವ ಪಂಚಾಚಾರ-ಅಷ್ಟಾವರಣ-ಷಟ್‌ಸ್ಥಲ ಶರಣರ ವಿಚಾರವಾಹಿನಿಗಳ ಬಗ್ಗೆ ಆಗಾಗ ನೀವು ಮೂಡಿಸಿದ ಮಿಂಚಿನ ಲೇಖನಗಳು ಬಹಳ ಸಹಕಾರಿಯಾಗಿ ಬಂದವು. ಜಗದ್ಗುರು ಮೂರುಸಾವಿರಮಠವು ನೀಡಿದ ಲೇಖನ ಸೇವೆ, ಗ್ರಂಥ ಸೇವೆಗಳನ್ನು ಇಲ್ಲೆನ್ನದಲೆ ಸ್ವೀಕರಿಸಿದಿರಿ. ಕರ್ನಾಟಕ ವಿಶ್ವವಿದ್ಯಾಲಯವು ನಿಮ್ಮ ವಿದ್ವತ್ಪ್ರತಿಭೆಯ ಸಮಯೋಚಿತ ಲಾಭವನ್ನು ಪಡೆಯಲು ನಿಮ್ಮನ್ನು ಆಮಂತ್ರಿಸಿತು. ವಿಶ್ವವಿದ್ಯಾಲಯವು ಯು. ಜಿ. ಸಿ. ನೆರವಿನಿಂದ ಸಂಸ್ಥಾಪಿಸಿದ 'ಬಸವಪೀಠ' ದಲ್ಲಿಯೂ ಸಂಶೋಧಕ ಪಂಡಿತರಾಗಿ ದುಡಿದು ಅನೇಕ ಪಠಿತಾರ್ಹ ಹೆಬ್ಬೊತ್ತಿಗೆಗಳು ಪ್ರಕಟವಾಗಲು ಕಾರಣ ಕರ್ತರಾದಿರಿ. 'ಸಾವಧಾನ ಪತ್ರಿಕೆ' ವಚನ ವಾಙ್ಮಯ ವಿಭಾಗ, 'ಬಸವ ಪೀಠ' ಇವು ನಿಮ್ಮ ಜೀವನದ ಸಾಧನೆಯ ಮೂರು ಮೈಲುಗಲ್ಲುಗಳೇ ಆಗಿವೆ !

**ಾದ್ವೈತ ವಿದ್ಯಾಭೂಷಣರೆ !**

ನಿಮ್ಮ ಜೀವನ ಹಿಮಾಲಯದ ಮಾನಸಸರೋವರದಂತೆ ತಿಳಿಯಾಗಿಯೂ ಪ್ರಸನ್ನವಾಗಿಯೂ ಮಧುರವಾಗಿಯೂ ಋಷ್ಯಾಶ್ರಮ ಶೈಲಿಯಲ್ಲಿ ಆರ್ಷಪ್ರತಿಭೆಯಿಂದ ಬೆಳೆನಿಂತಿದೆ. 'ಸದುವಿನಯವೇ ಸದಾಶಿವನ ಒಲುಮೆಯಯ್ಯಾ' ಎಂಬ ಬಸವ ವಚನಕ್ಕೆ ನಿಮ್ಮ ಬಾಳು ಪ್ರಯೋಗಶಾಲೆಯಾಗಿದೆ. ಇನಿತೊಂದು ಹಿರಿಯ ವಯಸ್ಸಿನಲ್ಲಿ ಸಂತರೂ ಬಾಲಸಹಜ ಮೃದುಭಾವ ನಿಮ್ಮಲ್ಲಿ ಸದಾ ಕಂಗೊಳಿಸುತ್ತದೆ. ಚೈತನ್ಯ ಪೂರ್ಣರಾಗಿ ಸದಾಕಾಲ ನಗುವ ನಂದಾದೀಪವಾಗಿ, ಒಳಿಗೆ ಬಂದವರೊಂದಿಗೆ ಸಮಭಾವದಿಂದ ಬೆರೆತು ಮಾತನಾಡುವ ನಿಮ್ಮ ನಿಲವು ಘನ. ಎಲೆಯ ಮರೆಯ ಹೂವಿನಂತೆ ನಿಮ್ಮ ಬಾಳು ಸೇವೆಯ ಸೌಭಾಗ್ಯಕ್ಕೆ ಸಮರ್ಪಣೆಯಾಗಿದೆ. 'ವಿದ್ಯಾವಿನಯೇನ ಶೋಭತೇ' ಎಂಬ ವಾಕ್ಯಕ್ಕೆ ನೀವಲ್ಲದೆ ಇನ್ನಾರು ಉದಾಹರಣೆ ?

**ಸಮಾಜದ ಹಿತಚಿಂತಕರೆ !**

ತನ್ನ ತಾನರಿದ ಶರಣನಿಗೆ ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ ಶರಣ ಲೋಕ ಸೇವಕ. ಆತನ ಆತ್ಮ ಬಿಚ್ಚಿದ ಹೂ. ಉಸಿರು ಪರಿಮಳ. ದೇಹವೇ ದೇವಾಲಯ ಇದೇ ನಿಮ್ಮ ಜೀವನದ ಸಹಜಸ್ಥಿತಿ. ಅನೇಕ ಮಠಗಳ ಸ್ವಾಮಿಗಳು ನಿಮ್ಮಿಂದ ಅನೇಕ ಸಲಹೆಗಳನ್ನೂ ಆಲೋಚನೆಗಳನ್ನೂ ಕೇಳುತ್ತ ಬಂದಿದ್ದಾರೆ. ನೀವು ಸಮಾಜದ ಶುಭಕಾಂಕ್ಷಿಗಳಾಗಿ ಕಾಲಕಾಲಕ್ಕೆ ನೀತಿವಿಚಾರಗಳನ್ನು ನಿಮ್ಮ ಕೃತಿಗಳಲ್ಲಿ ಸಾರುತ್ತ ಬಂದಿರುವಿರಿ. ಲಿಂ. ಪೂಜ್ಯ ಮೃತ್ಯುಂಜಯ ಮಹಾಸ್ವಾಮಿಗಳವರ ಬಲಗೈಯಂತೆ ನೀವು ನಿಂತು, ಅವರು ಸಂಸ್ಥಾಪಿಸಿದ 'ಅಖಿಲ ಭಾರತ ಶಿವಾನುಭವ ಸಂಸ್ಥೆ'ಗೆ ಹೆಗಲು ಕೊಟ್ಟಿರಿ. ಅದರ ಶಾಖೋಪಶಾಖೆಗಳು ಕರ್ನಾಟಕದಲ್ಲಿಯೂ ಹೊರನಾಡಿನಲ್ಲಿಯೂ ಪ್ರಸರಿಸಲು ನೀವೇ ಕಾರಣೀಭೂತರಾದಿರಿ. ನೀವು ಬರೆದ 'ವೀರಶೈವ ತತ್ವ ಪ್ರವೇಶ' 'ಬಸವಣ್ಣನವರ ಆದರ್ಶ ಜೀವನ,' 'ಅಕ್ಕಮಹಾದೇವಿಯವರ ಆದರ್ಶ ಜೀವನ' 'ಜೀವನ ಯಾತ್ರೆ,' 'ಬಸವಣ್ಣನವರು ಹಾಗೂ ವೀರಶೈವ ಸಮಾಜ,' 'ಚನ್ನಬಸವಣ್ಣನವರ ವಚನಗಳು,' 'ಭಾರತೀಯ ದರ್ಶನ ಸಮೀಕ್ಷೆ' ಮುಂತಾದವುಗಳು ಕನ್ನಡ ಸಾಹಿತ್ಯ ಪ್ರಪಂಚಕ್ಕೆ ದೊಡ್ಡ ಕೊಡುಗೆಯಾಗಿವೆ.

ನಿಮ್ಮ ಉಜ್ಜ್ವಲ ಜೀವನವನ್ನೂ ಪ್ರಾಸಾದಿಕ ಶ್ರೇಯೋಭಿವೃದ್ಧಿಯನ್ನೂ ಹಾಗೂ ಸುದೀರ್ಘಸೇವೆಯನ್ನು ಅವಗಾಹಿಸಿದ ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ತಮಗೆ

"ಶಿವಸಿದ್ಧಾಂತ ಶಿರೋಮಣಿ" ಎಂಬ ಬಿರುದನ್ನು ದಯಪಾಲಿಸಿದ್ದಾರೆ. ಅಲ್ಲದೆ ನಿಮ್ಮ ಜೀವನವು ಇತೋಪ್ಯತಿ ಶಯವಾಗಿ ಮುಂದೆ ಸಾಗಲೆಂದೂ; ಅದಕ್ಕಾಗಿ ಕರ್ತೃ ಜಗದ್ಗುರು ಗುರುಸಿದ್ಧೇಶ್ವರನು ಆಯುರಾರೋಗ್ಯ ಸುಖ ಸಮೃದ್ಧಿಗಳನ್ನು ದಯ ಪಾಲಿಸಲೆಂದೂ ಅಪೇಕ್ಷಿರಲಾಗಿದೆ.

ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ
ದ್ವಾದಶ ವಾರ್ಷಿಕೋತ್ಸವ ಸಮಿತಿ
೨೭-೨-೭೮ ಶ್ರೀ ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ

೨೧) ಸರ್ಪಭೂಷಣ ಶಿವಯೋಗಿಗಳವರ ಕಲ್ಪವಲ್ಲರಿ
೨೨) ಚೋರಬಸವ ಪುರಾಣ
೨೩) ಅನುಭವ ಮುದ್ರ
೨೪) ಗುರುಬಸವನ ಸಪ್ತಕಾವ್ಯಗಳು

ಡಾ॥ ಎಮ್. ಎಸ್. ಸುಂಕಾಪುರವರೊಂದಿಗೆ

೨೫) ಮನೋವಿಜಯಂ
೨೬) ಸದ್ಗುರು ರಹಸ್ಯ
೨೭) ಅವಧೂತ ಗೀತೆ
೨೮) ಶಿವಯೋಗಾಂಗ ಭೂಷಣ
೨೯) ವೃಷಭಗೀತೆ
೩೦) ಸ್ವರೂಪಾಮೃತ
೩೧) ಕಲ್ಯಾಣೇಶ್ವರ
೩೨) ಚೆನ್ನಬಸವಣ್ಣನವರ ನೂರೆಂಟು ವಚನಗಳ ಸಂಗ್ರಹ
೩೩) ಚೆನ್ನಬಸವಣ್ಣನವರ ವಚನ ಸಂಗ್ರಹ
೩೪) ತೋಂಟದಾರ್ಯ ಸಿದ್ಧಲಿಂಗ ಶಿವಯೋಗಿಗಳವರ ನೂರೆಂಟು ವಚನಗಳ ಸಂಗ್ರಹ
೩೫) ನಿಜಗುಣರ ಕೈವಲ್ಯ ಪದ್ಧತಿ
೩೬) ಸದಾಶಿವ ಶಾಸ್ತ್ರಿ ಕೃತ ಶಿವಯೋಗೀಶ್ವರ ಪುರಾಣ [ಸಂಸ್ಕೃತ]
೩೭) ಚೆನ್ನಬಸವ ಶಿವಯೋಗಿಗಳ ಶಿವಯೋಗ ಪ್ರದೀಪಿಕಾ [ಸಂಸ್ಕೃತ]
೩೮) ಕರಣ ಹಸುಗೆ
೩೯) ಮಿಶ್ರಾರ್ಪಣ
೪೦) ಮಂತ್ರಗೋಪ್ಯ
೪೧) ಹಿರಿಯ ಮಂತ್ರ ಗೋಪ್ಯ
೪೨) ಶಂಕರಲಿಂಗನ ಕಂದ
೪೩) ಶಿವಯೋಗ

ಸಂಗ್ರಹ

ಡಾ॥ ವಸಂತ ಪಾಟೀಲ

# ಪಂ. ನಾಗಭೂಷಣ ಶಾಸ್ತ್ರಿಗಳವರ ಜೀವನಮಾರ್ಗ

೮-೪-೧೯೦೭ ಜನನ

೧೯೧೬-'೨೫ ಅನ್ನದಾನೇಶ್ವರಮಠ, ಹಾಳಕೆರೆಯಲ್ಲಿ ಸಂಸ್ಕೃತ ಶಿಕ್ಷಣ

೧೯೨೫-೩೧ ಕಾಶಿಯಲ್ಲಿ ಸಂಸ್ಕೃತ ಅಧ್ಯಯನ

೧೯೩೨ ಗದುಗಿನಲ್ಲಿ ಅನ್ನದಾನೇಶ್ವರ ಸಂಸ್ಕೃತ ವಿದ್ಯಾಲಯ ಪ್ರಾರಂಭಿಸಿದ್ದು

೧೯೪೦ ಅಖಿಲಭಾರತ ವೀರಶೈವ ವಿದ್ಯಾಪೀಠದ ಸ್ಥಾಪನೆ

೧೯೬೭ ರಿಂದ ಸಾವಧಾನ ಪತ್ರಿಕೆಯ ಸಂಪಾದಕತ್ವ

೧೮-೪-೧೯೭೧ ಶಿವಾನುಭವ ಸಂಘ, ಗದಗ, ಸತ್ಕರಿಸಿದ್ದು

೧೯೬೧-'೮೦ ವಚನವಾಙ್ಮಯ ವಿಭಾಗ ಮತ್ತು ಬಸವಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡದಲ್ಲಿ ಕಾರ್ಯ

೧೯೭೦ ರಿಂದ ಶ್ರೀ ವಿಜಯ ಮಹಾಂತ ಶಿವಯೋಗಿಗಳವರ ಸಂಸ್ಥಾನಮಠ, ಚಿತ್ತರಗಿ-ಇಲಕಲ್ಲದಲ್ಲಿ ಪ್ರತಿವರುಷ ಶ್ರಾವಣ ಮಾಸದಲ್ಲಿ ಪ್ರವಚನ

೨೩-೭-೧೯೭೧ ಶ್ರೀ ಮ. ನಿ. ಪ್ರ. ಜಗದ್ಗುರು ಶ್ರೀ ಶಿವಲಿಂಗೇಶ್ವರ ಮಹಾಸ್ವಾಮಿಗಳವರು, ಸಂಸ್ಥಾನಮಠ, ಸಿಡಘೋಸಿ, ಸತ್ಕರಿಸಿದ್ದು

೪-೯-೧೯೭೨ ಶ್ರೀ ನಿ. ಪ್ರ. ಮಹಾಂತಸ್ವಾಮಿಗಳವರು, ಸಂಸ್ಥಾನಮಠ, ಚಿತ್ತರಗಿ-ಇಲಕಲ್ಲ, ಸತ್ಕರಿಸಿದ್ದು

೧೫-೪-೧೯೭೪ ಸ್ವಯಂಭು ಆಶ್ರಮ ನಾಣ್ಯಾಪುರ; ಶರಣ ಮಂಟಪ ದಶಮಾಪುರ ಸನ್ಮಾನಿಸಿದ್ದು

೧೦-೫-೧೯೭೯ ಕರ್ನಾಟಕ ಸರಕಾರವು ಪ್ರಶಸ್ತಿ ನೀಡಿ ಸತ್ಕರಿಸಿದ್ದು.

ಶಕೆ ೧೮೮೮ ಚೈತ್ರ ಬಹುಳ ೧೨.

ಷಷ್ಟ್ಯಬ್ದ ಸಮಾರಂಭ, ಮುರುಘಾಮಠ, ಧಾರವಾಡ

೨೭-೨-೧೯೭೮ ಶ್ರೀ ಕುಮಾರೇಶ್ವರ ಶಿವಯೋಗಿ ಸಂಘದ ದ್ವಾದಶ ವಾರ್ಷಿಕೋತ್ಸವ ಸಮಿತಿ, ಶ್ರೀ ಜಗದ್ಗುರು ಮೂರುಸಾವಿರಮಠ, ಹುಬ್ಬಳ್ಳಿ ಸನ್ಮಾನಿಸಿದ್ದು.

ಸಂಗ್ರಹ

ಡಾ|| ವಸಂತ ಪಾಟೀಲ